

ಕರ್ನಾಟಕ ಸರ್ಕಾರ

# ಕಲ್ಯಾಣ ಸ್ವಾಮಿ

## ಐತಿಹಾಸಿಕ ಕಾದಂಬರಿ




ಸಂಗೀತ ರವಿರಾಜ್

ಮೂಲ : ಶ್ರೀ ನಿರಂಜನ



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ




**'KALYANA SWAMY'** A Navel written by Niranjan in Kannada Language, Translated to Arebhashe Language by Sangeetha Ravi Raj, Hosuru. Published by 'Karnataka Arebhashe Samskrithi Mathu Sahitya Academy.

ಪ್ರಕಟಣೆ **: 2019**

ಪ್ರತಿಗಳು **: 500**

**ಬೆಲೆ : ರೂ.** Price : Rs.

**ಪುಟಗಳು :** 157+6=163





ಪ್ರಕಾಶಕರು : **ರಿಜಿಸ್ಟ್ರಾರ್**
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ.

**ಪುಸ್ತಕ ದೊರೆಯುವ ಸ್ಥಳ :**

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ,
ಕಾಫಿ ಕೃಪ ಬಿಲ್ಡಿಂಗ್, ಮಹಾತ್ಮ ಗಾಂಧಿ ರಸ್ತೆ, ಮಡಿಕೇರಿ.
ದೂ. : 08272–223055

ಮುದ್ರಣ :
ಶ್ರೀ ಕೃಷ್ಣ ಕಂಪ್ಯೂಟರ್ಸ್ & ಪ್ರಿಂಟರ್ಸ್,
ಮಡಿಕೇರಿ, ಕೊಡಗು
Ph : 08272-224919, 9448135592

# ಅಧ್ಯಕ್ಷರ ಮಾತ್

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಕಲೆ, ಸಾಹಿತ್ಯ ಮತ್ತೆ ಅರೆಭಾಷೆ ಸಂಸ್ಕೃತಿ ಕ್ಷೇತ್ರಲಿ ಸೃಜನಶೀಲ ಕೆಲ್ಸಗಳಿಗೆ ಪ್ರೋತ್ಸಾಹ ಕೊಡ್ದು ಸರಕಾರದ ಉದ್ದೇಶ. ಆ ಉದ್ದೇಶನ ಸಫಲ ಮಾಡ್ದು ನಮ್ಮ ಕೆಲ್ಸ. ಇದೇ ಕಾರಣಂದ ಅರೆಭಾಷೆಲಿ ಪುಸ್ತಕ ಬರ್ಯೆವುಕೆ ಪ್ರೋತ್ಸಾಹ ಕೊಟ್ಟ್ ಅವರ ಆಯ್ದ ಪುಸ್ತಕನ ಮುದ್ರಣ ಮಾಡಿ ಲೋಕಾರ್ಪಣೆ ಮಾಡುವ ಕೆಲ್ಸನ ಅಕಾಡೆಮಿ ಮಾಡ್ತಾ ಉಟ್ಟು.

ಹೆಸರಾಂತ ಕಾದಂಬರಿಕಾರರಾಗಿದ್ದ ನಿರಂಜನ ಅವರ 'ಕಲ್ಯಾಣಸ್ವಾಮಿ' ತ್ತೇಳುವ ಐತಿಹಾಸಿಕ ಕಾದಂಬರಿನ ಶ್ರೀಮತಿ ಸಂಗೀತ ರವಿರಾಜ್‌ನವು ಅರೆಭಾಷೆಗೆ ಅನುವಾದ ಮಾಡಿಯೊಳೊ. ಈ ಕೃತಿನ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಮುದ್ರಣ ಮಾಡಿಕೆ ಮುಂದೆ ಬಂದುಟು.

ಈ ಹಿಂದೆನ ಸಮಿತಿ ಮತ್ತೆ ಈಗನ ಸಮಿತಿ ಸೇರಿ ಇಲ್ಲಿಮುಟ್ಟ ಬೇರೆ ಬೇರೆ ರೀತಿಯ ಇಪ್ಪತ್ನಾಲ್ಕ್ ಪುಸ್ತಕಗಳ ಲೋಕಾರ್ಪಣೆ ಮಾಡಿಟು. ಸರಕಾರಂದ ನೋಂದಾವಣೆ ಆದ ಮೇಲೆ ಅಕಾಡೆಮಿ 'ಹಿಂಗಾರ'ತ್ತೇಳು ತ್ರೈಮಾಸಿಕದ ಹತ್ತ್ ಆವೃತಿಗಳ ಹೊರ ತಂದುಟು.

ಇದೀಗ ಶ್ರೀಮತಿ ಸಂಗೀತ ರವಿರಾಜ್‌ನವರ ಅನುವಾದಿತ ಕೃತಿ 'ಕಲ್ಯಾಣ ಸ್ವಾಮಿ' ತ್ತೇಳುವ ಕಾದಂಬರಿನ ಓದುಗರಾದ ನಿಮ್ಮ ಕೈಮೇಲೆ ಇಸ್ತಾ ಒಳೊ. ಮಾನ್ಯ ಓದುಗರಾದ ನೀವು ಈ ಕೃತಿನ ಓದಿ ಪ್ರೋತ್ಸಾಹ ಕೊಡುವರಿತ ನಾವು ಭಾವಿಸಿಯೊಳೊ. ಅಕಾಡೆಮಿ ಮೂಲಕ ಪ್ರಕಟ ಆಗ್ತಿದ್ದರ್‌ಂದ ಈ ಪುಸ್ತಕ ಕಮ್ಮಿ ಕ್ರಯಕೆ ನಿಮಿಗೆ ಸಿಕ್ಕಿದೆ.

ಈ ಪುಸ್ತಕನ ಪ್ರಕಟ ಮಾಡಿಕೆ ಅನುಮತಿ ಕೊಟ್ಟ ಶ್ರೀಮತಿ ತೇಜಸ್ವಿನಿ ನಿರಂಜನನವ್ಕೆ ಮತ್ತೆ ಅರೆಭಾಷೆಗೆ ಅನುವಾದ ಮಾಡಿಕೊಟ್ಟ ಶ್ರೀಮತಿ ಸಂಗೀತ ರವಿರಾಜ್‌ನವ್ಕೆ ಧನ್ಯವಾದಗ. ಪುಸ್ತಕ ಪ್ರಕಟಣಾ ಸಮಿತಿನ ಸಂಚಾಲಕರಾದ ಬಾರಿಯಂಡ ಜೋಯಪ್ಪನವುಕೆ ಮತ್ತೆ ಸಲಹಾ ಸಮಿತಿನ ಸದಸ್ಯರಿಗೆ ಅಕಾಡೆಮಿ ಋಣಿ ಆಗುಟು. ಪುಸ್ತಕ ತಕಂಡ್ ಓದುವ ಸಾಹಿತ್ಯಾಸಕ್ತರಾದ ನಿಮಿಗೆ ಧನ್ಯವಾದಗ.

**ಪಿ. ಸಿ. ಜಯರಾಮ**

ಅಧ್ಯಕ್ಷರ್.

25–07–2019

# ಮುನ್ನುಡಿ

ನಿರಂಜನರ 'ಕಲ್ಯಾಣಸ್ವಾಮಿ' ಕಾದಂಬರಿ ಅದ್ ಪ್ರಕಟ ಆದ ಕಾಲಲಿ ಹಂಙ ಸಂಚಲನನ ಉಂಟು ಮಾಡ್ದ ಪುಸ್ತಕ. ಕೊಡಗ್‌ನ ಇತಿಹಾಸದ ಒಂದ್ ಭಾಗ ಆಗಿ, ಆ ಕಾಲಲಿ ಕೊಡಗ್‌ಗೆ ಸೇರ್ದ ಸುಳ್ಯಲಿ ಬ್ರಿಟಿಷರ ವಿರುದ್ಧ ಬಂಡಾಯ ಎದ್ದ ರೈತಾಪಿ ಜನರ ಚರಿತ್ರೆನ ಹೇಳ್ವ ಈ ಕೃತಿ ತುಂಬಾ ಮಹತ್ವದ್. ಬಂಡಾಯ ಸುಳ್ಯಲಿ ಸುರು ಆದರುಸ ಅದ್ ಹರ್ಡಿಕಂಡದ್ದ್ ಕೊಡಗ್‌ಂದ ಹೊನ್ನಾವರದವರೆಗೆ ಇತ್ತ್‌ಂತ ಹೇಳ್ದು, ರೈತಂಗ ಬ್ರಿಟಿಷರ್‌ನ ಎಷ್ಟ್ ದ್ವೇಷಿಸುತ್ತಿದ್ದೊ ಎಂಬುದಕ್ಕೆ ಸಾಕ್ಷಿ ಆಗಿಟು.

1834ರ್ಲಿ ಕೊಡಗ್‌ನ ಅಕೇರಿನ ರಾಜ ಚಿಕ್ಕವೀರನ ಕೆಳಗಿಳ್ಸಿ ಈಸ್ಟ್ ಇಂಡಿಯಾ ಕಂಪೆನಿ ಬ್ರಿಟಿಷ್ ಆಡಳಿತನ ಕೊಡಗ್‌ನ ಮೇಲೆ ಹೇರ್ದಲ್ಲದೆ, ಸುಳ್ಯ, ಪುತ್ತೂರಗಳ ನೂರ ಹತ್ತ್ ಗ್ರಾಮಗಳ ಕೊಡಗ್‌ಂದ ಬೇರೆ ಮಾಡಿ ಕೆನರಾ ಜಿಲ್ಲೆಗೆ ಸೇರ್ಸಿ ಬುಟ್ಟತ್. ಅದರಂದಾಗಿ ಕೆನರಾ ಜಿಲ್ಲೆನ ಕೆಟ್ಟ ಕಂದಾಯ ವ್ಯವಸ್ಥೆ ಈ ಗ್ರಾಮಗಳಿಗೆಸ ವಿಸ್ತಾರ ಆತ್. ಇಷ್ಟ್ ಸಾಲ್ದ್‌ಂತ ಉಪ್ಪು ಮತ್ತೆ ಹೊಗೆಸೊಪ್ಪುಗಳಿಗೆ ಜಾಸ್ತಿ ಸುಂಕ ಹಾಕಿದ್ದ್ ಗಾಯದ ಮೇಲೆ ಉಪ್ಪು ಸೊರ್ಗಿದಂಗೆ ಆತ್. ಇದರ ಬ್ರಿಟಿಷರ ವಿರುದ್ಧದ ಬಂಡಾಯಕ್ಕೆ ಬಳ್ಸಿಕಂಡ ಅಪರಂಪಾರಂತ ಹೇಳ್ವ ಸ್ವಾತಂತ್ರ್ಯ ಪ್ರೇಮಿ ಜಂಗಮ ವೇಷ ಹಾಕಿಕಂಡ್ ಜನರ ಒಂದೂಗೂಡ್ಸುವ ಪ್ರಯತ್ನ ಮಾಡ್ತ್. ಅವನೊಟ್ಟಿಗೆ ಹುಲಿಕಡಿದ ನಂಜಯ್ಯಂತೇಳುವ ಒಳ್ಳೆ ವ್ಯವಹಾರತಜ್ಞನೊಬ್ಬ ಸೇರಿಕಂಡ್ ಕಲ್ಯಾಣಸ್ವಾಮಿ ಮತ್ತೆ ಪುಟ್ಟಬಸವ ಎಂಬ ಇಬ್ಬರ ಬಂಡಾಯಕ್ಕೆ ಸಿದ್ಧಗೊಳ್ಸಿದೆ. ಇತ್ತ ಸುಳ್ಯಲಿ ಕೆದಂಬಾಡಿ ರಾಮಗೌಡಂತ ಹೇಳುವವ 1200 ರೈತರ ದಂಡ್‌ನ ಬ್ರಿಟಿಷರ ವಿರುದ್ಧ ಹೋರಾಟಕ್ಕೆ ಸಜ್ಜುಗೊಳಿಸಿದೆ.

ಸಂಘಟನೆನ ಬೇರೆ ಬೇರೆ ಹಂತಗಳ್ಲಿ ಅಪರಂಪಾರ ಮತ್ತೆ ಕಲ್ಯಾಣಸ್ವಾಮಿನ ಬಂಧನ ಆದೆ. ಆಗ ಹುಲಿಕಡಿದ ನಂಜಯ್ಯ ಪುಟ್ಟಬಸವನೊಟ್ಟಿಗೆ ಕೆದಂಬಾಡಿಗೆ ಬಂದದೆ. ರಾಮಗೌಡನೊಟ್ಟಿಗೆ ಮಾತಾಡಿ ಪುಟ್ಟಬಸವನ ಕಲ್ಯಾಣಸ್ವಾಮಿಂತ ಬಿಂಬಿಸಿ ಬ್ರಿಟಿಷರ ವಿರುದ್ಧ ಬಂಡೆದ್ದವೆ. 1837ರ ಮಾರ್ಚ್ 30ಕ್ಕೆ ರೈತರ ಪಡೆ ಬೆಳ್ಳಾರೆನ ಖಜಾನೆನ ವಶಪಡ್ಸಿಕಂಡದೆ. ಮತ್ತೆ ಪುತ್ತೂರು, ನಂದಾವರ ಮಾರ್ಗಲಿ ಏಪ್ರಿಲ್ 5ಕ್ಕೆ ಮಂಗ್ಳೂರಿಗೆ ತಲ್ಪಿ ಅಲ್ಲಿನ ಗುಡ್ಡೆಲಿ ಕ್ರಾಂತಿಧ್ವಜನ ಅರ್ಳುಸುವೆ.

ಮಂಗ್ಳೂರ್ಲಿ ಇದ್ದ ಬ್ರಿಟಿಷರ್ ಬಂಡಾಯಗಾರರ ಎದುರ್ಸಿಕೆ ಆಗದೆ ಪಲಾಯನ ಮಾಡ್ವೆ. ಹನ್ನೆರಡ್ ದಿನ ಕೆನರಾ ಜಿಲ್ಲೆ ಬಂಡಾಯಗಾರರ ವಶದಲ್ಲಿದ್ದದೆ. ಹದಿಮೂರ್ನೆ ದಿನ ತಲಚೇರಿ ಮತ್ತೆ ಮುಂಬೈಗಳಂದ ಬಂದ ಭಾರಿ ಬ್ರಿಟಿಷ್ ಪಡೆಯೆದ್ರು ಸೋತ ರೈತರ ದಂಡ್ ಪಲಾಯನ ಮಾಡಕಾದೆ.

ಕಲ್ಯಾಣಸ್ವಾಮಿಂತ ಬಿಂಬಿತ ಆದ ಪುಟ್ಟ ಬಸವ, ಆತಂಗೆ ಸಹಾಯ ಮಾಡ್ದ ನಂದಾವರದ ಬಂಗರಸ ಇಬ್ಬರಸ ಗಲ್ಲಿಗೇರ್ಸುವೆ. ಕೆದಂಬಾಡಿ ರಾಮಗೌಡ ಮತ್ತೆ ಹುಲಿಕಡಿದ ನಂಜಯ್ಯಂಗೆ ಸಾಯುವರ್ಗೆ ಸೆರೆಮನೆ ವಾಸದ ಶಿಕ್ಷೆ ಆದೆ. ಇತ್ತ ಮಡಿಕೇರಿಲಿಸ ಬಂಡೆದ್ದ ಗುಡ್ಡೆಮನೆ ಅಪ್ಪಯ್ಯ ಗೌಡ ಮತ್ತೆ ಅವರ ತಮ್ಮನ ಗಲ್ಲಿಗೆ ಹಾಕಿ ಬಂಡಾಯನ ದೊಡ್ಡ ಮಟ್ಟಲಿ ತಡ್ದವೆ.

ಶ್ರೀ ನಿರಂಜನರ್ ಸುಮಾರ್ ದಾಖಲೆಗಳ ಆಧಾರಲಿ ಸುಳ್ಯದ ಬಂಡಾಯನ ಕಲ್ಯಾಣಸ್ವಾಮಿ ಕೃತಿಲಿ ಹಿಡಿದಿಸಿಯೊಳ. ಈಗ ಸಿಕ್ಕಿದಂತ ಆಧಾರಗೆಲ್ಲಾ ಅವ್ಕೆ ಸಿಕ್ಕಿದ್ದರೆ ಅವರ ಕಾದಂಬರಿ ಹಂಞ ಬೇರೆ ರೀತಿಲಿ ಇರ್ತಿತ್ತ್. ನಿರಂಜನರ್ ಬಳ್ಸಿದ ಬಾಸೆ ಲಾಯ್ಕ ಉಟ್ಟು. ಶೈಲಿ ಮನಕರ್ಗಿಸುವಂಗೆ ಉಟ್ಟು.

ನಿರಂಜನರ ಈ ಯಶಸ್ವಿ ಕಾದಂಬರಿನ ಉದಯೋನ್ಮುಖ ಕವಯತ್ರಿ ಹೊಸೂರು ಸಂಗೀತ ರವಿರಾಜ್ ಅರೆಭಾಷೆಗೆ ಅನುವಾದ ಮಾಡ್ಯೊಳ. ಅರೆಭಾಷೆ ಅಕಾಡೆಮಿನ ಸದಸ್ಯೆ ಆಗಿ ಮೂರ್ವರ್ಷ ಸೇವೆ ಮಾಡ್ದ ಸಂಗೀತಾ ಅವರ ಅನುವಾದ ಮೂಲಕೃತಿಗೆ ಒಂದು ಸ್ವಲ್ಪಸ ಚ್ಯುತಿ ಬಾರದಂಗೆ ಉಟ್ಟು. ಕನ್ನಡದ ಇನ್ನಷ್ಟ್ ಕೃತಿಗಳ ಅರೆಭಾಷೆಗೆ ಅನುವಾದಿಸಿಕೆ ಇವ್ಕೆ ಸಾಧ್ಯ ಆಗಲಿ ಅಂತ ಹಾರೈಸಿನೆ.

* * * * *

**– ಡಾ। ಪ್ರಭಾಕರ ಶಿಶಿಲ. ಬಿ.**

ಕಾಂತಮಂಗಲ.

# ಅನುವಾದಕಿಯ ಮಾತ್

ಪೊರ್ಲುನ ಬಾಸೆ ಅರೆಬಾಸೆಲಿ ಕೃತಿ ರಚಿಸಕುಂತೇಳ್ವ ಆಸೆ ಬಾಳ ದಿನಂಗಳ್ದ ನಂಗಿತ್ತ್. ನನ್ನ ಸ್ವಂತ ರಚನೆಗಳ್ಲಿ ಪುಸ್ತಕ ಮಾಡುವಷ್ಟು ಬರ್ದದ್ ತುಂಬಿತ್ಲೆ. ಆದರ್ಂದ ಸದ್ಯದ ಮಟ್ಟಿಗೆ ಒಂದೊಳ್ಳ ಪುಸ್ತಕನ ಅನುವಾದ ಮಾಡುಮಂತ ನೆನ್ಸಿಕಂಡೆ.

ಶ್ರೀ ನಿರಂಜನರ 'ಕಲ್ಯಾಣಸ್ವಾಮಿ' ಕಾದಂಬರಿ ಈ ನಿಟ್ಟ್‌ಲಿ ನೋಡಿಕಾನ ಸರಿಯಾದ ಪುಸ್ತಕಾಂತ ಆತ್. ಯಾಕೆಂತ ಹೇಳ್ರೆ ಇದೊಂದು ಐತಿಹಾಸಿಕ ಕಾದಂಬರಿ. ನಿಜ ಘಟನೆಗಳ ಆಧರ್ಲಿ ಬರ್ದಂರ್ದ ಈ ಪುಸ್ತಕದ ತೂಕ ಇನ್ನೂ ಜಾಸ್ತಿ. ಅಲ್ಲದೆ ನಾನು ಒಬ್ಬ ರೈತ ಮಹಿಳೆಯಾಗಿ ಹೇಳ್ದುದಿದ್ದರೆ ನಾವುಗೆ ಸ್ವಾತಂತ್ರ್ಯ ಸಿಕ್ಕಕ್ಕುಂತ ರೈತರ್ ಹೋರಾಟ ಮಾಡ್ದ್ ಭಾರಿ ಹೆಮ್ಮೆನ ವಿಷ್ಯ. ಇಷ್ಟ್ ಅಲ್ಲದೆ ನಂಗೆ ಇನ್ನ್ ಈ ಪುಸ್ತಕದ ಬಗ್ಗೆ ಖುಷಿಕೊಟ್ಟ ವಿಚಾರಂತ ಹೇಳ್ರೆ, ಈ ಬಂಡಾಯ ಎದ್ದ ರೈತರ್ ಕೊಡಗ್, ದಕ್ಷಿಣ ಕನ್ನಡ ಮತ್ತೆ ಇವೆರಡ್ ಜಿಲ್ಲೆಗಳ ಗಡಿಭಾಗದ ಜನ. ಈ ಕಾದಂಬರಿಲಿ ನಾವು ದಿನಾ ಓಡಾಡ್ವ ಮಡಿಕೇರಿ, ಸಂಪಾಜೆ, ಚೆಂಬು, ಪೆರಾಜೆ, ಸುಳ್ಯ, ಬೆಳ್ಳಾರೆ ಇನ್ನ್ ಸುಮಾರ್ ಊರ್‌ಗಳ ರೈತರ ಹೋರಾಟದ ಕತೆ ಕೇಳಿಕಾನ ಮನಸ್ಸ್ ರೋಮಾಂಚನಗೊಂಡದೆ. ಇಷ್ಟ್‌ಸ ಅಲ್ಲದೆ ಈ ಪರಿಸರಲಿ ವಾಸ ಮಾಡ್ವ ಎಲ್ಲಾ ಬಾಸೆ ಮಾತಾಡುವ ಜನರೊಟ್ಟಿಗೆ ರಾಮಗೌಡ, ಅಣ್ಣಿಗೌಡ ಇನ್ನ್ ಹಲವಾರ್ ಗೌಡ್ರ್‌ಗಳ ಹೆಸ್ರ್ ಓದಿಕಾನ, ಇವು ಹೆಂಗಿದ್ದರು ನಮ್ಮ ಅರೆಬಾಸೆ ಗೌಡ್ರ್‌ಗಳೆ ಆಗಿದ್ದವೆ ಎಂಬ ವಿಚಾರ ನಮ್ಮರಿವಿಗೆ ಬಂದದೆ. ನಮ್ಮ ಊರ್ಲಿ ವಾಸಿಸ್ತ್‌ತ್ತಿದ್ದ ಎಲ್ಲಾ ಬಾಸೆ ಮಾತಾಡುವ ಜನ ಸ್ವಾತಂತ್ರ್ಯಕ್ಕೆ ಹೋರಾಟ ಮಾಡ್ಯೊಳಂತ ನಾವುಗೆ ಗೊತ್ತಾದೆ.

ನಮ್ಮ ಪೂರ್ವಿಕರ್ ಮಾಡ್ದಂತಹ ಒಂದೊಳ್ಳೆ ಕೆಲ್ಸ ಇಂದ್‌ನ ದಿನ ವಾಪಾಸು ಎಲ್ಲವುಕೆ ಗೊತ್ತಾಗಲಿ ಎಂಬ ದೃಷ್ಟಿಲಿ ಈ ಕಾದಂಬರಿನ ಅನುವಾದ ಮಾಡ್ಯೊಳೆ ಹೊರ್ತು ಬೇರೆ ಯಾವ ಕಾರಣಂದ ಅಲ್ಲ. ಹಂಗೆತ ಹೇಳಿ ಎಲ್ಲಾ ರೈತರ್ ಸ್ವಾತಂತ್ರ್ಯಕ್ಕೆ ಆಸೆಪಟ್ಟಳೋ ಅಂತೇನ್ ಇಲ್ಲೆ. ಬಿಳಿಯವ್ಕೆ ಸಹಾಯ ಮಾಡ್ದ ದೇಶದ್ರೋಹಿಗ ಸ ನಮ್ಮ ನೊಡುಲಿ ಅಂದ್ ಇದ್ದೊ. ಯಾವುದೇ ವಿಚಾರ ಆದರು ಸ ಅದರ್ಲಿ ಒಳ್ಳೆದ್–ಹಾಳ್‌ಂತ ಎರ್ಡ್ ವಿಚಾರ ಇರುವಂತದ್ದ್ ಅಂದ್‌ಂದ ಇಂದ್‌ನವರೆಗೆ ಬೆಳ್ಕಂಡ್ ಬಂದುಟು. ಧರ್ಮ–ಅಧರ್ಮಗಳ ಹೋರಾಟ ಇಂದ್‌ನು ಬೆಳ್ಕಂಡ್ ಉಟ್ಟು. ಇದರ ಹೋಗಲಾಡ್ಸಿಕೆ ಯಾವ

ಸಕ್ತಿಂದಲು ಸಾಧ್ಯ ಇಲ್ಲೆ.

ಈ ಕೃತಿನ ಅನುವಾದ ಮಾಡಿ ಪ್ರಕಟಣೆಗೆ ಅನುಮತಿ ಕೊಟ್ಟ ಶ್ರೀಮತಿ ತೇಜಸ್ವಿನಿ ನಿರಂಜನವ್ಕೆ ನನ್ನ ಕೃತಜ್ಞತೆಗ.

ಈ ಕಾದಂಬರಿ ಎರಡೆರಡ್ ಸಲ ಬರ್ದದುರುಸ ಅರೆಬಾಸೆ ಶಬ್ದಗ ಇನ್ನೂ ಹೊಳ್ಕಂಡೇ ಹೋಗ್ತಿದ್ದೊ. ಇದ್ ನನ್ನ ಸುರುನ ಅರೆಬಾಸೆ ಕೃತಿ ಆದ್ದಂರ್ದ ಇದರ್ಲಿ ಸಂಪೂರ್ಣ ಅರೆಬಾಸೆ ಶಬ್ದಗ ಇರ್ದುಂತೇಳ್ವ ವಿಶ್ವಾಸ ನಾ ಕೊಡ್ದುಲೆ. ಆದರು ನನ್ನ ಅರೆಬಾಸೆ ಜ್ಞಾನಕ್ಕೆ ಮೀರಿ ಪ್ರಯತ್ನ ಮಾಡ್ಯೊಳೆ. ಈ ಕೃತಿಗೆ ಮುನ್ನುಡಿ ಬರ್ದಂತಹ ನಾಡ್‌ನ ಖ್ಯಾತ ಸಾಹಿತಿ ಡಾ. ಪ್ರಭಾಕರ ಶಿಶಿಲ, ಸುಳ್ಯ ಇವ್ಕೆ ಅನಂತ ಕೃತಜ್ಞತೆಗಳ ಅರ್ಪಿಸಿನೆ. ಈ ಪುಸ್ತಕಕ್ಕೆ ಬೆನ್ನುಡಿ ಬರ್ದ್ ಬೆನ್ನ್ ತಟ್ಟಿದ ಶ್ರೀ ಬಾರಿಯಂಡ ಜೋಯಪ್ಪನವ್ಕೆ ನಾ ಋಣಿ ಆಗೊಳೆ. ಹಂಗೆನೆ ಅರೆಬಾಸೆ ಅಕಾಡೆಮಿ ಅಧ್ಯಕ್ಷರಿಗೆ, ಪುಸ್ತಕ ಸಮಿತಿಯವ್ಕೆ ಮತ್ತೆ ಎಲ್ಲಾ ಸದಸ್ಯರುಗಳಿಗೆ ಕೃತಜ್ಞತೆಗಳ ಹೇಳ್ತಾ ಒಳೆ. ಇದರ ಹಸ್ತಪ್ರತಿನ ತಿದ್ದಿ ಹಲವು ಅರೆಬಾಸೆನ ಪದಗಳ ಸರಿಯಾಗಿ ಹೇಳ್ದಂತ ನಮ್ಮ ಊರ್‌ನ ಜಿ. ವಿ. ಗಣಪಯ್ಯ ಇವ್ಕೆ ಕೃತಜ್ಞತೆಗ. ನಮ್ಮ ಬಾಸೆ ಅರೆಭಾಸೆಲಿ ಹೆಚ್ಚೆಚ್ಚು ಬರಿಯಕುಂತ ನಂಗೆ ಯಾಗೊಳು ಪ್ರೋತ್ಸಾಹ ಕೊಡುವ ಎಂ. ಜಿ. ಕಾವೇರಮ್ಮನವರ ಈ ಸಂದರ್ಭಲಿ ನೆನ್ಸಿಕಣೆ. ಅರೆಭಾಸೆನ ಮಾನ್ಯತೆ ಅರೆಭಾಸೆ ಕೃತಿಗಳ ಮೂಲಕ ಹೆಚ್ಚು ಉಳ್ದದೆ ಎಂಬುದು ಸತ್ಯ. ಆದರ್‌ಂದ ಅರೆಬಾಸೆ ಕೃತಿಗಳ ಹೆಚ್ಚೆಚ್ಚ್ ತಕಂಡ್ ಎಲ್ಲವು ಓದಕು. ಇದ್ ನನ್ನ ಸುರುನ ಅನುವಾದ ಕೃತಿ, ಎಲ್ಲವು ಓದಿ ಪ್ರೋತ್ಸಾಹಿಸಕು ಅಂತ ಈ ಮೂಲಕ ಕೇಳಿಕಣೆ.

**–ಸಂಗೀತ ರವಿರಾಜ್**

ಹೊಸೂರು.



**ತುಂಬಿಕಂಡಿದ್ದ** ಕಾಡ್‌ನ ನೊಡುಲಿ ತಿಂಗಳ ಬೊಳ್ಪ್ ಹಾಲ್ ಹೊಯ್ದಂಗೆ ಕಾಣ್ತಿತ್ತ್. ಕಾಡ್ ಕಡ್ದ್ ಬೊಳ್ಳಡೆ ಮಾಡ್ದ ಕಡೆ ಹಾಲ್ ಹೆಪ್ಪುಗಟ್ಟಿ ನಿತ್ತಂಗೆ ಕಾಣ್ತಿತ್ತ್. ಮರದ ಎಲೆಗಳ ಅಡ್ಡಲಿ ಚಂದ್ರ ಕಣ್ಣಾಮುಚ್ಚಾಲೆ ಆಟ ಆಡ್ತಿತ್ತ್. ಬಿಳಿ ಮೋಡಂಗ ನಿಮಿಷನು ಪುರುಸೊತ್ತು ಇಲ್ಲದಂಗೆ ಉತ್ತರ ದಿಕ್ಕ್‌ನ ಕಡೆ ಓಡ್ತಿದ್ದೊ. ಮರಗಳಿಗೆ ಕಿಳಿ ಕಿಳಿ ಮಾಡಿಕಂಡ್ ಒಂದೇ ಸಮ ಚಳಿಗಾಳಿ ಬೀಸ್‌ತ್ತಿತ್ತ್.

ನೊಡು ಮನೆಲಿ ಅಗ್ಗಿಷ್ಟಿಕ್ಕೆ ಉರಿತ್ತಿತ್ತ್. ಕೆಂಡಂಗ ಹೊಳಪುತ್ತಿತ್ತ್. ಅಲ್ಲೇ ಹಕ್ಕಲೆ ಗೋಡೆಗೊರಂಗಿ ಗಿರಿಜವ್ವ ಸುಮ್ಮನೆ ಕುದ್ದಿತ್ತ್. ಮನೆಲಿದ್ದ ಇನ್ನೊಂದು ಅಜ್ಜಿ ಮಾತ್ರ ಪರ್ಚಿಕಂಡ್ ಇತ್ತ್. ಅದ್ ಗಂಗವ್ವ. ಗಿರಿಜವ್ವನ ಅತ್ತೆ. ಎರ್ಡ್ ವರ್ಷಂದ ಮಂಜ ಬಂದದೆ ಅಂತ ಎದುರು ನೋಡಿಕಂಡೆ ಇತ್ತ್ ಅಮ್ಮ. ಕಂಬುಳಿನ ಗಟ್ಟಿಲಿ ಹೊದ್ದ್‌ಕಂಡ್ ಗೋಡೆನ ತಬ್ಬರ್ಸಿಕಂಡ್ ಹೊರಗೆ ಬಾತ್. ಕಟ್ಟಳೆ ದಾಟಿದ ಮೇಲೆ ಜಗಲಿ (ಚಿಂಟೆ) ಬಾತಾ? ಇದ್ ಜಗಲಿನಾ? ಜಾಲ್‌ಗಿಳಿವ ಮೆಟ್ಲಾ? ಅಂತ ಕಾಲ್‌ಗಳಿಗೆ ಸಂಶಯ ಬಾತ್. ಪರೆ ತುಂಬಿದ ಕಣ್ಣ್‌ಗ ಕತ್ತಲೆನಾ ಕುತ್ತಿದಂಗೆ ನೋಡಿ, ಕುಂಞ ಆಕಂಡ್ ದೂರ ನೋಡ್ತಿತ್ತ್. ಹಂಗೆನೇ ನೋಡಿಕಂಡ್

ಇರಿಕಾನ ಬೊಚ್ಚಿ, ಉದ್ದಕ್ಕೆ ಸೇಂಕಿಕಂಡ್ ಅಲ್ಲೆ ನೆಲಲಿ ಕುದ್ದತ್ ಗಂಗವ್ವ.

ಮನಸ್‌ನ ಕಳವಳ ಯಾಗೋಳ್‌ನಂಗೆ ಬಾಯಿಲಿ ಬಾತ್.

"ಪುಟ್ಟ ಬಸ್ಯಾ ಬಾತ್ಲೆನಾ... ಪುಟ್ಟ ಬಸ್ಯಾ ಬಾತ್ಲೆನಾ.... ಬಂದ್ ಮಲ್ಕಣಿ ಅತ್ತೆಮ್ಮಾ. ತುಂಬಾ ಹೊತ್ತಾತ್. ಗಿರಿಜವ್ವ ಕುದ್ದ್‌ಕಂಡಿದ್ದಲಿಂದಲೇ ಹೇಳ್ತ್. ಸೊಸೆ ಹೇಳ್ದ ಕೂಡ್ಲೆ ಎದ್ದ್ ಬಂದದೆನಾ ಗಂಗವ್ವ? ಅವ್ವ ಯಾಗೋಳ್‌ನಂಗೆ ಮರ್‌ಡಿಕೆ ಸುರು ಮಾಡ್ತ್. ಸಣ್ಣ ಸ್ವರಲಿ ಮರ್ಡುದು, ಒಳಗಿನ ಬೇನೆ ಕರ್‌ಗಿ ಮೆಲ್ಲಮೆಲ್ಲನೆ ಸ್ವರ ಹೊರಗೆ ಬರ್‌ತ್ತ್. ಗಿರಿಜವ್ವಂಗ? ದೊಂಡೆ ಕಟ್ಟಿಕಂಡ್ ಬಾತ್. ಅವ್ವ ಎದ್ದ್ ಅತ್ತೆನ ಹತ್ರ ಹೋತ್. ಅಲ್ಲಿ ಆ ಹಣ್ಣ್ ಜೀವನ ಒತ್ತಿಕಂಡ್ ಕುದ್ದತ್. ಗಂಗವ್ವನ ಸುಕ್ಕು ಕಟ್ಟಿದ ಕೈ ಸೊಸೆನ ರಟ್ಟೆನ ಮುಟ್ಟಿತ್. ಮೈನ ತಡವಿತ್. ಮೋರೆನತ್ರ ಕೈ ತಕಂಡ್ ಹೋಕನ ಕಣ್ಣ್‌ಲಿ ನೀರ್ ಬಂದದ್ ಗೊತ್ತಾಗಿ ನೀನ್ಯಾಕೆ ಮರ್‌ಟಿಯಾ? "ಮರ್‌ಡ್‌ಬೇಡ"

"ಇಲ್ಲೆ ಅತ್ತೆಮ್ಮ" ಆ ಉತ್ತರ ಹೇಳಿಕನ ಮರ್ಡುದು ಸರಿ ಗೊತ್ತಾತ್ ಅತ್ತೆಗೆ. ಅತ್ತೆ ಅವಳ ಬಾಚಿ ತಬ್ಬಿಕಂಡತ್. ಗಿರಿಜಸ ಎಳೆಕೂಸುನಂಗೆ ಗಂಗವ್ವನ ಎದೆಲಿ ಮೋರೆ ಇಸಿ ಜೋರು ಮರ್‌ಟತ್. ಒಂದೇ ತರ ದುಃಖದ ಎರ್ಡ್ ಜೀವಂಗ ಬೇನೆ ಹಂಚಿಕೊಂಡೊ. ಹೊರಗೆ ಶಬ್ದ ಮಾಡಿಕಂಡ್ ಗಾಳಿ ಬೀಸಿಕಂಡೆ ಇತ್ತ್.

ಅತ್ತೆ ಕೇಳ್ತ್ "ಇಂದ್ ಹುಣ್ಣಿಮೆ ಅಲ? 'ಹೌದು ಅತ್ತೆ" ಯಾಕೆ ತಿಂಗಳ ಬೆಳ್ಕ್ ಇಲ್ಲೆ? ಮೋಡ ಮುಚ್ಚಿಟಾ? ಮಳೆ ಬರುವಂಗೆ ಉಟ್ಟಾ?

ಬೆಳ್ಕ್ ಲಾಯ್ಕಲಿ ಉಟ್ಟು. ಮೋಡನು ಮುಚ್ಚಿತ್ಲೆ. ಅರ್‌ಕಿಲ್ ಈಗ ಸುರು ಆಗಿಟು ಅಷ್ಟೆ. ಇಷ್ಟ್ ಬೇಗ ಎಲ್ಲಿಂದ ಮಳೆ ಬಾದು? ಗಂಗವ್ವನ ಪಾಲಿಗೆ ಎಲ್ಲಸ ತಿರ್ಗ್‌ಮುರ್ಗ್ ಆಗಿಟು. ಇದೆಲ್ಲ ಗೊತ್ತಿದ್ದ ಗಿರಿಜವ್ವ ಅತ್ತೆನ ಮನಸ್‌ಗೆ ಬೇನೆ ಮಾಡಿಕೆ ಆಗದ್ ಅಂತ 'ಹೂಂ' ಅಂತ ಹೇಳ್ದೆ.

ಮಳೆ ಬಂದರೆ ಮಂಜ ಚೆಂಡಿ ಆದೆಂತ ಅಮ್ಮನ ಹೃದಯ ಪೇಚಾಡ್ತ್. ಮತ್ತೆ ಏನೋ ನೆಂಪು ಮಾಡಿಕಂಡಂಗೆ ಮನಸ್‌ಲಿ ಗುಣ್ಸಿನೋಡ್ತ್.

ಅಲ್ಲಾ ಸುಗ್ಗಿ ಮುಗ್ದ ಮೇಲೆ ಮಳೆ ಬಾದೊಲಾ? ಮಾವಿನಕಾಯಿಸ ಬೆಳ್ತ್‌ಲೆ ಅಲ್ಲ ಇನ್ನ್?

ಅತ್ತೆ ವಾಸ್ತವ ಪ್ರಪಂಚಕ್ಕೆ ಇಳ್ದದ್ ನೋಡಿ ಸೊಸೆಗೆ ಸಮಾಧಾನ ಆತ್. ಹೌದು ಬರೇ ಮೋಡ, ಮಳೆ ಮಾತ್ರ ಬರುವಂಗೆ ಕಾಂಬಲೆ.

ಬರದಿದ್ದರೆ ಸಾಕ್. ಪುಟ್ಟಬಸ್ಯಾ ಈಗೆಲಿಟ್ಟೊ? ಎಷ್ಟ್ ಕಷ್ಟ ಪಟ್ಟದೆನೋ

ಮಂಜ.

ವಾಪಾಸ್ ಅದೇ ಯೋಚನೆ ಗಂಗವ್ವಂಗೆ. ಸೊಸೆ ಸುಮ್ಮನೆ ಉಟ್ಟುಂತ ಅತ್ತೆನೇ ಮಾತಾಡ್ತ್.

"ಅಲ್ಲಾ ಒಬ್ಬ ಆದ್ರ್ ಬರ್ಬೇಡನಾ ಈ ದಾರಿಲಿ? ಏನಾಗುಟ್ಟು ಅಂತ ಒಂದು ಸುದ್ದಿಸ ಸಿಕ್ಕುದು ಬೇಡನಾ? ಶಿವ ಹಿಂಗೆ ಮಾಡಿಕೆ ಆಗದ್.

ಆ ಮಾತ್‌ನ ಗಿರಿಜೆಸ ಎಷ್ಟೋ ಸರ್ತಿ ನೆನ್ಸಿಕಂಡಿತ್ತ್. ಗಂಡ ಎಲ್ಲಿಟ್ಟು ಅಂತಾದ್ರ್ ಗೊತ್ತಾಗಿದ್ದರೆ? ಅದಂರ್ದಂದಲೇ ಮನ್‌ಸ್‌ಗೆ ಸುಮಾರು ನೆಮ್ಮದಿ ಆಗಿರ್‍ದು.

ಭಾರವಾಗಿ ಬೊಗ್ಗಿದ ತಲೆ ಅತ್ತೆನ ತೊಡೆ ಮೇಲೆ ಒರ್ಗಿತ್. ಕಂಬಳಿನ ಅವ್ಳ ಮೈಗೆಸ ಹೊದ್ದ್‌ಸಿ ಗಂಗವ್ವ ಕೇಳ್ತ್ "ನಿದ್ದೆ ಬಾತಾ?"

"ಇಲ್ಲೆ"

ಬೊಳ್ಪು, ಕತ್ತಲೆನ ಲೆಕ್ಕ ಹಾಕಿಕಂಡ್ ಕಾಲ ಕಳೆವ್ಕೆ ನಿದ್ದೆ ಹೆಂಗೆ ಬರೊಕು?

ಅವ್ಳಿಗೆ ಮಾತ್ರ ಮಸುಕಾದ ತಿಂಗಳ್ ಬೆಳ್ಕ್‌ನ ನೋಡಿಕಂಡ್ ಕಾಡ್‌ನ ಕಲರವಕ್ಕೆ ಕಿವಿಗೊಟ್ಟ್‌ಕಂಡ್ ಗಂಗವ್ವ ಹಳೆ ನೆಂಪುಗಳ ಗಂಟ್ ಗಂಟಾದ ಎಳೆಗಳ ಒಂದೊಂದಾಗಿ ಬುಡ್ಸಿಕೆ ಸುರು ಮಾಡ್ತ್.

ಮೂವತ್ತು ವರ್ಷದ ಹಿಂದೆ ಹಿಂಗೆನೆ ಕಾದ್ ಕುದ್ದ ರಾತ್ರೆಗ. ಹತ್ತ್ ವರ್ಷದ ಮಗಳ್ ವೀರಮ್ಮ. ಪುಟ್ಟಬಸವನ ಬಸುರುಲಿ ಹೊತ್ತ ನಾನ್ ಮತ್ತೆ ನನ್ನತ್ತೆ. ಗಟ್ಟಿಮುಟ್ಟಾಗಿದ್ದ ಜೀವ ಆ ಮುದುಕಿ. ಆಕೆ ಯಾಗೊಳು ತನ್ನ ಮಂಜನ ದಾರಿ ನೋಡ್ತಿತ್ತ್. ದೊಡ್ಡ ವೀರರಾಜನ ಆಪ್ತ ಕೋಟೆಲಿ ಒಬ್ಬ ಸರದಾರನಾಗಿ ಕೆಲಸ ಮಾಡಿತ್ ವೀರಮ್ಮನ ಪೊಪ್ಪ. ಅಂವ ನಾಲ್ಕಾರು ತಿಂಗ್ಳ್‌ಂದ ಮನೆಗೆ ಬಂದಿತ್ಲೆ. ಮನೆಲಿ ಹೆಣ್ಣ್ ಬಸುರಿ ಅಂತ ಗ್ಯಾನನಾದರು ಬೇಡನಾ ಇಂವಂಗೆ? ಪರಚ್‌ತ್ತಿತ್ತ್ ಅತ್ತೆ. ನೀನ್ಯಾಕೆ ಎದ್ದ್ ಕುದ್ದೊಳ ಹೋಗಿ ಮಲ್ಕ ಅಂತ ಸೊಸೆಗೆ ಹೇಳ್ತಿತ್ತ್.

ಹಂಗೆನೆ ಎಷ್ಟೋ ರಾತ್ರಿ, ಎಷ್ಟೋ ಬೊಳ್ಪು ಕಳ್ದ ಮೇಲೆ ಒಂದು ದಿನ ಆ ಸ್ಥಾನಂದ ಓಲೆಕಾರ ಬಾತ್. ಅಂವ ತಂದದ್ ವೀರಮ್ಮನ ಪೊಪ್ಪ ಸತ್ತ ಸುದ್ದಿನ.

"ಬಸವರಾಜಪ್ಪನವು ಎರ್ಡು ವಾರದ ಹಿಂದೆ ಅಕಾಲ ಸಾವಿಗೆ ಗುರಿಯಾದೋ ಅವ್ವಾವರೆ"

ಅಪಮೃತ್ಯುನ? ವೀರ ಸರದಾರಂಗೆ ಅಪಮೃತ್ಯು? ಏನಾತ್? ಅರಸಂಗೆ ಬೇಕಾಗಿದ್ದ ಆ ಧೀರಂಗೆ ಏನಾತು?

ಯಾವ ನೀಚನ ಕತ್ತಿ ಅವಂಗೆ ಕುತ್ತಿತ್? ಯಾವ ನೀಚನ ಗುಂಡು ಅವಂಗೆ ತಾಂಗಿತ್? ಹೇಳಿಕೆ ನಾಲಿಗೆ ಹೊರಳುದ್ಲೆ ಅವ್ವ. ಮಹಾರಾಜಂಗೆ ಕಾಗದ ಬರ್ದೊಳೊ.

ನಮ್ಮ ನೆಚ್ಚಿನ ದೋಸ್ತಿಯಾದ ಸರದಾರ ಬಸವರಾಜಪ್ಪನವರ ತಾಯಿಗೆ ಮತ್ತು ಹೆಣ್ಣ್‌ಗೆ.

'ರಾಜಕಾರ್ಯದ ಮೇಲೆ ಬಸವರಾಜಪ್ಪ ನಾಲ್ಕುನಾಡಿಗೆ ಹೋಗಿತ್ತ್. ಅಲ್ಲಿ ಕತ್ತಲೆಗೆ ಗೆಳೆಯರೊಟ್ಟಿಗೆ ಕೂಡಿಕಂಡ್ ಆ ಮಾತ್, ಈ ಮಾತ್ ಬಾಕನ ಒಂದು ತಪ್ಪು ನಡ್ದ್ ಹೋತ್. ಕುಡ್ದ ಅಮಲ್‌ಲಿ ಒಬ್ಬ ಅರಸನ ವಿಷಯನ ಕೆಟ್ಟದಾಗಿ ಮಾತಾಡ್ತ್. ಕೂಡ್ಲೆ ಅವನ ಕೆನ್ನೆಗೆ ಪೆಟ್ಟು ಕೊಟ್ಟತ್ ಬಸವರಾಜಪ್ಪ. ಆದರೆ ಬೊಳ್ಪಾಕನ ಬಸವರಾಜಪ್ಪನ ಸಾಯ್ಸಿ ಆಗಿತ್ತ್. ನಿದ್ದೆ ಮಾಡ್ತಿದ್ದವನ ಕುತ್ತಿಗೆನ ಕಡ್ದ್ ಹಾಕಿದ್ದೊ. ಹಿಂದೆನ ದಿನ ರಾತ್ರಿ ಅವಂದ ಅವಮಾನ ಆದವು ಮತ್ತೆ ಅವರ ಸಂಗಡ ಇದ್ದವು ಕಾಣೆಯಾಗಿದ್ದೊ. ಅವು ಆ ದೇಶನೆ ಬುಟ್ಟು ಮೈಸೂರ್‌ನ ಕಡೆ ಓಡಿರಕು ಅಂತ ಗ್ಯಾರಂಟಿಯಾಗಿತ್ತ್.

ಕರಳ್ ಕಿತ್ತ್ ಬರುವಂಗೆ ಮರ್ಡ್ತಿದ್ದ ಆ ಇಬ್ಬರು ಹೆಂಗಸರ, ಅವ್ವ, ಅಮ್ಮ ಅಂತ ಹೇಳಿಕಂಡ್, ಎಳೆಗೂಡೆ ವೀರಮ್ಮನಸ ಸಮಾಧಾನ ಮಾಡಿಕಂಡ್ ರಾಜ ಕಳ್ಸಿದ ಇಸ್ತಿಹಾರನ ಓದಿ ಹೇಳ್ತ್ ಓಲೆಕಾರ.

ಅರಸನ ವಿಶೇಷ ಕರುಣೆ ಆ ಸಂಸಾರದ ಮೇಲಿತ್ತ್. ಆ ಜಾಗನ್ನೆಲ್ಲಾ ಬಸವರಾಜಪ್ಪನ ಕುಟುಂಬಕ್ಕೆ ಉಂಬಳಿಯಾಗಿ ರಾಜ ಬುಟ್ಟ್‌ಕೊಟ್ಟಿತ್ತ್. ಒಂದು ಸಾವಿರ ವರಹ ದುಡ್ಡು ಸಹ ಇತ್ತ್.

ಅದು ಏನಿದ್ದರೇನ್? ಎಷ್ಟಿದ್ದರೇನ್? ಹೆತ್ತ ತಾಯಿಗೆ ಮಂಜ ಸಿಕ್ಕಿದೆನಾ? ಯಮನ ದೂತರು ಕಿತ್ತ್‌ಕಂಡ ನನ್ನ ತಾಳಿ ಭಾಗ್ಯ ಮತ್ತೆ ಸಿಕ್ಕಿದೆನಾ? ವೀರಮ್ಮಂಗೆ ಪೊಪ್ಪ ಬಂದದೆನಾ? ನನ್ನ ಬಸುರುಲಿ ಇರುವ ಕೂಸಿಗೆ....

ಹಂಗೆ ಗಂಗವ್ವಂಗೆ ಪುಟ್ಟಬಸವ ಹುಟ್ಟಿದ್ ವೀರ ಅಂತ ಹೆಸರ್ ಮಾಡ್ದ ಅಪ್ಪನ ಮೋರೆನ ಕಾಣದ ಕೂಸು. ನನ್ನ ಮಂಜನೆ ಸೊಸೆನ ಬಸುರಲಿ ಮತ್ತೆ ಹುಟ್ಟಿದೆಂತ ನೆನ್ಸಿ ಅವ್ವ ಪುಟ್ಟ ಬಸವನ ಲಾಲನೆ ಪಾಲನೆ ಮಾಡ್ತ್. ಆ ಹೈದ ಅವ್ವನ ಬಾಯಿಲಿ ಕೇಳ್ದೆಲ್ಲಾ ಪೊಪ್ಪನ ಸಾಹಸದ ವೀರ ಕಥೆಗಳ್ನೆ.

ಕೊಂಚೆ ಮಾತ್, ಸರಿಯಾಗಿ ಮಾತಾಡಿಕೆ ಆದ ಕೂಡ್ಲೆ ಪುಟ್ಟಬಸವ ಹೇಳ್ತಿತ್ತ್.

ದೊಡ್ಡವ ಆದ ಮೇಲೆ ನಾನು ರಾಜರತ್ರ ಹೋನೆ. ಕುದುರೆ ಮೇಲೆ ಕುದ್ದನೆ. ನನ್ನ ಪೊಪ್ಪನ ಕೊಂದವರೊಟ್ಟಿಗೆ ಯುದ್ಧ ಮಾಡ್ನೆ.

ಮಂಜನ ಮಾತ್ ಕೇಳಿಕನ ನಂಗೆ ಹೆಮ್ಮೆಸ ಆಗ್ತಿತ್ತ್. ಹೆದ್ರಿಕೆಸ ಆಗ್ತಿತ್ತ್.

ಮತ್ತೆ ವೀರಮ್ಮಂಗೆ ಮದುವೆ ಆತ್. ಶ್ರೀಮಂಗಲ ನಾಡ್‌ಲ್ಲಿದ್ದ ಗಂಡನ ಮನೆಗೆ ಅವ್ಳು ಹೋತ್.

ಇದ್ ಇಪ್ಪತ್ತೈದ್ ವರ್ಷದ ಹಿಂದೆನ ಮಾತ್. ಹತ್ರದ ಹಳ್ಳಿಂದ ಕೆಲ್ಸದವು ಬಂದ್ ಸಾಗುವಳಿ ಮಾಡ್ತಿದ್ದೊ. ಪುಟ್ಟಬಸವಂಗೆ ಅಕ್ಷರಾಭ್ಯಾಸ ಆತ್. ವಾರಕ್ಕೆ ಒಮ್ಮೆ ನಾಲ್ಕ್‌ಮೈಲ್ ದೂರಂದ ಐಗಳೊಬ್ಬರ್ ಬಂದ್ ಅವಂಗೆ ಪಾಠ ಹೇಳ್ತಿದ್ದೊ.

ಕವಣೆ ಬೀಸುದು, ಮರಕ್ಕೆ ಹತ್ತುದು, ಬೇಟೆಯಾಡ್ದು ಗುರುಗ ಇಲ್ಲದೆನೆ ಅವ ಕಲ್ತತ್ತ್.

ಪುಟ್ಟಬಸವಂಗೆ ಹದಿನೈದು ವರ್ಷ ಆಕನ ಅವ್ವ ಸತ್ತತ್. ಆ ಮೇಲೆ ಮಂಜನು ನಾನು ಒಟ್ಟಿಗೆ ಕಳ್ದ ದಿನಂಗ...

ಅಪ್ಪನಂಗೆನೆ ದೊಡ್ಡ ಹಣೆ, ಉದಾಸೀನ ಆದಂಗೆ ಇದ್ದ್ ಒಮ್ಮೆಲೆ ತೀಕ್ಷ್ಣ ಆಗ್ತಿದ್ದ ಕಣ್ಣುಗ. ಎದ್ದ್ ಕಾಣ್ತಿದ್ದ ಗಲ್ಲ, ಎಣ್ಣೆ ಕಪ್ಪು, ಚುರುಕು ಇತ್ಲೆ ಹೈದ.

ಅವ್ವ ಇರಿಕಾನ ಮುಟ್ಟ ಪುಳ್ಳಿಗೆ ಹೇಳ್ತಿತ್ತ್.

ನೀನ್ ಮನೆ ಬುಟ್ಟ್ ಎಲ್ಲಿಗೆ ಹೋಕೆ ಇಲ್ಲೆ ಆಂ? ಗಂಗವ್ವ ಆ ಹೆದ್ರಿಕೆನ ಸೆರಗ್‌ಲಿ ಕಟ್ಟಿಕಂಡೆ ಇತ್ತ್. ಹರೆಯದ ಮಕ್ಕಳೊಟ್ಟಿಗೆ, ನೆರೆಹಳ್ಳಿಯ ಹೈದಂಗಳೊಟ್ಟಿಗೆ ಅಂವ ಮಾತನಾಡಿಕಂಡಿರಿಕಾನ ಅಮ್ಮ ಮರೆಲಿ ನಿಂತ್ ಕಿವಿಗೊಡ್ತ್‌ತ್ತಿತ್ತ್.

ಅರಸರ, ಯುದ್ಧದ, ಶತ್ರುಗಳ ಮಾತೆಲ್ಲ ಇರ್ತಿತ್ತ್. ಆ ಮಾತ್‌ಗೆಲ್ಲಾ ದೊಡ್ಡವು ಆಡ್ತಿದ್ದ ಮಾತ್‌ಗಳ ಪ್ರತಿಧ್ವನಿ ಮಾತ್ರ...

ಮದುವೆ ಮಾಡ್ರೆ ಮಂಜ ಎಲ್ಲಿಗು ಹೊರ್‌ಡಿಕಿಲ್ಲೆ ಅಂತ ಗಂಗವ್ವ ನಂಬಿಕಂಡ್ ಇತ್ತ್. ಪುಟ್ಟ ಬಸವಂಗೆ ಇಪ್ಪತ್ತು ತುಂಬುವ ಮೊದಲೆ ಆತ ಮದುಮಜ ಆತ್. ಅವನ ಕೈ ಹಿಡ್ದದ್ ಗಿರಿಜವ್ವ. ವೀರಮ್ಮನ ಕೊಟ್ಟ ಶ್ರೀಮಂಗಲನಾಡಿನ ಗೂಡೆ.

ಸೊಸೆನ ಕರ್ಕಂಡ್ ನಡ್ಕಂಡೆ ದೊಡ್ಡ ಪ್ರವಾಸ ಮುಗ್ಸಿ ಊರಿಗೆ ಬಂದೋ. ಆಗ ಪುಟ್ಟಬಸವ ಹೇಳ್ದ್ "ಒಬ್ಬೊಬ್ಬಂಗೆ ಒಂದೊಂದು ಕುದುರೆ ಬೇಕು ನೋಡವ್ವ" ಎದೆ ಡ್ಡವ ಹೊಡ್ಕಂಡ್ ಇದ್ದಂಗೆ ಅವ್ಳು ಉತ್ತರ ಕೊಟ್ಟತ್. ಹುಂ! ಕುದುರೆ ಅಲ್ಲ ಆನೆ ಬೇಕು.

ಆನೆ ಇದ್ದರೆ ಇನ್ನು ಲಾಯ್ಕ. ಎಲ್ಲವು ಒಟ್ಟಿಗೆ ಕುದ್ರಕು ಮಾತ್‌ಲಿ

ಬುಟ್ಟ್‌ಕೊಟ್ಟದೆನೆ ಅವ... ಮದುವೆ ಲೆಕ್ಕಲಿ ದೊಡ್ಡ ಪ್ರವಾಸಂದ ಅವಂಗೆ ಹೊರಲೋಕದ ಸಂಪರ್ಕ ಆತ್. ಅವನ ಕಿವಿಗೆ ಎಷ್ಟೋ ವಿಷಯಗ ಸಿಕ್ಕಿದೋ. ಒಳಗಿದ್ದ ಆಸೆಗೆಲ್ಲ ಗರಿಗೆದರ್‍ದೊ.

ಒಂದು ಕೂಸು ಆದ ಮೇಲೆ ಎಲ್ಲಿಗು ಹೋಕಿಲೆ ಅಂತ ಗಂಗವ್ವ ಲೆಕ್ಕ ಹಾಕಿತ್.

ಗೂಡೆ ಗಿರಿಜೆ ತಾಯಿ ಆಗುವ ದಿನ ಅಂತು ದೂರ ಇತ್ತ್. ಪುಟ್ಟ್ ಬಸವ ಮಡಿಕೇರಿಗೊಮ್ಮೆ ಹೋಗಿ ಬಾತ್. ಆಗ ನಾ ಎಷ್ಟ್ ಮರ್‍ಟಿದ್ದೆ. ದಮ್ಮಯ್ಯ ಹಾಕಿ ಹೇಳಿದ್ದೆ. ಒಂದು ಮಾತಿಗಾದ್ರು ಬೆಲೆ ಕೊಟ್ಟತಾ ಅಂವ?

ಅದ್ ಕಿರಿಯ ವೀರರಾಜೇಂದ್ರ ಪಟ್ಟಕ್ಕೆ ಬಂದ ಕಾಲ. ಜವ್ವನಿಗೆ ರಾಜ, ಅಂತವೆ ಗೆಳೆಯರು. ಯಾವುದು ಆಕೆ ಆಗದ್ ಅಂತ ಅವ್ವ ದೇವ್ರಿಗೆ ಕೇಳಿಕಂಡಿತ್ತೋ. ಅದುವೆ ಆಗಿ ಹೋತ್. ಒಮ್ಮೆ ಪ್ರವಾಸ ಹೋದ ಪುಟ್ಟಬಸವ, ವೀರಯೋಧನಂಗೆ ಬಟ್ಟೆ ಹಾಕಿ ಜೋಡು ನಳಿಕೆನ ಕೋವಿನ 'ತೂಗಿಹಾಕಿಕಂಡ್' ಕಂದು ಬಣ್ಣದ ಕುದುರೆ ಹತ್ತಿ ಮನೆಗೆ ಬಂದಿತ್ತ್.

ಸಾಯಂಕಾಲ ಆಗಿತ್ತ್ ಆಗ. ಸವಾರ ಯಾರ್‌ಂತ ಗೊತ್ತಾಗದೆ ಹೊರಗೆ ಬಂದ ಅವ್ವಂಗೆ ಪುಟ್ಟಬಸವ ಹೇಳ್ತ್, ಅವ್ವಾ, ಯಾರ್ ಬಂದದ್ ನೋಡ್, ಗುರ್ತು ಸಿಕ್ಕಿತಾ? ಆ ದಿನ ಕತ್ತಲೆಗೆ ತುಂಬಾ ಹೊತ್ತ್ ಮರ್‍ಟಿತ್ತ್ ಅವ್ವ. ಕುದುರೆಗೆ ತಿಂಬಕೆ ಮೇವು ಹಾಕಿಕೆ ಹೊರಗೆ ಹೋಕನ ಬೇಜಾರಾಗಿ ಎಲ್ಲಾ ಶಿವನ ಚಿತ್ತ ಅಂತ ದೇವ್ರ ಮೇಲೆ ಭಾರ ಹಾಕ್ತಿತ್ತ್.

ಅಂದ್‌ಂದ ಯಾಗೊಳು ಹಂಗೆನೆ. ಒಮ್ಮೆಲೆ ಪ್ರವಾಸ ಮತ್ತೆ ಯಾಗಾರ್ ಬಾದು. ಆಗ ರಾಜನ ಮತ್ತೆ ರಾಜ್ಯದ ಮೇಲೆ ಸ್ವಾಭಿಮಾನದ ಮಾತ್‌ಗೆ ಒಮ್ಮೆ ಮಂಜ ಹೇಳಿತ್ತ್. ಅವ್ವ ಅಪ್ಪನ ಕೊಂದವು ಎಲ್ಲಾ ಈಗ ಇಂಗ್ಲೀಷರ ಕಡೆ ಇರುವ ಅಲ. ಹುಟ್ಟಿಕೆ ಮುಂದೆನೆ ಆದ ಗಾಯ ಮಂಜನ ಹೃದಯಲಿ ಇನ್ನ್‌ಸ ಹಸುರಾಗಿನೆ ಇತ್ತ್ ಅಂತ ತಾಯಿನ ಎದೆ ಉಬ್ಬಿ ಬಾತ್. ಕೂಡ್ಲೇ ಇಂತ ಯೋಚನೆ ಬಂದ್ ಮಂಜಗೇನಾದರು ಕೆಟ್ಟದ್ ಆದರೆ ಅಂತ ಗಾಬರಿನು ಆದೆ ಅವ್ವಿಗೆ. "ಅವು ಈಗೆಲ್ಯೊಳ ಪುಟ್ಟ ಬಸ್ಯಾ" ಅಜ್ಜಂದಿರಾಗಿ ಸತ್ತು ಹೋಗಿದ್ದವೆ.

ನಿಜನು ಇತ್ತ್ ಆ ಮಾತ್‌ಲಿ.

"ಅದೂ ಹೌದು" ಅಂತ ಹೇಳ್ತ್ ಪುಟ್ಟ ಬಸವ.

ಒಮ್ಮೊಮ್ಮೆ ಸೊಸೆನ ಮೇಲೆ ಗಂಗವ್ವಂಗೆ ಸಿಟ್ಟ್ ಬರ್‍ತಿತ್ತ್. ಸರ್‍ಯಾದ ರೀತಿಲಿ

ಅವ್ವು ಮಂಜನ "ನೋಡಿಕಂಬದ್ಲೆ" ಅಂತ ಗಂಗವ್ವಂಗೆ ಸಂಶಯ. ಈ ಸಂಶಯಕ್ಕೆ ಆಧಾರ ಇಲ್ಲೆಂತ ಗೊತ್ತಾಕನ 'ಬಂಜೆಗೂಡೆ'ಂತ ಒಂದೆರಡ್ ಸರ್ತಿ ಸೊಸೆಗೆ ಹಂಗಿಸಿತ್ತ್.

ತನ್ನ ತೊಡೆನ ಮೇಲೆ ತಲೆ ಇಸಿ ಮುರುಂಟಿ ಮಲಗಿದ್ದ ಗಿರಿಜವ್ವನ, ಗಂಗವ್ವ ಒಂದೇ ಸಮ ನೋಡ್ತ್. ಮೂವತ್ತು ವರ್ಷದ ಹಿಂದೆ ನಾನು ಸ ಹಿಂಗೆನೆ ನಿದ್ದೆ ಮಾಡಿದ್ದೆ. ನನ್ನ ಅತ್ತೆನ ತೊಡೆನ ಮೇಲೆ.

ಆ ನೆನಪುಲೆ..

"ಗಿರಿಜಾ ನಿದ್ದೆ ಬಾತಾ?"

"ಉತ್ತರ ಇಲ್ಲೆ" ಪುನಃ

ಏ ಗಿರಿಜಾ ಏಳವ್ವ, ಪೋಯಿ ಒಳಗೆ ಕೇಳ್ತ್‌ಲೆನಾ ಏಳ್.

ಗಡಬಡಿಸಿ ಗಿರಿಜಾ ಎದ್ದತ್. ಗಾಬರಿ ಆಗಿ ನಡುಗುವು ಸ್ವರಲಿ ಅವ್ವು ಮಾತಾಡ್ತ್. "ಬಂದೊನಾ? ಏನಾತ್? ಏನಾತ್?"

ಬತ್ತಿಹೋದ ಕಣ್ಣ್‌ಲಿ ಮತ್ತೆ ಒರತೆ ಚಿಮ್ಮಿ ಬಾತ್ ಗಂಗವ್ವಂಗೆ. ಅವ್ವು ಸೊಸೆನ ಮೈಮುಟ್ಟಿ ಹೇಳ್ತ್.

ಹೆದ್ರಿಕಂಡನಾ? ಮಾತಾಡಿಕಂಡಿದ್ದಂಗೆ ನೀ ನಿದ್ದೆ ಮಾಡ್ದ. ಒಳಗೆ ಪೋಯಿ. ಇಲ್ಲಿ ಕೋಟ ತುಂಬಾ.

ಪೂರ್ತಿ ಎಚ್ಚರ ಆಗಿ ಸೊಸೆ ಎದ್ದ್‌ನಿಂತ್ ಒಳಗೆ ಹೋಕೆ ಅತ್ತೆನ ಹಿಡ್ಕಂಡತ್ತ್.

ಬೈ ಹುಲ್ಲುನ ಮೇಲೆ ಹಾಸಿದ್ದ ಚಾಪೆಗ ಅವರ ದಾರಿ ನೋಡಿಕಂಡ್ ಇದ್ದೊ. ಅಗ್ಗಿಷ್ಟಿಕೆನ ಕೆಂಡಗಳಿಗೆ ಬೂದಿ ಮುಚ್ಚಿ ಹೋಗಿತ್ತ್.

ಮಲ್ಗಿಕೆ ಹೋಕನ ಗಂಗವ್ವ ಹೇಳ್ತ್

ಇಂದ್ ಹುಣ್ಣಿಮೆ. ದಾರಿ ಕಾಂಬಕೆ ಲಾಯ್ಕ. ಹಿಂದೆ ಎಷ್ಟೋ ಸರ್ತಿ ಪುಟ್ಟ ಬಸ್ಯಾ ಹುಣ್ಣಿಮೆ ರಾತ್ರಿಲಿ ಬಂದಿತ್ತ್. ರಾತ್ರಿ ಕಳ್ದ್ ಬೊಳ್ಪು ಆಕನ ಅವ ಬಾಕೂ ಸಾಕ್.

"ಹೂಂ ಅತ್ತೆಮ್ಮ" ಅಂತ ಹೇಳಿ ಕುತ್ತಿಗೆನವರೆಗೆ ಕಂಬಳಿನ ಎಳ್ಕಣ್ತ್.

ಹಿಂಗೆ ಯಾಕೆ ಆಕೆ ಬೊತ್ತು? ಬೊಳ್ಪಾಕನ ನನ್ನ ಸ್ವಾಮಿ ಬಾಕು ಸಾಕ್ ಅಂತ ಆಸೆ ಅವ್ಳಿಗು ಇತ್ತ್.

# ೨

ಆ ಇರ್‍ಳ್ ಕಳ್ದ್ ಯಾಗೊಳ್‌ನಂಗೆ ಬೊಳ್ಪಾತ್. ಗಂಗವ್ವನ ಮಂಜನ ಸುದ್ದಿನೆ ಇಲ್ಲೆ. ಗಿರಿಜವ್ವನ ಸ್ವಾಮಿ ಮನೆಗೆ ಬಾತ್ಲೆ.

ಅಮವಾಸ್ಯೆ ಆಗಿ ಮತ್ತೆ ಹುಣ್ಣಿಮೆ ಬಾತ್. ಆ ರಾತ್ರಿ ಮಾತ್ರ ಕಳ್ದ್ ಬಂದ ಬೊಳ್ಪು ಯಾಗೊಳ್‌ನಂಗೆ ಇತ್ಲೆ.

ಬಾಗಿಲು ತಟ್ಟುವ ಶಬ್ದಕ್ಕೆ ಗಿರಿಜವ್ವ ದಡಬಡಂತ ಎದ್ದತ್. ಅತ್ತೆ ಇನ್ನುಸ ಗಾಢ ನಿದ್ದೆಲಿ ಇತ್ತ್. ಕತ್ತಲೆನ ನೋಡಿ ನೋಡಿ ಬೊಚ್ಚಿದ ಕಣ್ಣ್‌ಗಳಿಗೆ ಆಗಷ್ಟೆ ಜೊಂಪು ಹತ್ತಿತ್ತ್.

ಸೆರಗ್ ಸರಿ ಮಾಡಿಕಂಡ್ ಬಾಗ್‌ಲತ್ರ ಹೋಗಿ ಯಾರ್‌ಂತ ಕೇಳಿಕೆ ಸ್ವರನೆ ಹೊರ್‍ಟ್ತ್ಲೆ. ವಾಪಾಸ್ ಬಾಗಿಲು ಬಡಿವ ಸದ್ದ್. ಒಟ್ಟಿಗೆ ಕರ್‍ದ ಸ್ವರ.

"ಅವ್ವಾ!"

ಗಿರಿಜೆನ ದೇವ್ರು ಕಣ್ಣ್ ಬುಟ್ಟತ್! ಇನ್ನ್ ಬಾಗಿಲು ತೆಗೆಯಕೆ ಬಾಕಿ. ಆದರೆ ನನ್ನ ಹೆಸರ್‌ನ ಕರಿಯಕೆ ಏನ್ ಒಮ್ಮೆ?

"ಗಿರಿಜಾ"

ಎವೆ ಮುಚ್ಚಿಕೆನು ಪುರಸೊತ್ತು ಕೊಡ್ದೆ ಅವ್ಳು ಅಗುಣಿ ತೆಗ್ತ್. ಬಾಗಿಲು ಹಿಂದೆ ಹೋತ್.

ಚಿಂಟೆನ ಮೇಲೆ ಉದ್ದಕೆ ನಿಂತಿದ್ದ ಪುಟ್ಟ ಬಸವನ ಆಕೃತಿ ತಿಂಗಳ ಬೆಳಕ್‌ಲಿ ಕಂಡತ್ತ್. ಗಂಡನತ್ರ ಹೋತ್. ಕುಸ್ದ್ ಕುದ್ದತ್. ಗಂಡನ ಮೊಣಕಾಲುಗಳ ಕೈಗಳಂದ ತಬ್ಬಿಕಂಡತ್ ಗಿರಿಜವ್ವ. ಅವ್ಳ ಮುಂಗುರುಳುನ ಮುಟ್ಟಿ ಪ್ರೀತಿನ ಧ್ವನಿಲಿ ಪುಟ್ಟ ಬಸವ ಹೇಳ್ತ್.

"ಏಳ್ ಗಿರಿಜಾ, ನನ್ನೊಟ್ಟಿಗೆ ದೋಸ್ತಿಗ ಬಂದೊಳ.." ಗಾಬರಿಂದ ಗಿರಿಜವ್ವ ಎದ್ದತ್. ನನ್ನ ಈ ಸ್ಥಿತಿಲಿ ಅವೆಲ್ಲ ನೋಡಿಬುಟ್ಟನೋ ಅಂತ ನಾಚಿಕೆನು ಆತ್.

ಪುಟ್ಟ ಬಸವಾ ಕೇಳ್ತ್.

"ಅವ್ವ ಹುಷಾರುಟ್ಟ?"

"ಹೂಂ. ಏಳ್ಸಕಾ?"

"ಈಗ ಬೇಡಾ".

ಆ ಕ್ಷಣದ ಎಲ್ಲಾ ಸುಖಕ್ಕೆ ನಾನೊಬ್ಬಳೆ ಹಕ್ಕುದಾರೆ ಆದು. ಗಿರಿಜೆಗು ಇಷ್ಟ ಆತ್.

ಕೋವಿನ ಗೋಡೆನ ಮೂಲೆಗೆ ಒರಗಿಸಿ ಇಸಿಕಾನ ಅವ್ವ ಕೇಳ್ತ್.

"ಈಗ ತಿಂಬಕೆ ಏನ್ ಮಾಡೊಕು? ರೊಟ್ಟಿ ತಟ್ಟಕಾ?"

"ನಿಲ್ಲ್, ಗೆಳೆಯರ ಕೇಳಿ ಹೇಳ್ನೆ"

ಜಾಲ್‌ಗಿಳ್ದ ಗಂಡನ ಚಿಂಟೆ ತುದಿವರೆಗೆ ಹಿಂಬಾಲಿಸಿತ್. ಸ್ನೇಹಿತರು ಯಾರ್ ಕಂಡವೆಂತ ಇಣ್ಕಿ ನೋಡ್ತ್. ಅಂಗಳಕ್ಕೆ ಸೇರಿಕಂಡಿದ್ದ ಕಟ್ಟೆನ ಮೇಲೆ ಕಾಲು ಚಾಚಿ ಮೂರು ಜನ ಕುದ್ದಿದ್ದೋ. ಮರದ ಕೆಳಗೆ ನಾಲ್ಕು ಕುದುರೆಗ ನಿಂತಿದ್ದೊ. ಅವರತ್ರ ಹೋಗಿ ಪುಟ್ಟ ಬಸವಾ ಕೇಳ್ತ್.

ನಂಜಯ್ಯ, ರೊಟ್ಟಿ ಮಾಡಿಕೆ ಹೇಳಕ?

"ಒಂದು ಕೊಡಪಾನ ನೀರ್, ಒಂದು ಚಾಪೆ– ಈಗ ಬೇಕಾದ್ ಇಷ್ಟೆ. ಉಳ್ದದ್ ನಾಳೆ ಎಚ್ಚರ ಆದ ಮೇಲೆ" ಉತ್ತರ ಕೊಟ್ಟ ಸ್ವರದ ಗುರ್ತು ಗಿರಿಜವ್ವಂಗೆ ಇತ್ಲೆ. ಇನ್ನೊಂದು ಧ್ವನಿ ಕೇಳ್ತ್ – ಈಗಷ್ಟೆ ಬೊಳ್ಪಾಗುಟು. ಸ್ವಲ್ಪ ಹೊತ್ತು ಲಾಯ್ಕಲಿ ಮಲ್ಕಂಡವೆ"

"ನಿಮ್ಮಿಷ್ಟ" ಅಂತ ಪುಟ್ಟಬಸವ ಹೇಳ್ತ್. ಒಳಗೆಂದ ಮಣ್ಣ್‌ನ ಗಡಿಗೆಲಿ ನೀರ್, ತಾಮ್ರದ ಚೊಂಬುಸ ಬಾತ್. ಹಂಗೆನೆ ಒಂದು ತಪಲೆ ತನ್ನಿ. ಕುದುರೆಗಳಿಗೆ ನೀರ್ ಕುಡ್ನೊಕು. ಅದ್ ಇನ್ನೊಂದು ಸ್ವರ.

"ಕೊಡಪಾನ ಕೊಟ್ಟ್ ಬಾಮಿ ಎಲ್ಲಿಟ್ಟುಂತ ತೋರ್ಸಿತ್ ಗಿರಿಜೆ."

"ಬೇಸಿಗೆಲಿ ಜಾಸ್ತಿ ನೀರು ಇರ್ದುಲೆ. ಹುಷಾರು ಅಂತ ಎಲ್ಲವುಕೆ ಹೇಳ್ತ್ ಪುಟ್ಟಬಸವ"

"ಕೋವಿಗಳ ಒಳಗಿಸಿ ಚಿಂಟೆಲಿ ಮಲ್ಕಣಿ"

ಒಳಗೆಂದ ಎರಡು ಈಚಲು ಚಾಪೆಗಳ ತಂದ್ ಜಗಲಲಿ ಹಾಕಿ ಕೊಟ್ಟತ್.

ಇಷ್ಟ್ ಕೆಲಸ ಆದ ಮೇಲೆ ಹೋಗಿ ಅವ್ವನ ಏಳ್ಸೊಕು ಅಂತ ಇತ್ತ್. ಆದರೆ ಅಷ್ಟೊತ್ತಿಗೆ ಗಂಗವ್ವಂಗೆ ಎಚ್ಚರ ಆತ್. ಅವ್ವ ಎದ್ದ್ ಕುದ್ದ್ ಉದ್ವೇಗಲಿ ಕೇಳ್ತ್.

ಗಿರಿಜಾ! ಯಾರ್ ಬಂದದ್? ಪುಟ್ಟ ಬಸ್ಯಾನಾ? ಗೆಳೆಯರಿಗೆ ಮಲ್ಗಿಕೆ ಜಾಗ ತೋರ್ಸಿಕಂಡೆ ಇದ್ದ ಪುಟ್ಟ ಬಸವಂಗೆ ಕೇಳ್ತ್. "ಹೂಂನವ್ವ ನಾನೆ"

"ಎಲ್ಯೊಳ? ಏನೂ ಕಾಂಬೊದ್ಲೆ ನಂಗೆ"

ನಾನು ಮನೆ ಬುಡಿಕಾನ ಅವ್ವನ ಕಣ್ಣ್ ಸರಿ ಕಾಣ್‌ತ್‌ತ್ಲೆ ಅಂತ ನೆನಪಾತ್ ಪುಟ್ಟ ಬಸವಂಗೆ. ಈಗ ಕುರುಡಿನೆ ಆಗಿಬುಟ್ಟುಟ್ಟೋ ಅಂತ ಕಳವಳನು ಆತ್.

"ಬಂದೆವ್ವಾ" ಹೇಳಿಕಂಡ್ ನಡುಮನೆಗೆ ಹೋತ್. ಅವ್ವನ ಮಡಿಲ್‌ಲಿ ತಲೆ

ಇಸಿ ಎಳೆಕರ್‌ನಂಗೆ ಮಾಡ್ತ್.

"ಯಾಕೆವ್ವ ಕಾಂಬೊದ್ಲೆನ" ನಾನ್ ಪುಟ್ಟ ಬಸ್ಯಾ. ಎರಡು ಕೈಗಳಂದ ಅವನ ಮೈನೆಲ್ಲಾ ಮುಟ್ಟಿ ಗಂಗವ್ವ ಹೇಳ್ತ್ "ನೀನ್ ಹೋಕನ ದೃಷ್ಟಿನು ಹೋದೆ, ಬಾಕನ ಅದ್ ತಿರ್ಗಿ ಬಂದದೆ"

"ನನ್ನವ್ವ"

ಕೆಟ್ಟ ಹೈದ ಎಲ್ಲಿಗೆ ಹೋಗಿದ್ದ ಇಷ್ಟು ದಿನ?

"ಎಲ್ಲಿಗೆ ಹೋದರುಸ ವಾಪಾಸು ಬಂದೇ ಬನ್ನೆ ಅಲ ನಿನ್ನತ್ರ ನಾನ್?"

ಹೂಂ ಹಿಂಗೆ ಮಾಡ್ರೆ ಒಂದು ಸರ್ತಿ ನೀನ್ ಬಾಕನ ನಾನ್ ಸತ್ತ್ ಹೋಗಿದ್ದನೆ ನೋಡಿಕ!

"ಹಂಗೆಲ್ಲಾ ಹೇಳ್ಬೆಡ ಅವ್ವ"!

"ಮತ್ತೆ ಕಣ್ಣ್‌ಲಿ ನೀರ್ ತುಂಬಿ ಬಾತ್ ಗಂಗವ್ವಂಗೇ"

"ಅಗ್ಗಿಷ್ಟಿಕೆನ ಕೆಂಡನ ಉರ್ಗಿ ಕಿಚ್ಚಿ ಹೊತ್ತ್‌ಸಿತ್ ಗಿರಿಜ"

ಮಂಜಂಗೆ ಏನ್ ಮಾಡಿ ಕೊಟ್ಟಿಯ ಗಿರಿಜಾ?

ಪುಟ್ಟ ಬಸವ ಹೇಳ್ತ್.

ಈಗೆಂತ ಬೇಡವ್ವ. ಮೂರು ಜನ ಗೆಳೆಯರ ಕರ್ಕೊಂಡ್ ಬಂದೊಳೆ. ಅವೆಲ್ಲಾ ನಿದ್ದೆ ಮಾಡ್ತವ್ರೊಳ. ಬೊಳ್ಪಾದ ಮೇಲೆ ರೊಟ್ಟಿ ಮಾಡ್ರೆ ಆತ್.

'ಹಂಗಾರೆ ನೀ ಮಲ್ಕ'

"ಹೂಂ"

ಬಂದಿರವು ಯಾರು?

ನಿಂಗೆ ಅವರ ಗುರುತಿರಿಕ್ಕಿಲ್ಲೆ ಅವ್ವ. ಹೊಸಬರ್

ಮಡಿಕೇರಿಂದಲೇ ಬಂದದಾ?

"ಹೂಂನವ್ವಾ"

"ರಾಜರೆಲ್ಲಾ ಹುಷಾರೊಳ ಅಲ?

ಒಮ್ಮೆಗೆ ಉತ್ತರ ಬಾತ್ಲೆ ಪುಟ್ಟ ಬಸವಂದ.

ಏನ್ ಉತ್ತರ ಹೇಳಿಕೆ ಆಗದೆ ತಡವರಿಸಿತ್ ಪುಟ್ಟ ಬಸವ. ಪುಷ್ಪಗಿರಿಯ ಈ ತಪ್ಪಲಿಗೆ ಸುದ್ದಿ ಇನ್ನುಸ ಹಬ್ಬಿತ್ಲೆ ಅಂತ ಆತ್. ಅವ್ವಂಗೆ ಇನ್ನು ವಿಷಯನೆ ಗೊತ್ಲೆ ಅಂತ ಮನಸ್‌ಲೆ ನೆನ್ಸಿಕಣ್ತ್.

"ಅಲ್ಲಿನ ಕಥೆ ಹೇಳಿಕೆ ತುಂಬಾ ಉಟ್ಟು ಅವ್ವ"

"ಹೌದಾ"

ಇನ್ನೂ ಕೋಳಿ ಕೂಂಗಿತ್ಲೆ ನೀನ್ ಮಲ್ಕ ಅವ್ವ.

"ನನ್ನ ನಿದ್ದೆಗಿಷ್ಟು ಬೆಂಕಿ ಬೀಳಾ! ನೀನ್ ಮಲ್ಕ"

ಪುಟ್ಟಬಸವ ಹೊರಗೆ ಹೋಗಿ ಬಾತ್. ನಂಜಯ್ಯ ಗೊರಕೆ ಹೊಡಿತ್ತಿತ್. ಉಳಿದವು ಇಬ್ಬರು ನಿದ್ದೆ ಎಚ್ಚರಗಳ ಮಧ್ಯೆ ತೂಗಾಡ್ತಿದ್ದೋ.

ಗಂಗವ್ವ ಆಗಲೆ ಸೊಸೆನೊಟ್ಟಿಗೆ ಅಡುಗೆ ಕೋಣೆಗೆ ಹೋತ್. ಪುಟ್ಟ ಬಸವ ಬಟ್ಟೆ ಬದಲಾಯಿಸಿ ಅವ್ವ ಮಲಗಿದ್ದ ಚಾಪೆಲಿಯೆ ಮಲ್ಗಿ ನಿದ್ದೆ ಹೋತ್.

.... ಎಲ್ಲವುಕೆ ಎಚ್ಚರ ಆಕನ ಸೂರ್ಯನ ಬೆಳಕ್ ಮರಗಳ ರೆಂಬೆ ಕೊಂಬೆಗಳ ಮಧ್ಯಂದ ಬರ್ತಿತ್. ಕುದುರೆಗೆ ಕೆನೆದು "ಇಂದೆಲ್ಲಿಗೆ ಹೋಕೆ ಇಲ್ಲೆನಾ" ಅಂತ ಕೇಳಿ ಗಿರಿಜವ್ವ ತಂದ್ ಹಾಕಿದ ಹಸುರುಲ್ಲುನ ತಿನ್ನಿಕೆ ಶುರು ಮಾಡ್ದ.

ಮೋರೆ ತೋಳ್ ಎಲ್ಲವು ಪುಟ್ಟ ಬಸವನೊಟ್ಟಿಗೆ ನಡು ಮನೆಗೆ ಬಂದೊ. ಅಕ್ಕಿ ರೊಟ್ಟಿಗಳ ಅಟ್ಟಿ ಮಧ್ಯಲಿ ಇಸಿಕಂಡ್ ಇತ್. ಇನ್ನೊಂದ್ ಪಾತ್ರಲಿ ಪಲ್ಯ ಇತ್. ಚೊಂಬುಲಿ ನೀರ್ ಕೂಡಾ ಇತ್.

ಎಲ್ಲವು ತಕಣಿ. ಹಳ್ಳಿಯವರ ಅಡುಗೆ ನಿಮ್ಗೆ ಹಿಡಿಸಿದೆನ ಇಲ್ಲೆನ ಗೊತ್ಲೆ ಅಂತ ಗಂಗವ್ವ ಅಡುಗೆಮನೆ ಬಾಗಿಲಲಿ ಕುದ್ದ್‌ಕಂಡ್ ಹೇಳ್ತ್.

ನಂಜಯ್ಯ ಪೀಚೆ ಕೈಲಿ ರೊಟ್ಟಿನ ಹಿಡ್ಕಂಡ್, ಅದರ ಮಧ್ಯಕ್ಕೆ ಪಲ್ಯ ಹಾಕಿಸಿಕಂಡ್ ಒಂದು ತುಂಡ್‌ನ ಮುರ್ದ್ ಬಾಯಿಲಿ ಹಾಕಣ್ತ್.

"ಆಹಾ! ಈ ರುಚಿ ನೋಡದೆ 'ವರ್ಷಂದ ಜಾಸ್ತಿ ಆತ್. ಏನಿಯಾ ಪುಟ್ಟಬಸಪ್ಪಾ – ಅರಮನೆಲಿ ಅಂದ್ ರೊಟ್ಟಿ ತಿಂದ ಮೇಲೆ ಇಂದೇ ಅಲ ತಿಂಬೊದು?

"ಯಾವುದಕ್ಕೆ ಯಾವುದರ ಹೋಲಿಸಿಯಪ್ಪ" ಅಂತ ಗಂಗವ್ವ ನಾಚಿಕೆಲಿ ಹೇಳ್ತ್. ಆ ಮಾತ್‌ನ ಹೇಳ್ದ ಮನುಷ್ಯನ ಗಂಗವ್ವ ದಿಟ್ಟಿಸಿ ನೋಡ್ತ್.

ತಿಂದ್‌ಕಂಡ್ ಇದ್ದಂಗೆ ಪುಟ್ಟಬಸವ ದೋಸ್ತಿಗಳ ಪರಿಚಯನ ಅಡ್ಡಂಗೆ ಮಾಡಿಕೊಟ್ಟತ್.

ಇವು ಹುಲಿಕೊಂದ ನಂಜಯ್ಯನವು – ಸರದಾರರು. ನಾವುಗೆಲ್ಲಾ ದೊಡ್ಡಣ್ಣ ಇದ್ದಂಗೆ. ಇವಿಬ್ಬರು ಸ್ವಂತ ಅಣ್ಣನು–ತಮ್ಮನು ಚೆಟ್ಟಿ ಕುಡಿಯ, ಕರ್ತ ಕುಡಿಯ ಅಂತ.

ಮುಖ ಸರ್ಯಾಗಿ ಕಾಂಬದಿದ್ರು ಗಂಗವ್ವ ನೆಟ್ಟ ದೃಷ್ಟಿಲಿ ಅವರ ನೋಡ್ತ್.

ಬಾಯಿಲಿದ್ದದರ ನುಂಗಿ ನೀರ್ ಕುಡ್ದು, ಪುನಃ ರೊಟ್ಟಿಗೆ ಪಲ್ಯ ಸೇರಿಸಿಕಂಡ್ ಪುಟ್ಟ ಬಸವ ಹೇಳ್ತ್.

"ಈ ಅಣ್ಣ ತಮ್ಮಂದಿರು ಮಹಾಶೂರರು ಅವ್ವ. ಮಹಾರಾಜಂಗೆ ತುಂಬಾ ಬೇಕದವು. ಹಾರಿಕಂಡಿರುವ ಹಕ್ಕಿನ ಕಣ್ಣಿಗೆ ಗುರಿ ಇಸಿ ಹೊಡ್ದದೆ ಚೆಟ್ಟಿಕುಡಿಯ ಮಹಾರಾಜಂಗೆ ಗುರಿ ಇಸಿ ಹೊಡಿಯಕೆ ಕಲ್ಸಿದ್ ಇವನೆ.

ಹೌದ! ಅಂತ ಹೇಳ್ತ್ ಗಂಗವ್ವ. ಮುಖ್ಯವಾದ ಜನಗಳೆ ಮಂಜನೊಟ್ಟಿಗೆ ಬಂದೊಳೊ. ಕುಡಿಯರಾದ್ರು ಅಸಾಮಾನ್ಯ ಜನಗ. ನಂಜಯ್ಯ ಹೆಸರ್ ಕೇಳಿಕಾನ ನಮ್ಮ ಜನನೆ ಆಗಿರಕು ಅಂತ ಕಂಡದೆ.

ಮಂಜನ ಗೆಳೆಯರೊಟ್ಟಿಗೆ ಗಂಗವ್ವ ಕೇಳ್ತ್.

"ನೀವೆಲ್ಲ ಇಲ್ಲಿಗೆ ಬಾದು ಇದೆ ಮೊದಲ ಸರ್ತಿ ಅಲ?"

ನಂಜಯ್ಯ ಹೇಳ್ತ್.

"ಹೂಂ ಒಮ್ಮೆ ಮಹಾರಾಜರ್ ಇರಿಕಾನ ಬೇಟೆಗೆ ಅಂತ ಇಲ್ಲಿಂದ ಹತ್ತು ಹರದಾರಿ ಹತ್ರದೊರಗೆ ಬಂದಿದ್ದೊ ಅಷ್ಟೆ"

'ಮಹಾರಾಜರು ಇರಿಕಾನ'–ಅಂತ ಹೇಳ್ತ್ ನಂಜಯ್ಯ.

ಪುಟ್ಟ ಬಸವ ತಲೆ ಎತ್ತಿ ಅವನ ಮೋರೆ ನೋಡ್ತ್.

ನಂಜಯ್ಯ ಮಾತ್‌ಂದ ಗಂಗವ್ವಂಗೆ ಗೊಂದಲ ಆತ್.

ಹೆಚ್ಚಿನಂಶ ತೀರಿದ ಮಹಾರಾಜರ ವಿಷಯ ಹೇಳಿರಕು ಅಂತ ಗಂಗವ್ವ ಸುಮ್ಮನಾತ್.

ಆದರೆ ನಂಜಯ್ಯನ ಮಾತ್ ಮುಂದುವರ್ಕಂಡ್ ಹೋತ್.

"ಆ ಸಲದ್ದು ಎಂಥಾ ಬೇಟೆ! ನಿಂಗೆ ನೆನಪುಟ್ಟಾ ಚೆಟ್ಟಿ?

"ಹೂಂ" ಹೇಳ್ತ್ ಚೆಟ್ಟಿ ಕುಡಿಯ. ಸ್ವರಲಿ ಉತ್ಸಾಹ ಇತ್ಲೆ. ವಿಷಯದ ಮೇಲೆ ಉದಾಸೀನ ಇದ್ದಂಗೆ ಕಾಣ್ತಿತ್ತ್ ಅವನ ವರ್ತನೆ.

ನಂಜಯ್ಯ ಅದರ ಗಮನಿಸಿತ್ಲೆ. ಮತ್ತೆ ಮುಂದುವರೆಸಿತ್ ಅದೊಂದು ಪೋಲಿ ಆನೆ ಬಾರಿ ಉಪದ್ರ ಕೊಡ್ತಿತ್ತ್. ಎಷ್ಟು ಸರ್ತಿ ತಪ್ಪಿಸಿಕಂಡಿತ್ತ್ ನಮ್ಮ ಕೈಯಿಂದ. ಆ ಸರ್ತಿ ರಾಜರು ಅದರ ಗುಂಡು ಹಾಕಿ ಸಾಯ್ಸಿದೋ. ವೀರಾಗ್ರಣಿ! ನಲ್ವತ್ತು ದಿನಲಿ ಇನ್ನೂರ ಮೂವತ್ತು ಆನೆಗಳ ಮಹಾರಾಜರು ಒಬ್ಬನೆ ಬೇಟೆಯಾಡಿ ಕೊಂದೊಳ ಅಂದರೆ ನಂಬಿಯ ಅವ್ವಾ? ಎಂಥ ಧೈರ್ಯಶಾಲಿ!

ಸಣ್ಣ ಸ್ವರಲಿ ಮರ್ಡಿಕೆ ಬಾತ್ ಅವಂಗೆ. ನಾವು ಪಾಪಿಗ ನಾವುಗೆ ಭಾಗ್ಯ

ಇಲ್ಲೆ.

ಗಂಗವ್ವಂಗೆ ಕಸಿವಿಸಿ ಆತ್.

ಯಾವ ಮಹಾರಾಜರ ವಿಷಯ ಹೇಳ್ತಾ ವೊಳರಿ ನೀವು?

ಆ ಪ್ರಶ್ನೆ ವಿಚಿತ್ರವಾಗಿ ಕಂಡತ್ ನಂಜಯ್ಯಂಗೆ.

ಯಾವ ಮಹಾರಾಜರು? ಚಿಕ್ಕವೀರರಾಜರು ಇನ್ಯಾರ್?

ಗಂಗವ್ವ ಕಾತರಂದ ಕೇಳ್ತ್.

"ಯಾಕೆ? ಏನಾತ್ ಮಹಾರಾಜಂಗೆ"

"ಪುಟ್ಟ ಬಸವ ಮಧ್ಯಲಿ ಬಾಯಿ ಹಾಕಿ ಹೇಳ್ತ್-ಇಲ್ಲಿಗಿನ್ನ್ ಸುದ್ಧಿ ಬಾತ್ಲೆ ನಂಜಯ್ಯನವ್ರೆ"

ಹೌದಾ! ಅಂತ ಹೇಳ್ತ್ ನಂಜಯ್ಯ ಆಶ್ಚರ್ಯಲಿ ತನ್ನ ಪ್ರಶ್ನೆಗೆ ಉತ್ತರ ಬಾತ್ಲೆಂತ ಗಂಗವ್ವ ಏನುಂತ ಹೇಳಿಪ್ಪಾ ಅಂತ ಹೇಳ್ತ್.

ಪುಟ್ಟ ಬಸವ ಹೇಳ್ತ್.

"ಕೊಡಗು ರಾಜ್ಯ ಇಂಗ್ಲೀಷರವರ ಆಗಿಟು ಅವ್ವಾ. ಈಗಲೆ ಎರಡು ವರ್ಷ ಆತ್. ಮಹಾರಾಜರು ಪರಿವಾರ ಸಮೇತ ಕಾಶಿಗೆ ತೀರ್ಥಯಾತ್ರೆ ಹೋಗ್ಯೊಳೊ"

"ಅಯ್ಯೋ ಶಿವನೇ"

ಗಂಗವ್ವಂಗೆ ಮರಗಟ್ಟಿ ಹೋದಂಗೆ ಆತ್. ಮುಂದೆ ಯೋಚಿಸಿಕೆ ಆತ್ಲೆ ಅವ್ಳಿಗೆ.

ಬಿಸಿ ಬಿಸಿ ರೊಟ್ಟಿಗಳ ತಕಂಡ್ ಬಂದ ಗಿರಿಜಂಗೆಸ ಆ ಮಾತ್‌ಗ ಕೇಳ್ದೊ. ಅವುಸ ಮೂಕಳಾಗಿ ಹೋತ್.

ತಿಂದಾದ ಮೇಲೆ ಕುಡಿಯ ಅಣ್ಣ ತಮ್ಮಂದಿರು ಎದ್ದೊ. ಅವರ ಮುಖಲಿ ಗೆಲುವಿತ್ಲೆ. ನೆರಿಗೆ ಕಟ್ಟಿದ ಹಣೆಲಿ, ಹುಬ್ಬುಲಿ ಬೇಜಾರ ಎದ್ದ್ ಕಾಣ್ತಿತ್ತ್.

ಅವು ಎದ್ದದರ ನೋಡಿ ಗಂಗವ್ವ ಹೇಳುವ ಮುಂದೆನೆ ಪುಟ್ಟ ಬಸವ ಹೇಳ್ತ್.

ಬಿಸಿ ರೊಟ್ಟಿ ಇನ್ನೆರಡು ತಿಂಬಕೆ ಏನ್? ಯಾಕೆ ಎದ್ದದ್?

ಇಲ್ಲೆ ಅಣ್ಣ ಸಾಕ್. ತಿಂದದ್ ಜೀರ್ಣ ಆದ್ಲೆಂತ ಹೇಳ್ತ್ ಚೆಟ್ಟಿ.

ನೀರ್ ಕುಡಿಯಕೆ ಚೊಂಬುನ ಎತ್ತಿಕಂಡ್ ನಂಜಯ್ಯ ಹೇಳ್ತ್.

"ನಂಗುಸ ಸಾಕ್. ಮನಸ್ಸು ಆರೋಗ್ಯಲಿ ಇದ್ದರೆ ಕಲ್ಲು ತಿಂದರು ಕರಗಿದೆ. ಈಗ ಉಸಿರಾಡಿಕೆ ತಕ್ಕ ಒಂದಿಷ್ಟು ತಿಂದ್‌ಕಂಬದು.

ರೊಟ್ಟಿ ಬಿಸಿ ಬಿಸಿ ಇದ್ದರು ಪುಟ್ಟ ಬಸವಂಗು ಬೇಡಾಂತ ಆಗ್ತಿತ್ತ್.

ಗಿರಿಜವ್ವ ರೊಟ್ಟಿ ತಟ್ಟೆನ ಒಳಗೆ ತಕಂಡ್ ಹೋತ್. ಗಂಡಸರೆಲ್ಲ ಚಿಂಟೆಲಿ ಕುದ್ದೊ. ಒಳಗೆಂದ ವೀಳ್ಯದೆಲೆ ಅಡಿಕೆ ತಂದರು ಯಾರು ಅದರ ಮುಟ್ಟಿಕೆ ಹೋತ್ಲೆ. ನಂಜಯ್ಯ ಒಂದೆರಡು ಅಡಿಕೆ ಹೋಳುನ ಬಾಯಿಗೆ ಹಾಕಣ್ತ್.

ಗಂಗವ್ವಂಗೆ ಸುದ್ದಿ ಕೇಳಿ ಸಾವುನ ಮನೆಯ ವಾತಾವರಣ ಬಂದಂಗೆ ಆತ್. ಮಂಜ ಮನೆಗೆ ಬಂದ ಖುಷಿನ ಹಂಚಿಕಣುವ ಮೊದ್ಲೆ ಕೆಟ್ಟ ಸುದ್ದಿ ಸಿಕ್ಕಿತ್. ಇದ್ರಂದ ರಾಜ್ಯಕ್ಕೆ ಮಾತ್ರ ಕಷ್ಟ ಅಲ್ಲ ನಮ್ಮ ಸಂಸಾರಕ್ಕು ಆಪತ್ತು ಒದಗಿದಂಗೆ. ಪುಟ್ಟಬಸವನ ಅಪ್ಪನ ಕಾಲಂದಲೇ ಅರಮನೆಯ ಮರಕ್ಕೆ ಅಡರಿಯೆ ಬೆಳ್ದಿತ್ತ್. ಅವರ ವಂಶದ ಬಳ್ಳಿ.

ಆ ಬೇಸರಸ ಅಂಟು ಜಾಡ್ಯ. ಯುದ್ಧ-ಸೋಲು ಮತ್ತೆ ಯುದ್ಧ ಮತ್ತೆ.. ಗಂಡ ಬಾಳ ದಿನ ಮನೆಲಿ ಇರ್ದುಲೆ ಎಂಬ ಸಂಶಯ ಅವ್ಳಿಗೆ ಗ್ಯಾರಂಟಿ ಆತ್.

ಮಧ್ಯಾಹ್ನ ಹಬ್ಬದಡುಗೆ ಮಾಡಕು ಅಂತ ಬೊಳ್ಳಿಗೆ ಒಲೆ ಮುಂದೆ ಪೊಕ್ಲರೊಟ್ಟಿ ಮಾಡಿಕನ ಗಂಗವ್ವ ಹೇಳಿತ್ತ್. ಬೊಳ್ಳಿಗೆನೆ ಅತ್ತೆ ಸೊಸೆ ಭಕ್ಷ್ಯ ಭೋಜ್ಯಗಳ ವಿಷಯ ಮಾತಾಡಿದ್ದೋ.. ಈಗ..

ಗಿರಿಜವ್ವ ಅತ್ತೆನ ಹತ್ರ ಹೋತ್.

"ಅಡುಗೆ ಏನೇನ್ ಮಾಡೊದು ಅತ್ತೆಮ್ಮ?"

"ಚೂರು ಹೊತ್ತು ಸುಮ್ಮನಿದ್ದು ಗಂಗವ್ವ ಹೇಳ್ತ್"

"ನಿನ್ನ ಗಂಡನ ಕೇಳ್"

"ಪುಟ್ಟ ಬಸವ ಹೆಣ್ಣ್‌ನ ಪ್ರಶ್ನೆಗೆ ಸೀದ ಉತ್ತರ ಕೊಡದೆ ನಂಜಯ್ಯನ ಕಡೆಗೆ ತಿರ್ಗಿತ್.

ಊಟಕ್ಕೆ ಏನ್ ಮಾಡೊಕು ನಂಜಯ್ಯನವರೆ?

ನಂಜಯ್ಯ ಹೇಳ್ತ್,

"ನೀವು ಸರಿ ಒಳರಿ. ನೆಂಟ್ರಿಗೆ ಸಮ್ಮಾನದ ಯೋಚನೆ ನೀವುಗೆ. ದಯವಿಟ್ಟು ಅದೆಲ್ಲಾ ಬೇಡ.

ಚಟ್ಟಿ ಕುಡಿಯನು ಹೇಳ್ತ್.

"ಬರೇ ಅನ್ನ ಸಾರು ಸಾಕ್ ಅಣ್ಣ"

ಮಂಜನ ಅಭಿಪ್ರಾಯ ಕೇಳಿ ಗಂಗವ್ವಂಗೆ ನಿಟ್ಟುಸಿರು ಬಾತ್.

ಮಧ್ಯಾಹ್ನ ಊಟ ಮಾಡ್ದ ಮೇಲೆ ನಿದ್ದೆ ಮಾಡಿಕೆ ಯಾರು ಇಷ್ಟಪಟ್ಟತ್ಲೆ.

ಪುಟ್ಟ ಬಸವ ಹೇಳ್ತ್. ಇಲ್ಲೆ ಪಕ್ಕದ ಹಳ್ಳಿಗೆ ಹೋಗಿ ಬಂದವೆ. ಕೂಕುಳು ಹಾಕಿರೆ ಕೇಳುವಷ್ಟು ಹತ್ರಲಿಸ ಒಂದೆರಡು ಮನೆಗ ಒಳ. ಅವರ್‍ನೆಲ್ಲಾ ನೋಡ್ಕಂಡ್ ಬನ್ನೆ.

"ನಾನುಸ ಬರಕ?" ನಂಜಯ್ಯ ಕೇಳ್ತ್.

"ಬೇಡ ನೀವೆಲ್ಲರು ಇಲ್ಲೆ ಇರಿ".

"ಸ್ವಲ್ಪ ಜನರ ಕರ್‍ಕಂಡ್ ಬನ್ನಿ.

ನಾನ್ ಕರ್‍ಕಂಡ್ ಬಾದ್ಲೆ. ಅವಾಗಿಯೇ ಬಂದವೆ ನೋಡಿ.

ಪುಟ್ಟ ಬಸವ ಹೋದ ಮೇಲೆ ನಂಜಯ್ಯ ಗಂಗವ್ವನೊಟ್ಟಿಗೆ ಮಾತಾಡಿಕಂಡ್ ಕುದ್ದತ್. ಕರ್ತ ಕುಡಿಯ, ಕುದುರೆಗಳಿಗೆ ಮಾಲೀಸು ಮಾಡ್ತಿತ್ತ್. ಚೆಟ್ಟಿಯೊಬ್ಬನೆ ಕೋವಿನ ಹೆಗಲಿಗೆ ಹಾಕಿ ಅಲ್ಲೇ ಹತ್ರ ಕಾಡ್‍ನ ನೋಡಿ ಬನ್ನೆ ಅಂತ ಹೊರ್‍ಟತ್.

## ೩

ಅಂದ್ ಹುಣ್ಣಿಮೆನ ಮಾರ್‍ನೆ ದಿನ. ತಿಂಗಳ ಬೆಳ್ಕ ಎರಡ್ ತಾಸ್ ಹೊತ್ತಾಗಿ ಬಾತ್. ಪುಟ್ಟ ಬಸವ ತಿರ್‍ಗಿ ಬಂದಿತ್ತ್. ಅವನೊಟ್ಟಿಗೆ ಮತ್ತೆ ವಾಪಾಸ್ ಆರೇಳ್ ಜನ ಬಂದೋ. ಮಹಾರಾಜನ ಆಪ್ತಕೋಟೆನ ವೀರರ ಕಾಂಬಕೆಂತ, ತಾವು ಗುಲಾಮರಾದ ದುರಂತ ಕಥೆನ ಕೆಳಿಕೆ ಅಂತ.

ತುಂಬಾ ಮೆಲ್ಲ ಬಂದವ ಚೆಟ್ಟಿ ಕುಡಿಯ. ಹಕ್ಕಿಗಳ ಚಿಲಿಪಿಲಿಗೆ ಕಿವಿಗೊಟ್ಟುಕಂಡ್, ಕಾಡ್‍ನ ಲಾಯ್ಕಲಿ ತನ್ನನೆ ತಾನ್ ಮರ್‍ತ್ ಅವನ ಹೃದಯ ಹಗುರ ಆಗಿತ್ತ್. ಈಗ ಜನ ನೆರ್‍ದದರ ನೋಡಿ ಅವನ ಮೋರೆ ಅರ್‍ಳಿತ್.

"ಇವನೆ ಚೆಟ್ಟಿಕುಡಿಯ" ಅಂತ ಹೇಳ್ತ್. ಉಳ್ದವರ ಪರಿಚಯನ ಆಗಲೇ ಮಾಡಿ ಕೊಟ್ಟಿತ್ತ್ ಪುಟ್ಟಬಸವ.

ಜನ ಗೌರವಲಿ ಚೆಟ್ಟಿನ ನೋಡ್ದ. ಅವನ ಭುಜಂದ ಆಗಷ್ಟೆ ಕೆಳಕ್ಕಿಳಿದ ಕೋವಿನಸ ನೋಡ್ದೋ.

ಹಾರುವ ಹಕ್ಕಿನ ಕಣ್ಣಿಗೆ ಗುರಿ ಇಸುವ ಸಮರ್ಥ ಅರಸಂಗೆ ಶಿಕ್ಷಕ, ಖಾಸಾ ಗೆಳೆಯ...

ಆದರೆ, ನಗಡಿಕಂಡಿರುವ ವಾತಾವರಣ ಅಲ್ಲಿ ಸಾದ್ಯ ಇತ್ಲೆ. ಎಲ್ಲರಸ ಒಂದು ಮಾಡಿ ಬಿಗ್ದ್ ಕಟ್ಟುವ ಭಾವ ಅಲ್ಲಿತ್ತ್. ಆಗ ಎಲ್ಲರ ಎದೆಲಿ ಹಿಂಡ್‍ತ್ತಿದ್ದ ಬೇನೆ ಕೂಡ ಅಲ್ಲಿ ಪ್ರಭುತ್ವ ಸಾಧಿಸಿತ್ತ್.

"ಬನ್ನಿ ಬನ್ನಿ"

ಜಗಲಿನ ಗೋಡೆಗೆ ಒರ್‍ಗಿ ಆ ನಾಲ್ಕ್ ಜನ ಕೆಳಗೆ ಕುದ್ರೊ. ಅವ್ಕೆ ಎದುರು, ಎಡ ಬಲಲಿ ಉಳ್ಳವು ಜಾಗ ಹಿಡ್ದ್ ಕುದ್ರೊ.

ದೂರ ದೂರ ಕುದ್ದರು ಅವರ ದೃಷ್ಟಿಗ ಆ ನಾಲ್ಕ್ ಜನರ ಮೇಲೆನೆ ನೆಟ್ಟಿತ್ತ್. ಮೈಯೆಲ್ಲಾ ಕಿವಿಯಾಗಿತ್ತ್ ಅವ್ಕೆ.

ಇರ್ವವರ್‍ಲಿ ಹಿರಿಯವ ಸೋಮಯ್ಯ ಹೇಳ್ತ್,

"ನಾವುಗೆ ಇಲ್ಲಿಗೆ ಬಂದು ಸುದ್ದಿಸ ಬಾತ್ಲೆ. ಇಷ್ಟ್ ದೂರ ಜಾಗೆಗೆಲ್ಲ ಮೂರು ವರ್ಷಕ್ಕೊಮ್ಮೆ ಕಂದಾಯ ವಸೂಲು ಮಾಡಿಕೆ ಬಾದು ಉಟ್ಟು. ಇಲ್ಲರೆ ವಸೂಲಿಯವು ಬಾಕನಾದ್ರ್ ನಾವುಗೆ ಗೊತ್ತಾಗ್ತಿತ್ತ್."

ಆ ಮಾತ್‌ನ ಬೆಚ್ಚ ಆರಿಕೆ ಮುಂದೆನೆ ನಂಜಯ್ಯ ಹೇಳ್ತ್.

"ಇನ್ನ್ ಕಂದಾಯ ಮಾತ್ರ ಅಲ್ಲ, ನಾವು ಬೆಳ್ಸಿದರ ಎಳ್ಕಂಡ್ ಹೋದವೆ"

"ಅದರ ನೋಡಿಕಂಬನ" ಊರವು ಯಾರೋ ಹೇಳ್ರೊ.

"ಕೆಂಪು ಮುಸುಂಡನವ ಇನ್ನ್ ಕುದುರೆ ಮೇಲೆ ಬಂದದೆ. ಕೈಲಿ ಚಾಟಿ ಹಿಡ್ದ್ ನಮ್ಮ ಬೆನ್ನಿಗೆ ಹೊಡ್ದ್ ಬದ್ಮಾಷ್ ಅಂತ ಹೇಳ್ದೆ. ನಾವು ಎದುರುತ್ತರ ಕೊಟ್ರೆ ತುಪಾಕಿಂದ ಸುಟ್ಟು ಹಾಕಿದೆ"!

"ಅವ ವಾಪಾಸ್ ಹೋಕು ಅಂತ ಆಸೆ ಇಸಿಕಂಡ್ ಇಲ್ಲಿಗೆಲ್ಲಾ ಬಂದದೆನಾ?"

ಹೂಂಕರಿಸಿಕಂಡ್ ಒಬ್ಬ ಮಾತಾಡ್ತ್.

ನಂಜಯ್ಯನ ಸ್ವರ ದೃಢ ಆತ್.

"ವಾಪಾಸ್ ಹೋಗುವ ಆಸೆ ಇಸಿಕಂಡೇ ಸಾವಿರ ಹರದಾರಿ ದೂರಂದ ಬರುವವನೆ ಅವ ಅದ್ರ ಯಾರ್ ಮರಿಬೇಡಿ!" ಪುಟ್ಟಬಸವ ಹೇಳ್ತ್.

ನಂಜಯ್ಯನವ್ರೆ, ನಡ್ದದ್ದ್ ಏನ್ ಅಂತ ನಮ್ಮ ಊರ್‌ನವ್ಕೆಲ್ಲಾ ತಿಳ್ಸಿ. ಮಹಾರಾಜರ ಆಕೇರಿನ ಸಂದೇಶನ ಅವ್ಕೆ ಮುಟ್ಸಿ."

ಸೋಮಯ್ಯನ ಸ್ವರ ಕೇಳ್ತ್.

ಹೌದೌದು. ಅದಿಕ್ಕನೆ ನಾವ್ ಬಂದದ್ದ್. ಏನಾತ್ ಅಂತ ಹೇಳಿ, ನಾವೇನ್ ಮಾಡೊಕು ಅಂತ ಹೇಳಿ"

ಒಂದ್‌ಗಳಿಗೆ ನಂಜಯ್ಯ ಮೌನಲಿ ಇತ್ತ್. ಮತ್ತೆ ಅಲ್ಲಿದ್ದವರ್‍ನೆಲ್ಲಾ ದಿಟ್ಟಿಸಿ ನೋಡ್ತ್.

ಕಾಡ್‌ನ ಅಕರೆಲು ಅಂಟಿಕಂಡಂಗೆ ಕಾಣ್ತಿತ್ತ್. ಚಂದ್ರನ ಬಿಂಬ. ಜಗಲಿನ

ಗೋಡೆನ ಆಚೆಗೆ ಮರೆಲಿ ಗಂಗವ್ವನು, ಗಿರಿಜೆನು ಕುದ್ದಿದ್ದೊ.

ತಣ್ಣಂಗೆ ಗಾಳಿ ಬೀಸಿತ್. ಮರದೆಲೆಗಂಳ್ದ ಲಾಯ್ಕಾದ ಸದ್ದ್ ಹೊರ್ಟತ್.

ನಂಜಯ್ಯ ಉದ್ದಕ್ಕೆ ಉಸುರು ಬುಟ್ಟು ಜಾಲ್ ನೋಡಿಕಂಡ್ ಇದ್ದವ ಮತ್ತೆ ತಲೆ ಎತ್ತಿ ಹೇಳ್ತ್.

"ಕೊಡಗ್‌ನ ಕರ್ಮಕಥೆ ಕೇಳಿ ನೀವುಗೆಲ್ಲಾ ಸಂಕಟವಾದು. ನಾವೀಗ ಗುಲಾಮರು ಗೊತ್ತಾತಾ? ಮಾರಿ ಬೀದಿಲಿ ಹೋಗ್ತಿತ್ತ್. ಅದರ ನಾವ್ ಮನೆಗೆ ಕರ್‍ದೊ.

* * * * *

ಬೀದಿಲಿ ಹೋಗ್ತಿತ್ತ್ ಮಾರಿ. ಕಲ್ಲ್ ಹೊಡ್ದಿದ್ದರೆ ಹಂಗೆನೆ ಅದ್ ಮುಂದಕ್ಕೆ ಹೋಗ್ತಿತ್ತ್. ಆದ್ರೆ ಕೊಡಗ್‌ನ ಅರಸಂಗ ಅದರ ಮನೆಗೆ–ಅರಮನೆಗೆ ಕರ್‍ದೊ.

ಒಬ್ಬರ ವಿರುದ್ಧ ಇನ್ನೊಬ್ಬರ ಎತ್ತಿಕಟ್ಟಿ, ಇಬ್ಬರ ಶಕ್ತಿನ ತಗ್ಗಿಸಿ ಮಧ್ಯೆ ತಮ್ಮ ಭಾವುಟನ ನೆಡ್ತಿದ್ದ ಸಮರ್ಥಂಗ ಇಂಗ್ಲೀಷರ್.

ಒಮ್ಮೆ ಕೊಡಗ್‌ನ ಅರಸ ವೀರರಾಜೇಂದ್ರ ಅವಂಗೊಂದು ಕುದುರೆ ಬೇಕುಂತ ದೂತನೊಬ್ಬನ ತಲೆಚೇರಿಗೆ ಕಳ್ಸಿತ್ತ್. ದೂತ ಮುತ್ತುಭಟ್ಟ ಕುದುರೆನ ತಕಣಿಕಾನ ಅಲ್ಲಿದ್ದ ಇಂಗ್ಲಿಷ್‌ನವ್ಕೆ ವಿಷಯ ಗೊತ್ತಾತ್ತ್. ಮುತ್ತುಭಟ್ಟನ ಮೆಲ್ಲ ಏನೇನೋ ಹೇಳಿ ಕುದುರೆ ತಕಣದಂಗೆ ಮಾಡಿ ಅವರ ಹಕ್ಕಲೆ ಕರ್‍ಕಂಡ್ ಹೋದೊ.

ಆ ಅಧಿಕಾರಿ ರಾಬರ್ಟ್ ಟ್ರೇಯ್‌ಲರ್. ಅವ ಕೇಳ್ತ್.

"ನಿಮ್ಮ ರಾಜರ್ ಸೌಖ್ಯನಾ?

"ದೇವರ ದಯೆಂದ ಸೌಖ್ಯ."

"ನಿಮ್ಮ ರಾಜಂಗೆ ಬೇಕಾದ್ದ್ ಕುದುರೆ ಅಲ?

"ಹೌದು"

"ಒಳ್ಳೆ ಅರಬ್ಬಿ ಕುದುರೆನ ನಾವು ಧರ್ಮಕ್ಕೆ ಕೊಟ್ಟವೆ"

"ಬೇಡ ಅಂತ ಹೇಳ್ದೆನಾ ಮುತ್ತುಭಟ್ಟ? ಉತ್ತರ ಕೊಡಿಕೆ ಹಿಂದೆ ಮುಂದೆ ನೋಡಿಕನ ಟೇಯ್‌ಲರ್ ಹೇಳ್ತ್.

"ನೀವು ನಾವೊಂದು ಫಿರಂಗಿ ಎಳಿಯಕೆ ಬೇಕಾಗಿ ಒಂದು ಜತೆ ಒಳ್ಳೆ ಹೋರಿ ಕೊಡಕು".

"ನಮ್ಮ ರಾಜಂಗೆ ತಿಳ್ಸುವೆ. ಅವು ಖಂಡಿತ ಒಪ್ಪುವೆ"

"ಹಂಗೆ ಮಾಡಿ"

.... ಹಿಂಗಾಗಿ ಕೊಡಗಿಗೆ ಬಾತ್ ಇಂಗ್ಲೀಷರ ಕುದುರೆ. ಕೊಡಗಿನ ಹೋರಿಗ ಫಿರಂಗಿಗಳ ಎಳಿಯಕೆ ಬೈಲಿಗೆ ಹೋದೋ.

ಸುರುಗೆ ಒಂದು ಕುದುರೆ ಹೋತ್. ಮತ್ತೆ ತುಂಬಾ... ಅವರ ಫಿರಂಗಿಸ ಅಷ್ಟೆ. ಶುರುಗೆ ಒಂದು ಮತ್ತೆ ತುಂಬಾ..

೧೭೯೦ ನೆ ಇಸವಿನ ವಿಶ್ವಾವಸು ಸಂವತ್ಸರಲಿ ಟೇಯ್‌ಲರ್, ವೀರರಾಜೇಂದ್ರನ ದೋಸ್ತಿ ಬೆಳ್ಸಿಕೆ ತಲಚೇರಿಗೆ ಕರ್ತ್.

"ನೋಡಿ ಮಹಾರಾಜರೇ, ಆ ಟಿಪ್ಪು ನಾವುಗೆಸ ವೈರಿ. ನೀವುಗೆಸ ವೈರಿ. ಹಿಂಗಿರಿಕಾನ ನಾವಿಬ್ಬರುಸ ಒಳ್ಳೆದರ್ಲಿ ಇರ್ದು ಸಾಮಾನ್ಯ ವಿಷಯ. ನಾವಿಬ್ಬರುಸ ಒಂದು ಒಪ್ಪಂದ ಮಾಡಿಕಣಮ. ಏನ್ ಹೇಳ್ರೆ?

ಟಿಪ್ಪುನ ಮೇಲೆ ಏರಿ ಹೋಕೆ ಕೊಡಗ್‌ನ ಮೂಲಕ ಮಾತ್ರ ದಾರಿಯಿರ್ದು. ಆ ಕಾರಣಕ್ಕನೆ ಬ್ರಿಟಿಷ್‌ನವ್ಕೆ ಕೊಡಗ್‌ನ ರಾಜರ ಒಳ್ಳೆದ್ ಮಾಡಿಕಣಕಾಗಿತ್ತ್. ಟಿಪ್ಪುನ ಸೋಲ್ಸಿದ ಮೇಲೆ.

ಈ ಒಳ ಗುಟ್ಟು ವೀರರಾಜೇಂದ್ರಂಗೆ ಗೊತ್ತಾತ್ಲೆ. ಕಂಪೆನಿನ ರಕ್ಷಣೆ ಮಾಡ್ರೆ ನನ್ನ ಸ್ವಾತಂತ್ರ್ಯ ನಷ್ಟ ಆದೇನೋ ಏನೋ ಅಂತ ಮಾತ್ರ ಹೆದರ್ತ್.

"ಈಗ ನೀವುಗೆ ರಕ್ಷಣೆನ ಅಗತ್ಯ ಇಲ್ಲೆಲ್ಲ"

ಆ ಟೇಯಲರ್ ಬರಿ ವ್ಯಾಪಾರಿನು ಅಲ್ಲ, ಸೇನಾನಿಸ ಅಲ್ಲ, ನುರ್ತ ರಾಜಕಾರಣಿ. ಅವ ಹೇಳ್ತ್,

"ಛೆ ಛೆ ನೀವು ತಪ್ಪು ತಿಳ್ಕಂಡೊಳರಿ. ನಮ್ಮದು ಗೆಳೆಯರೊಳಗೆ ಇರ್‌ವ ಒಪ್ಪಂದ ಅಷ್ಟೆ. ನಾವುಗೆ ಕಷ್ಟ ಬಾಕನ ನೀವು, ನೀವುಗೆ ಕಷ್ಟ ಬಾಕನ ನಾವು ಸಹಾಯ ಮಾಡ್ದು ಅಷ್ಟೆ."

"ಹಂಗಾರೆ ಆದು"

ಆ ಭೇಟಿನ ಆಕೇರಿಲಿ ಒಪ್ಪಂದ ಆತ್. ದೇವರ್, ಸೂರ್ಯ, ಚಂದ್ರ, ಭೂಮಿನ ಸಾಕ್ಷಿಯಾಗಿಸಿ ಎರಡು ಕಡೆವು ದಸ್ಕತ್ ಹಾಕಿದ ಪತ್ರ ಸಿದ್ಧ ಆತ್.

ಅದ್ ಗೆಳೆತನದ ತಬ್ಬುಗೆ ಅಲ್ಲ. ಮರಣದ ಹಿಡ್ತ. ಪ್ರಾಮಾಣಿಕ ಆದ ವೀರರಾಜೇಂದ್ರ ಅವರೆಲ್ಲಾ ಊರಿಗೆ ಕರ್ತ್.

"ಬನ್ನಿ ನಮ್ಮೂರಿಗೆ. ನಮ್ಮ ಕಾಡ್‌ಗಳ್ಲಿ ಬೇಟೆಯಾಡಿಕೆ ಲಾಯ್ಕಾದೆ. ಹೆಣ್ಣ್‌ನ ಮಕ್ಕಳಸ ಕರ್ಕಂಡ್ ಬಂದ್ ನಾಲ್ಕ್ ದಿನ ಖುಷಿಲಿರಿ"

ಅವು ಬಂದೋ. ಮಡಿಕೇರಿಲಿ ಆಂಗ್ಲ ನೆಂಟ್ರಿಗೆಂತ ಒಂದು ಮನೆನೇ ಕಟ್ಟಿಸಿತ್ ವೀರರಾಜೇಂದ್ರ. ಬಂದವು ಬೇಟೆಯಾಡ್ದೊ. ತಂಪು ಹವೆಲಿ ಮೈಮರ್ರೊ. ಕೊಡಗ್‌ನ ಭೂಭಾಗ ನೋಡಿ ಆಶ್ಚರ್ಯ ಪಟ್ಟೋ. ಮಲಯಾಳದವು, ಕನ್ನಡ ಜಿಲ್ಲೆಯವು, ಪೂರ್ವಲಿ ಮೈಸೂರು ಸೀಮೆಯವು – ಎಲ್ಲರಸ ಬಿಗಿಲಿ ಇಸಿಕಣಿಕೆ ಸರ್ಯಾದ ಜಾಗೆ...

ಅವು ವೀರರಾಜೇಂದ್ರಂಗೆ ಹೇಳ್ದೊ.

"ನೀವು ಬೇಟೆಯಾಡಿಕಾನ ನಮ್ಮವರ ಹಂಗೆ ಮಿಲಿಟರಿ ಬಟ್ಟೆ ಹಾಕಂಡ್ರೆ ಚೆನ್ನಾಗಿದ್ದದೆ"

""ಹೌದಾ?"

ಕೊಡಗ್‌ನ ಅರಸು ಆಂಗ್ಲರಂಗೆ ಉಡುಪು ಹಾಕ್ತಿತ್ ಒಮ್ಮೊಮ್ಮೆ. ಅದೂ ಒಂದು ಗತ್ತು.

ಅರಸನ ಮದ್ವೆನ ಕಾಲಲಿ ಆಂಗ್ಲರ್‌ಗೆಸ ಕಾಗದ ಹೋತ್. ಬಂದವು ಒಬ್ಬ ಸೈನ್ಯಾಧಿಕಾರಿನೊಟ್ಟಿಗೆ ಒಂದು ಸೈನ್ಯನೆ ಬಂದಿತ್ ಮದ್ವೆ ನೋಡಿಕೆ. ಅವು ಮದುವೆನಸ ನೋಡ್ದೋ, ಮತ್ತೆ ಪಟ್ಟಾಭಿಷೇಕಲಿಸ ಇದ್ದ್ ಸಾಲ್ದಂತ ಕೊಡಗ್‌ನ ಪರಿಸ್ಥಿತಿನಸ ವೀಕ್ಷಣೆ ಮಾಡ್ದೊ!

ಐರೋಪ್ಯರಿಗೆಂತ್ಲೆ ವಿಶೇಷವಾಗಿ ಇಸಿಕಂಡ ಅಡುಗೆಯವು ರಾಜ ಹೇಳ್ದಂಗೆ ಪುರುಸೊತ್ತು ಇಲ್ಲದೆ ಕೆಲಸ ಮಾಡ್ತಿದ್ದೊ. ಬಂದವುಕೆ ಇದ್ ನಮ್ಮದೆ ಮನೆಂತ ಆಗುವಂಗೆ ಆಗಿತ್ ಅಲ್ಲಿ.

ಟಿಪ್ಪುನ ಮೇಲೆ ಇಂಗ್ಲೀಷರ್ ದಾಳಿ ಮಾಡಿಕಾನ, ಕೊಡಗ್‌ಂದಾಗಿ ಹೋದ ಇಂಗ್ಲೀಷ್ ಸೇನೆಗೆ ದಾರಾಳಲಿ ಬೇಳೆ ಕಾಳ್‌ಗಳ ಕೊಟ್ಟತ್ ಕೊಡಗ್‌ನ ಅರಸ. ಇದಿಕ್ಕೆ ಸಿಕ್ಕಿದ ಪ್ರತಿಫಲಾಂತ ಹೇಳ್ರೆ ಮೈತ್ರಿ ಒಪ್ಪಂದದ ಪುನರ್ವಿಮರ್ಶೆ. ಇದರ ಪ್ರಕಾರ ಕಂಪೆನಿನ ಸ್ನೇಹ ಮತ್ತೆ ರಕ್ಷಣೆಗೆಂತ ಪ್ರತಿ ವರ್ಷ ಇಪ್ಪತ್ತನಾಲ್ಕ್ ಸಾವಿರ ರೂಪಾಯಿನ 'ಸ್ವ ಇಚ್ಛೆಂದ' ಕೊಡಿಕೆ ವೀರರಾಜೇಂದ್ರ ಒಪ್ಪ ಬೇಕಾತ್!

ಟಿಪ್ಪು ಬದ್ಕ್‌ಕಿರಿಕಾನಲೇ ಹಿಂಗೆ ಟಿಪ್ಪು ಸೋತ ಮೇಲೆ ಅಂತು ಇಂಗ್ಲೀಷರ ಹಿಡಿವವು ಯಾರಿದ್ದೊ? ಅವರ 'ಮೈತ್ರಿಯ ಅಪ್ಪುಗೆ' ಹೆಚ್ಚಿಕಂಡೇ ಹೋಗ್ತಿತ್. ಟಿಪ್ಪುನೊಟ್ಟಿಗೆ ಆದ ಈ ಯುದ್ಧಕ್ಕೆ ಇಂಗ್ಲೀಷ್‌ನವ್ಕೆ ವೀರರಾಜೇಂದ್ರ ಕೊಟ್ಟ ಸಾಮಾನು ಸರಂಜಾಮುಗಳ ಬೆಲೆ ಒಟ್ಟು 4 ಲಕ್ಷ ರೂಪಾಯಿ.

ಇಂಗ್ಲೀಷ್‌ನವು ಅರಸಂಗೆ ಹೇಳ್ದೊ.

"ನಾವು ನಿವ್ಗೆ ಕೃತಜ್ಞರಾಗಿ ಒಳೊ."

" ಆ ದುಡ್ಡುನ ನೀವು ನಂಗೆ ಕೊಡಕುಂತನೆ ಇಲ್ಲೆಂತ ಹೇಳ್ತ್ ವೀರರಾಜೇಂದ್ರ"

"ಹಂಗಾರೆ ನಾವು ಇನ್ನೂ ತುಂಬಾ ನೀವುಗೆ ಕೃತಜ್ಞರಾಗಿ ಒಳ" ಅಂತ ಹೇಳ್ದೊ ಆಂಗ್ಲರ್.

.... ದುಡ್ಡ್‌ನ ಜಾಗ್ರತಲಿ ಇಸಿಕೆ ತಮ್ಮದೆ ಆದ ವಿಶಿಷ್ಟ ಏರ್ಪಾಟ್ ಮಾಡಿದ್ದೊ ಆ ಜನ!

ಬೇಟೆಗೆಂತ ಬಂದ ಬ್ರಿಟಿಷ್ ಅಧಿಕಾರಿ ಒಬ್ಬ ಒಮ್ಮೆ ಕೇಳ್ತ್

"ಮಹಾರಾಜರೇ, ನಮ್ಮ ಕಂಪೆನಿನ ಬ್ಯಾಂಕ್‌ಲಿ ನೀವು ಯಾಕೆ ದುಡ್ಡು ಇಸಿಕಾಗದ್?"

ವೀರರಾಜೇಂದ್ರ ಹೇಳ್ತ್.

"ಆದು ಯೋಚನೆ ಮಾಡ್ನೆ"

"ಯೋಚನೆ ಮಾಡಿಕೆ ಎಂತ ಉಟ್ಟು? ನಿಮ್ಮ ದುಡ್ಡು ಲಾಯ್ಕಲಿ ಇದ್ದದೆ. ಅಲ್ಲದೆ ನಾವು ಬಡ್ಡಿಸ ಕೊಟ್ಟವೆ"

"ಆದು ಆದು ಬೇಗ ನಿಮ್ಮ ಬ್ಯಾಂಕ್‌ಲಿ ದುಡ್ಡು ಇಸಿನೆ"

ಇದಿಕ್ಕೆ ಒಂದು ಸಂದರ್ಭಸ ಒದಗಿ ಬಾತ್.

ಗಂಡು ಮಕ್ಕ ಇಲ್ಲದೆ ಇದ್ದ ಚಿಂತೆ ಅರಸಂಗೆ ಇತ್ತ್.

ಮೈಸೂರ್‌ನ ರೆಸಿಡೆಂಟನಾದ 'ಕೋಲ್' ಒಮ್ಮೆ ಮಡಿಕೇರಿಗೆ ಬಾಕನ ವೀರರಾಜೇಂದ್ರ ಅವಂಗೆ ಒಳ್ಳೆ ಸತ್ಕಾರ ಮಾಡ್ತ್. ಅರಮನೆಗೆ ಕರ್ಕಂಡ್ ಬಂದ್ ತನ್ನ ನಾಲ್ಕ್ ಹೆಣ್ಣ್ ಮಕ್ಕಳ ಪರಿಚಯ ಮಾಡಿಕೊಟ್ಟತ್ತ್.

"ಇವ್ಳು ದೇವಮ್ಮಾಜಿ, ನನ್ನ ದೊಡ್ಡ ಮಗಳ್"

"ಹೌ ಡು ಯು ಡು?"

ತಂದೆ ಮಗಳ್‌ಗೆ ಹೇಳ್ತ್.

"ಮರ್ತ್‌ಹೋತ ಆಗ ಹೇಳ್ದ್? ಬಗ್ಗಿ ಕಾಲ್‌ಗೆ ನಮಸ್ಕಾರ ಮಾಡ್"

ಅವ್ಳು ಬಗ್ಗಿ ಕಾಲಿಗೆ ನಮಸ್ಕರಿಸಿತ್.

"ಇವ್ಳು ಎರಡನೆಯವಳು"

ಕೋಲ್ ಹೇಳ್ತ್.

"ಅಕ್ಕನ ಹಂಗೆ ಇವ್ಳುಸ ಲಾಯ್ಕ ಉಟ್ಟು... ನಿಮ್ಮ ಮಕ್ಕ ಎಲ್ಲವುಸ ಸುಂದರಿಗ... ಮಕ್ಕಳ ಸೌಂದರ್ಯಕ್ಕೆ ಸ್ಪುರ ದ್ರೂಪಿಯಾದ ನಾನೆ ಹೊಣೆಂತ ವೀರರಾಜೇಂದ್ರ

ನಗಡಿಕಣ್ತ್.

ಕೋಲ್ ಮನ್ಸ್‌ಲ್ಲಿಯೇ ಲೆಕ್ಕ ಹಾಕಿತ್. ಇವನ ಮತ್ತೆ ಸಿಂಹಾಸನ ಏರಿಕೆ ಗಂಡು ಮಕ್ಕ ಇಲ್ಲೆ. ಆಗ ಈ ದೇಶದ 'ರಕ್ಷಣೆ'ನ...

ವೀರರಾಜೇಂದ್ರ ಅರಸ ಕೋಲ್‌ನೊಟ್ಟಿಗೆ ಒಂದು ವಿಷಯನ ಹೇಳ್ತ್.

ನನ್ನದೊಂದು ಆಸೆ ಉಟ್ಟು. ಕಂಪೆನಿಯವು ಇದರ ನಡ್ಸಿಕೊಡಕು.

ಕೋಲ್ ಸಂತೋಷಲಿ ಹೇಳ್ತ್.

ಆದು ಅದಕ್ಕೇನ್‌ಗಡ?

"ನಮ್ಮ ಮಗಳ ಹೆಸ್‌ರ್ಲಿ 6 ಲಕ್ಷ ರೂಪಾಯಿನ ನಿಮ್ಮ ಮದರಾಸು ಬ್ಯಾಂಕ್‌ಲಿ ಇಸುವೆ.

"ಓಹೋ"! ಆದು!

ಹಂಗೆನೆ ಬೊಂಬಾಯಿಲಿಸ ನಿಮ್ಮ ಹತ್ರ ದುಡ್ಡು ಇಸುವೆ.

"ಸಂತೋಷ"

ಮುಂದೆ ಸ್ವಲ್ಪ ಸಮಯಲಿ ಅರಸ, ರಾಜಮುದ್ರೆನ ಮಗಳ ಕೈಗಿಸಿ ತೀರಿಹೋತ್. ಆ ಮನೆತನಕ್ಕೆ ಸಹಾಯ ಮಾಡಕು ಅಂತ ಇಂಗ್ಲೀಷರೇನು ಮುಂದೆ ಬಾತ್ಲೆ.

ದೇವಮ್ಮಾಜಿನ ಪರವಾಗಿ ಅಧಿಕಾರ ತಕಂಡ ಚಿಕ್ಕಪ್ಪ ಲಿಂಗರಾಜ ಎರಡು ವರ್ಷ ಆಕನ ಕೊಡಗಿಗೆ ನಾನೆ ರಾಜ ಅಂತ ಹೇಳಿಕಣ್ತ್.

ಅವನ ಕಾಲಲಿ ರಾಜ್ಯ ಸರಹದ್ದು ಭದ್ರವಾಗಿತ್ತ್.

"ರೈತರ್ ಲಾಯ್ಕಲಿರಕು. ಅದ್ಕೆ ಬೇಕಾಗಿ ಬೇಸಾಯ ಮಾಡುವ ಭೂಮಿನ 'ಮಣ್ಣ್‌ನ ಗುಣಕ್ಕೆ' ಸರಿಯಾಗಿ ಕಂದಾಯ ನಿಗದಿ ಮಾಡಕು".

ಹಂಗೆ ಕಂದಾಯ ಲಿಂಗರಾಜಂಗೆ ಬರುವಂತಾತ್. ರೈತಂಗೆ ಮತ್ತೆ ಭೂಮಾಲಿಕಂಗೆ ಇರುವ ಸಂಬಂಧನ ನೋಡಿಕಂಡ್ ಐವತ್ತೆರಡ್ 'ಹುಕುಂ'ಗಳ ಲಿಂಗರಾಜ ಹೊರಡಿಸಿತ್ತ್. ಮಡಿಕೇರಿಲಿ ಅರಮನೆ ಸಿದ್ಧ ಆತ್. ಓಂಕಾರೇಶ್ವರ ದೇವಸ್ಥಾನ ನಿರ್ಮಾಣ ಆತ್.

ಲಿಂಗರಾಜ ಒಳ್ಳೆ ಆಡಳಿತಗಾರ, ಚತುರ ಕುದುರೆ ಸವಾರನು ಹೌದು. ಒಂದು ವರ್ಷಕ್ಕಿರುವ ದಿನಗಳ ಸಂಖ್ಯೆಂದ ಜಾಸ್ತಿ ಹುಲಿಗಳ ಕೊಂದ ವೀರ.

ಅವರಿನ್ದ್ ಕೊಡಗ್‌ನ ಬೆಳ್ಸಿದ ರಾಜ್ಯಭಾರ ಆಗಿತ್ತ್. ಇಂಗ್ಲೀಷ್ ಸರಕಾರದವು ಬೇಟೆಯಾಡಿಕೆ ಕೊಡಗಿಗೆ ಆಗಲೂ ಬಂದಿದ್ದೊ. ಆದರೆ ಅವ್ಕೆ ಗೊತ್ತಿತ್ತ್ ಲಿಂಗರಾಜನ ಕಾಲಲಿ ಕೊಡಗ್‌ನ ಆಕ್ರಮಿಸಿಕೆ ಆಕಿಲೆ ಅಂತ.

... ಅಪ್ಪನ ಮತ್ತೆ ಪಟ್ಟಕ್ಕೆ ಬಂದದ್ ಅವನ ಮಂಜ ವೀರರಾಜ. ದಕ್ಷತೆಲಿ ಲಿಂಗರಾಜಂದ ಕಡಿಮೆ ಇತ್ಲೆ. ಬಿಸಿರಕ್ತದ ಹೈದ. ಇಂಗ್ಲೀಷರ ದೃಷ್ಟಿಲಿ ಅವ ಸುಮಾರು ದುರ್ಗುಣಗಳ ಮೂರ್ತಿಯಾಗಿತ್ತ್. ಆ ದುರ್ಗುಣ ಎಂತಂತ ಹೇಳ್ರೆ ಅವನ ಸ್ವಾಭಿಮಾನ ಮತ್ತೆ ಸ್ವಾತಂತ್ರ್ಯ ಪ್ರಿಯತೆ!

ತಾತ ವೀರರಾಜೇಂದ್ರ ದಿನಗಳಂದ್ಲೆ ಅವ ಇಲ್ಲಿವರ್ಗೆ ಎಲ್ಲನುಸ ನೋಡಿಕಂಡೇ ಬಂದಿತ್ತ್. ಆಂಗ್ಲರ ಕರ್ದು ತಬ್ಬಿಕಣುವ ಅಗತ್ಯ ಇಲ್ಲೆಂತ ಚಿಕ್ಕವೀರರಾಜಂಗೆ ಆಗಿತ್ತ್. ಬರಿ ವ್ಯಾಪಾರಿಗಳಾಗಿತ್ಲೆ ಆ ಜನ. ಭಾರತದ ಭಾಗನ್ನೆಲ್ಲಾ ಕಂಪೆನಿ ಸರಕಾರ ಆಕ್ರಮಿಸ್ತ ಇತ್ತ್. ತಕ್ಕಡಿನ ತಟ್ಟೆಗಳ ತೆಗ್ದಿಸಿ, ಉಳ್ದ ಕೋಲುನನ್ನೇ ಆಯುಧನಾಗಿ ಬೀಸ್ತಿದ್ದೊ ಬ್ರಿಟಿಷಂಗ.

ವೀರರಾಜಂಗೆ ಸ್ವಾಮಿನಿಷ್ಠರಾಗಿ ಎಂತೆಂತ ಸಂಗಡಿಗರಿದ್ದೊ! ಸಣ್ಣದಾಗಿ ಸುಸಜ್ಜಿತ ಆಗಿತ್ತ್ ಅವನ ಸೇನೆ! ಎಷ್ಟ್ ನಿಷ್ಠರಿದ್ದ್ ಏನ್ ಪ್ರಯೋಜನ? ಗದ್ದುಗೆನ ಮೇಲೆ ಕಣ್ಣಿದ್ದವ್, ಒಬ್ಬ ಇಬ್ಬರಾ? ದೇವಮ್ಮಾಜಿನೆ ಗಂಡನೊಟ್ಟಿಗೆ ಶ್ರೀರಂಗಪಟ್ಟಣಕ್ಕೆ ಓಡಿ ಹೋಗಿ ಆಂಗ್ಲ ರೆಸಿಡೆಂಟನ ಮುಂದೆ ಕುರ್ನಿಸು ಮಾಡಿಕಣ್ತ್.

"ನನ್ನ ಚಿಕ್ಕಪ್ಪನ ಮಂಜ ತುಂಬಾ ಕೆಟ್ಟವ. ಅವನ ಸೋಲ್ಸಿ ನನ್ನ ರಾಣಿನನ್ನಾಗಿ ಮಾಡಿ ಖಾವಂದರೆ." ರೆಸಿಡೆಂಟ್ ಈ ಮಾತಿಗೆ ಉಲ್ಪ ಹೊಡಿಯಕೆ ಸಾದ್ಯ ಉಟ್ಟಾ ಯಾಗಾದ್ರು?

"ನೀನ್ ಹೆದ್ರ್‌ಬೇಡ, ಧೈರ್ಯಲಿರ್. ಅವಂಗೆ ನಾವ್ ಬುದ್ಧಿ ಕಲ್ಸುವೆ.

ಬುದ್ಧಿ ಕಲ್ಸುವ ವಿಧಾನತೇಳ್ರೆ ಕೊಡಗ್‌ನ ಮೇಲೆ ದಾಳಿ ಮಾಡ್ದು. ಆಂಗ್ಲರ ಸೈನ್ಯಕ್ಕೆ, ಅವರ ಅಧಿಕಾರಿಗಳಿಗೆ, ಕುದ್ರೆಗಳಿಗೆ ಹೋರಿಗಳಿಗೆ ಕೊಡಗ್ ಗೊತ್ತಿಲ್ಲದ ಊರಾಗಿತ್ಲೆ. ಹಿಂದೆ ಪ್ರಾಣಿಗಳ ಬೇಟೆಯಾಡಿಕೆ ಬಂದವು ಈಗ ನರಬೇಟೆಗೆ ಬಂದಳೊ ಅಷ್ಟೆ.

ಖರ ಸಂವತ್ಸರಲಿ ಸುರು ಆತ್. ಸ್ವಾತಂತ್ರ್ಯನ ಕದಿವ ಅಧರ್ಮ ಯುದ್ಧ, ಸ್ವಾತಂತ್ರ್ಯನ ಕಾಪಾಡಿಕೆ ಧರ್ಮಯುದ್ಧ. ಕೊಡಗಿನ ದಳಪತಿಗ, ವೀರಂಗ ಹೇಳ್ದೊ.

"ಪರ್‌ದೇಶಿಗಳ ಸೊಕ್ಕುನ ಮುರ್‍ಯಕು. ಅವರ ಪುಳ್ಳಿಗ, ಮರಿಮಕ್ಕ ಮರಿಯದಂತ ಪಾಠ ಕಲ್ಸಕು. ನಮ್ಮ ಭೂಮಿನ ಜನರ ಗುಲಾಮಗಳಾಗಿ ಮಾಡ್ದು ಬೊಂಬೆ ಆಟ ಆಗಿಟ್ಟು ಇವ್ಕೆ!"

ವೀರರಾಜ ಆಜ್ಞಾಪಿಸಿತ್.

"ಗಡಿಗಳ ಗಟ್ಟಿ ಮಾಡಿ! ಸೈನ್ಯದ ಬೇರೆ ಬೇರೆ ಕಡೆಗೆ ತಕಂಡ್ ಹೋಗಿ!"

ಉತ್ತರ, ದಕ್ಷಿಣ ಪಶ್ಚಿಮ ದಿಕ್ಕ್‌ಂದ್ ಬಂದ ಆಂಗ್ಲ ಸೇನೆಗ ಕೊಡಗ್‌ನ ವೀರರ ಹೊಡ್ತನ ಸಹಿಸಿಕೆ ಆಗದೆ ಸೋತ್ ತಿರ್‍ಗಿ ಹೋದೊ. ಪಿರಿಯಾಪಟ್ಟಣದ ದಾರಿಲಿ ಬಂದ ಸೈನ್ಯ ಮಾತ್ರ ಸರಿಯಾದ ಪ್ರತಿಭಟನೆ ಇಲ್ಲದರ್‌ಂದ ಮುಂದುವರ್‍ಕಂಡ್ ಬಾತ್.

ಆಗ ನಾಲ್ಕುನಾಡು ಅರಮನೆಲಿ ಅರಸ ಮಾತ್ರ ಇತ್ತ್. ಅವನ ಸಹಚರಂಗ ಎಲ್ಲವು ಯುದ್ಧರಂಗಲಿದ್ದೊ.

ಆ ಸಮಯಲಿ ಅಪ್ಪಾರಂಡ ಬೋಪು ದಿವಾನ ಅರಮನೆಲಿದ್ದ ವೀರರಾಜನೊಟ್ಟಿಗೆ ದ್ರೋಹಿಗಳ ಪರವಾದ ಒಂದು ಸಲಹೆ ಕೊಟ್ಟತ್.

"ಈಗ ಒಪ್ಪಂದ ಮಾಡಿಕಂಬದು ಒಳ್ಳೆದು ಮಹಾರಾಜರೇ". ವೀರರಾಜೇಂದ್ರ ಹೇಳ್ತ್.

"ಇಂಗ್ಲೀಷರ ತಡ್ದ್ ನಿಲ್ಲುವ ವೀರಂಗ ಇಲ್ಲದೆ ಹೋದನ ಈ ಕೊಡಗ್‌ಲಿ"?

"ಹಂಗೆಲ್ಲ ಮಹಾರಾಜರೇ, ಸಧ್ಯಕ್ಕೆ ಅವರ ಸೇನೆ ಬಲಿಷ್ಠಲಿ ಉಟ್ಟು. ಪರಿಸ್ಥಿತಿಗೆ ತಕ್ಕಂಗೆ ತಂತ್ರ ಬದಲಾಯ್ಸಿರೆ ನಾವುಗೆ ಒಳ್ಳೆದಲ.

ತನ್ನ ಅಸಹಾಯಕತೆಗೆ ಸಿಡಿಕಿಕಂಡ್ ವೀರರಾಜ ಹೇಳ್ತ್.

"ಪರ್‌ದೇಶಿಗಳ ವಿಷಯಲಿ ನೀವ್‌ಯಾಗೊಳು ಪಕ್ಷಪಾತನೆ ತೋರ್‍ಸಿರೆ. ನೀವು ಅವರ ಪರ ಮಾತಾಡ್ದು ನೀವುಗೆ ಗೊತ್ಲೆನಾ ದಿನಾವರೇ?"

"ನೀವು ಆಜ್ಞೆ ಮಾಡ್ರೆ ಯುದ್ಧರಂಗಲಿ ಈಗಿಂದೀಗಲೇ ಪ್ರಾಣ ಬುಡಿಕೆ ನಾನ್ ತಯಾರೊಳೆ. ಆದರೆ ಕೊಡಗು ದೇಶ ಇಂಗ್ಲೀಷರ ವಶ ಆದೆ. ಇದ್ ಗ್ಯಾರಂಟಿ".

"ನನ್ನ ಮಾತ್‌ನ ಕೇಳಿ ಮಹಾರಾಜರೇ. ಈಗ ಒಪ್ಪಂದ ಮಾಡಿಕಣಮ."

"ನಿಮ್ಮಿಷ್ಟದಂಗೆ ಆಗಲಿ ದಿವಾನರೇ. ಆದರೆ ಒಂದು ವಿಷಯ ನೆಂಪಿರ್‍ಲಿ. ಈ ಒಪ್ಪಂದಂದ ಕೊಡಗ್‌ನ ಸ್ವಾತಂತ್ರ್ಯಕ್ಕೆ ಕೇಡಾದರೆ ಅದಿಕ್ಕೆ ನೀವೆ ಹೊಣೆ ಆಕು."

ಅಪ್ಪಾರಂಡ ಬೋಪು ದಿವಾನ ಮರು ಮಾತಾಡ್ತ್‌ಲೆ. ಇಂಗ್ಲೀಷ್ ಸೇನೆನ ಕಾಂಬಕೆಂತ ನಾನೂರು ಜನ ಸೈನಿಕರೊಟ್ಟಿಗೆ ಅವ ಹೊರ್‍ಟತ್. ಯಾವ ಶರತ್ತುಸ ಇಲ್ಲದೆ ಕುಶಾಲನಗರಲಿ ಶರಣಾಗತಿ ನಡ್ತ್.

ಗೆದ್ದ ಪ್ರೇಸರ್ ಮಡಿಕೇರಿಗೆ ಹೋತ್. ಸ್ನೇಹದ ಒಪ್ಪಂದ ಅಂತ ಅದರ ಕರ್‍ದವು ಯಾರ್? ರಾಜರ ಧ್ವಜ ಇಳ್ದ್ ಬ್ರಿಟಿಷರ ಧ್ವಜ ಕೋಟೆನ ಮೇಲೆ ಏರ್‍ತ್.

ನಾಲ್ಕುನಾಡು ಅರಮನೆಂದ ತಿರ್‍ಗಿ ಬಂದ ವೀರರಾಜೇಂದ್ರ ರಾಜಖೈದಿ ಆತ್!

ಕೊಡಗ್ ದೇಶನ ಇನ್ನೂರ್ ವರ್ಷಗಂಳ್ದ ಆಳಿಕಂಡಿದ್ದ ರಾಜಮನೆತನದವರ ಆಂಗ್ಲರ್ ಹಿಂಗೆ ಮೂಲೆಗುಂಪು ಮಾಡ್ದೊ. ಗುಲಾಮಗಿರಿಂತ ಹೇಳ್ರೆ ಎಂತತ ಗೊತ್ತಿಲ್ಲದ ಜನಕ್ಕೆ ಅವು ಬೇಡಿ ಹಾಕಿದ್ದೊ.

* * * * *

ಕುತ್ತಿಗೆನ ನರಂಗ ಹೊರ್ಟ್ ಬಂದ್ ನಂಜಯ್ಯನ ಬಾಯಿಂದ ಮುಂದೆ ಮಾತ್ ಹೊರ್ಟತ್ಲೆ. ಅವ ತುಟಿ ಕಚ್ಚಿ ದೊಡ್ಡದಾಗಿ ಸೇಂಕಿಕಣ್ತ್. ಎಲ್ಲವು ಸುಮ್ಮನಿದ್ದೊ. ಗಾಳಿಸ ಬೀಸುದರ ನಿಲ್ಸಿತ್ತ್. ಚಂದ್ರನ ಶೀತಲ ಕಿರಣಗ ಮಾತ್ರ ಅಲ್ಲಿದ್ದವರ ಮೈನ ಕೊರಿತ್ತಿತ್ತ್.

೪

ಈ ಮೌನಕ್ಕೆ ಕೊನೆನೇ ಇಲ್ಲೆ ಆಗಿರಕು ಅಂತ ನೆನ್ಸಿಕಂಡ ಎರ್ಡ್ ನಿಮಿಷದ ಮೌನನ ಸೋಮಯ್ಯನ ಮಾತ್ ಎಲ್ಲರ ಎಚ್ಚರಗೊಳ್ಸಿತ್ತ್.

"ಬೇರೆ ಯಾರಾರ್ ಹೇಳಿದ್ದರೆ ಈ ಸುದ್ದಿನ ನಾವು ನಂಬ್‌ತಿತ್ಲೆ. ಯುದ್ಧಲಿ ಸೋಲದೆನೆ ಇನ್ನೊಬ್ಬಂಗೆ ಶರಣಾದು ಅಂದರೆ ಎಂತ? ಭಾಷೆ, ದೇಶನೇ ಗೊತ್ತಿಲ್ಲದವು ನಮ್ಮ ಆಳ್ದುಂತೇಳ್ರೆ? ನಮ್ಮ ಜನರ ಪೈಕಿ ವೀರರೇ ಇಲ್ಲದಂಗೆ ಆತ? "ನಮ್ಮ ಜನ್ಮಕ್ಕಿಷ್ಟ್ ಬೆಂಕಿ!"

ಸೋಮಯ್ಯನನ್ನೇ ನೆಟ್ಟ ನೋಡಿಕಂಡ್ ನಂಜಯ್ಯ ಹೇಳ್ತ್.

"ವೀರಂಗ ವಿರಾಗಿಗಳಾಗ್ಯೊಳೊ. ಹೇಡಿಗ ಈ ಮಹಾನುಭಾವಗ. ತಾಯಿ ನಾಡಿಗೆ ದ್ರೋಹ ಮಾಡ್ದ ಧೂರ್ತಂಗಳೇ ರಾಜಕಾರಣಿಗ!

"ಈ ದರ್ಬಾರ್ ಮೂರು ದಿನಂದ ಜಾಸ್ತಿ ಇರ್ದುಲೆ."

"ಸರಿಯಾಗಿ ಹೇಳ್ದ ಕರಿಯಪ್ಪ" ಅಂತ ಇನ್ನೊಂದು ಸ್ವರ ಹೇಳ್ತ್.

ಚೆಟ್ಟಿ-ಕರ್ತು ಕುಡಿಯರು ಬೆನ್ನ್ ನೀಂಡಿ ಕುದ್ದೊ. ಅಲ್ಲಿ ಸೇರ್ದ ಜನರ ಮನೋಭಾವ ಕಂಡ್ ಖುಷಿಯಾಗಿತ್ತ್ ಅವ್ಕೆ.

ಎಲ್ಲದರಸ ನೋಡಿಕಂಡ್ ಕುದ್ದ್ ಪುಟ್ಟಬಸವ ಹೇಳ್ತ್.

"ಪರಕೀಯರ ಧ್ವಜ ಮೇಲೇರ್ದ ಮೇಲೆ ಏನಾತ್ ಹೇಳಿ ನಂಜಯ್ಯನವೇ,

ಸೋಮಯ್ಯನು ಒಟ್ಟಿಗೆ ಹೇಳ್ತ್.

"ಮುಂದೆ ಎಂತಾತ್ ಹೇಳಿ"

ನಂಜಯ್ಯ ಒಂದು ನಿಮಿಷ ನೆಲ ನೋಡಿಕಂಡಿದ್ದ್, ಮತ್ತೆ ತಲೆ ಎತ್ತಿ ಹೇಳಿಕೆ ಸುರು ಮಾಡ್ತ್.

"ಬೀದಿನ ಮಾರಿ ಮನೆ ಸೇರ್ದ ಮೇಲೆ..."

* * * * *

ಬೀದಿನ ಮಾರಿ ಮನೆಗೆ ನುಗ್ಗಿದ ಮೇಲೆ, ನಿಮಿಷಸ ತಡಮಾಡದೆ ಎಲ್ಲದರ ಅಧೀನಕ್ಕೆ ತಕಣಿಕೆ ಸುರು ಮಾಡ್ತ್. ಉತ್ತರ, ದಕ್ಷಿಣ, ಪಶ್ಚಿಮದ ಕೊಡಗ್ ಸೇನೆಗಳ ಬೋಪು ದಿವಾನನ ಮೂಲಕನೇ ಇಂಗ್ಲೀಷರ್ ಯುದ್ಧಕ್ಕೆ ಕರೆ ಕಳ್ಸಿದ್ದೊ. ಕೊಡಗ್‌ನ ಎಷ್ಟೋ ಜನ ಇದ್ ಕನಸಾಗಿರಕು ಅಂತ ನೆನ್ಸಿಕಂಡೊ! ದುಡ್ಡುನ ಆಸೆಗೆ ಸುಮಾರ್ ಜನ ಅವರ್ನ ಅವ್ವೇ ಮಾರಿಕಂಡೊ. ಒಂದಾಗಿದ್ದ ಜನಾಂಗ ಬಿರುಕು ಬುಟ್ಟತ್. ಆ ಬಿರುಕುಗಳ ಆಂಗ್ಲರ್ ಆಪು ಹೊಡ್ದ್ ಒಡ್ದದರ ಇನ್ನೂ ಹೆಚ್ಚಿಗೆ ಮಾಡ್ದೊ.

ಅರಸರ ಮನೆಲಿ ಪರದೇಶಿಗಳ್ದ್ ದರ್ಬಾರ್! ಹಿಂದೆ ಬೇಟೆಯಾಡಿಕೆ ಬ್ರಿಟಿಷಂಗ ಬಾಕನ ಅವ್ಕೆ ಮಲ್ಗಿಕ್ಕೆ ಅತಿಥಿ ಗೃಹಂತ ಮಾಡಿತ್ತಲ್ಲ ದೊಡ್ಡರಾಜೇಂದ್ರ? ಆ ಮನೆಲಿ ಈಗ ಚಿಕ್ಕವೀರರಾಜೇಂದ್ರನನ್ನೂ ಅವನ ಕುಟುಂಬನನ್ನು ಕೈದಿಗಳಾಗಿ ಕೂಡಿ ಹಾಕಿದ್ದೊ ಈಗ.

ಎಲ್ಲ ಕಡೆಲಿಸ ಎಸಂಡ್‌ನ ಹಾಂಗೆ ಕೊಂಬುನ ಹಾಕಿ ಮಣ್ಣ್‌ನ ಗಟ್ಟಿ ಹಿಡ್ಕಂಡಿತ್ತ್ ವಿದೇಶಿಗಳ ಪ್ರಭುತ್ವ. ಪ್ರತಿಭಟಿಸಿದವ್ಕೆಲ್ಲಾ ಜೈಲುವಾಸ ಕಟ್ಟಿಟ್ಟ ಬುತ್ತಿ.

ಕೂಡಿಹಾಕಿಕಂಡಿರಿಕಾನ ವೀರರಾಜೇಂದ್ರ ಸಿಟ್ಟ್‌ಲಿ ಬೆಂದ್ ಕಿಡಿ ಕಾರ್‌ತ್ತಿತ್ತ್. ತನ್ನ ತಲೆಕೂದ್ಲುನ ಕಿತ್ತ್‌ಕಣ್ಣ್‌ತ್ತಿತ್ತ್. ಮುಷ್ಠಿಮಾಡಿ ಎದೆಗೆ ಬಡ್ಕಣ್‌ತ್ತಿತ್ತ್. ದ್ರೋಹಿಗಳಿಗೆ ಶಾಪ ಹಾಕ್ತಿತ್ತ್.

"ಬ್ರಿಟಿಷ್‌ನ ಸೈನ್ಯದ ಅಧಿಕಾರಿನ ಕೂಡ್ಲೆ ನಾನ್ ನೋಡೊಕು" ಅಂತ ಸುಮಾರ್ ಸಲ ಕಾವಲ್‌ನವರೊಟ್ಟಿಗೆ ಹೇಳಿಕಳ್ಸಿತ್.

ಪ್ರೇಸರನ ಬದ್ಲ್ ಬೋಪು ದಿವಾನ ಬಾತ್. ಕಾವಲ್‌ನವ ಹೇಳ್ತ್.

"ಮಹಾರಾಜರ ನೋಡಿಕೆ ದಿವಾನ ಸಾಹೇಬರು ಬಂದಳೋ"

"ವೀರರಾಜೇಂದ್ರನ ಮೈಯೆಲ್ಲಾ ಉರ್ದ್ ಹೋತ್"

"ಯಾರ್ ದಿವಾನ?"

"ಬೋಪು ದಿವಾನರು"

"ಜೋಕೆ! ಇನ್ನೊಮ್ಮೆ ಅವನ ದಿವಾನ ಅಂದರೆ ಜೋಕೆ. ಅವನ ದಿವಾನ

ಕೆಲ್ಸಂದ ತೆಗ್ದ್ ಆಗಿಟು.

ಬೋಪು ಬಂದ ದಾರಿಗೆ ಸುಂಕ ಇತ್ಲೆ. ರಾಜವಂಶನ ಸಂಹಾರ ಮಾಡಿಕೆ ಪ್ರೇಸರಂಗೆ ನಿಮಿಷದ ಕೆಲಸ. ಆದರೆ ದುಡುಕಿಗೆ ಸಿದ್ಧ ಇತ್ಲೆ. ಭಾರಿ ರಾಜಕಾರಣಿ ಅವ. ಪ್ರೇಸರ್ ಹೇಳ್ತ್.

"ಮಿಸ್ಟರ್ ಬೋಪು ದಿವಾನ, ನಿಮ್ಮ ರಾಜಂಗೆ ತೊಂದರೆ ಕೊಡಕುಂತ ನಮ್ಗೇನು ಇಲ್ಲೆ. ನಿಮ್ಮ ಕೊಡಗ್‌ನ ಜನರ ಉದ್ಧಾರಕ್ಕೆ ನಾವು ಇಲ್ಲಿಯೆ ಇರ್ದು ಒಳ್ಳೆದು. ನಿಮಿಗಂತು ಈ ವಿಷಯ ಮನ್ಸಿಗಾಗಿಟು ಅಲಾ?

ಶರಣಾದು ಒಳ್ಳೆದುಂತ ರಾಜಂಗೆ ಹೇಳ್ದ ಕೂಡಲೇ 'ಈ ವಿಷಯ' ಮನ್ಸಿಗಾಗಿಟು ಬೋಪುಗೆ.

"ಹೌದು ಕರ್ನಲ್ ಸಾಹೇಬ್"

"ಇಲ್ಲಿನ ಪರಿಸ್ಥಿತಿನ ಸರಿಪಡ್ಸುವ ಕಾರ್ಯಲ್ಲಿ ನಿಮ್ಮನ್ನೆ ನಾವು ನಂಬ್ಯೊಳೊ"

ಬೋಪುಗೆ ಖುಷಿ ಆತ್. ಕುಂಪಣಿ ಸರಕಾರದ ಪ್ರತಿನಿಧಿ ಎಷ್ಟ್ ದೊಡ್ಡ ಮಾತಾಡ್ತ್ ತನ್ನ ವಿಷಯಲಿ!

"ನನ್ನ ದೇಹಲಿ ಪ್ರಾಣ ಇರುವರ್ಗು ನೀವು ಹೇಳ್ದಂಗೆ ದುಡ್ದನೆ"

ಅಂದ್‌ನ ಅರಸಂಗೆ ಅವ 'ಹೇಳ್ದಂಗೆ ದುಡ್ಡದ್' ವಿಷಯ ಪ್ರೇಸರ್‌ಗೆ ಗೊತ್ತಿತ್ಲೆನಾ? ದೇಶದ ಎಲ್ಲಾ ಕಡೆಲಿ ಇದ್ದ ಇಂಥವೆ ಬ್ರಿಟಿಷ್ ಸರಕಾರಕ್ಕೆ ನೆರವಾಗ್ತಿದ್ದೊ.

ಪ್ರೇಸರ್ ನಗಾಡಿಕಂಡ್ ಹೇಳ್ತ್. "ಈ ವಿಷಯಲಿ ನಾವುಗೆ ಸಂಶಯನೆ ಇಲ್ಲೆ ಬೋಪು ದಿವಾನ."

"ನೀವು ತೋರ್ಸುವ ವಿಶ್ವಾಸಕ್ಕೆ ಋಣಿ, ಕರ್ನಲ್ ಸಾಹೇಬರೇ". ಪ್ರೇಸರನ ಮನ್ಸ್‌ಲಿ ಇದ್ದ ಉಪಾಯತೇಕ್ರೆ ರಾಜನ ಕೂದಲ್ ಅಲ್ಲಾಡ್ರು ತೊಂದರೆ ಉಟ್ಟು. ಜೇನುನೊಣಗಳ ಕೆರ್ಲ್ಸಿ ಬದ್ಕಿಕಾದೆನಾ? ಕೊಡಗ್‌ನ ಕಾಡ್‌ಲಿ ಎಷ್ಟೊಂದಿಲ್ಲೆ ಜೇನ್ ಗೂಡ್‌ಗ...

ತನ್ನ ಕೆಳಗಿನ ಅಧಿಕಾರಿ ಲಿಹಾರ್ಡಿಗೆ ಪ್ರೇಸರ್ ಹೇಳ್ತ್.

"ರಾಣಿಹುಳುನ ಉಪಾಯಲಿ ಬೇರೆ ಕಡೆಗೆ ಸಾಗ್ಸಿರೆ ಉಳ್ದ ನೊಣಂಗ ತಣ್ಣಗಾದವೆ."

ಮತ್ತೆ ಬೋಪುನೊಟ್ಟಿಗೆ ಮಂತ್ರಾಲೋಚನೆ ಮಾಡ್ತ್. ಅವ ಹೇಳ್ತ್.

"ಉತ್ತರ ಹಿಂದೂಸ್ಥಾನಲಿ ಸಂಚಾರ ಮಾಡೊಕು. ಅಲ್ಲಿರ್ವ ರಾಜರೊಟ್ಟಿಗೆ

ಗೆಳೆತನ ಬೆಳ್ಸಕು ಅಂತ ವೀರರಾಜರು ಹಿಂದೆ ಹೇಳ್ದುಟ್ಟು".

"ಹಷ್ಹ! ಅವರೊಟ್ಟಿಗೆ ಗೆಳೆತನಂದ ಹೇಳ್ದರ್ಯ? ಅವ್ಕೆಲ್ಲಾ ಆಗಲೇ ವ್ಯವಸ್ಥೆ ಮಾಡ್ಯೊಳೆ."

ಅವರ ಯೋಚನೆ ಬುಟ್ಟುಬಿಡಿ. ಬೋಪು ದಿವಾನ ಯೋಚಿಸಿ ಹೇಳ್ತ್.

"ರಾಜರ್ ಯಾವ್ದೊ ಊರ್ಗೆ ಯಾತ್ರೆ ಹೋಗ್ಯೊಳೊ ಅಂತೇಳ್ರೆ ಜನಕ್ಕೆ ಬೇಜಾರ ಆಕಿಲ್ಲೆ."

ಪ್ರೇಸರನ ಮುಖಲಿ ಖುಷಿ ಕಂಡತ್.

ಆದು! ಕಾಶಿ ಪವಿತ್ರ ಕ್ಷೇತ್ರಗಡ ಅಲಾ? ನಿಮ್ಮ ರಾಜ ಅಲ್ಲಿಗೆ ಹೋಗಲಿ. ಅಲ್ಲಿ ಅವರ ನಾವು ನೋಡಿಕಂಡವೆ. ಹಂಗೆ ಹೇಳಿಕಾನ ಪ್ರೇಸರನ ಬಲಕಣ್ಣ್ ಸಣ್ಣದಾತ್. ತುಟಿಲಿ ನಗೆನು ಬಾತ್. ನಂಗುನು ಅರ್ಥ ಆತ್‌ಂತ ಬೋಪು ಹಂಞ ನಗಾಡ್ತ್.

ಬೋಪು ಮಹಾರಾಜಂಗೆ ಹೇಳಿ ಕಳ್ಸಿತ್.

"ನನ್ನ ಮೇಲೆ ಸುಮ್ಮನೆ ಸಿಟ್ಟ್ ಮಾಡಿಕಂಡೊಳರಿ. ನಾಳೆ ಎಲ್ಲಾ ಗೊತ್ತಾಕನ ನನ್ನ ಪ್ರಾಮಾಣಿಕತೆನು ನೀವುಗೆ ಗೊತ್ತಾದೆ. ನಿಮ್ಮೊಟ್ಟಿಗೊಂದು ವಿಷಯ ಮಾತಾಡಿಕುಟ್ಟು ಅವಕಾಶ ಕೊಟ್ಟರೆ.."

ಉಪಾಯ ಇಲ್ಲದೆ ವೀರರಾಜೇಂದ್ರ ದೂತಂಗೆ ಹೇಳಿಕಳ್ಸಿತ್.

"ಬಂದ್ ಹೋಗಲಿ!"

ಮಧ್ಯರಾತ್ರಿಲಿ, ಇಂಗ್ಲೀಷರ ಕಣ್ಣ್ ತಪ್ಪ್‌ಸಿ ಬಂದ ಹಾಂಗೆ ನಾಟಕ ಮಾಡಿಕಂಡ್ ವೀರರಾಜೇಂದ್ರನ ಭೇಟಿ ಆಕೆ ಹೋತ್.

ಸಿಟ್ಟ್‌ನೆಲ್ಲಾ ನುಂಗಿಕಂಡ್ ವೀರರಾಜೇಂದ್ರ ಹೇಳ್ತ್.

"ಕೊಡಗಿನ ಸ್ವಾತಂತ್ರ್ಯಕ್ಕೆ ಕೇಡಾದರೆ ನೀವೇ ಹೊಣೆ ಆದರೆಂತ ಹಿಂದೆ ಹೇಳ್ದ್ ನೆಂಪಾತಾ?

"ಹೆಂಗೆ ಮರ್ತು ಹೋದು ಮಹಾರಾಜರೇ?"

"ಹಂಗಾರೆ ಈಗೇನ್ ಹೇಳ್ರೆ?"

ನಂಗೆ ಹಂಞ ಸಮಯ ಕೊಡಿ. ನಮ್ಮ ಎಷ್ಟೊ ಜನರ ಸರದಾರರ ಕಟ್ಟಿ ಇಸ್ಯಳೊ. ಕೆಲವು ಜನ ಕಾಂಬದುಲ್ಲೆ. ಪರಿಸ್ಥಿತಿ ಸರಿ ಆದ ಮೇಲೆ ಎಲ್ಲವು ಒಟ್ಟಿಗಿ.

"ಅರ್ಥ ಇಲ್ಲದ ಮಾತ್"

ಬೋಪು ಹಂಞ ಹೊತ್ತು ಸುಮ್ಮನ್ನಿದ್ದ್ ಹೇಳ್ತ್.

ನನ್ನ ಹಣೆಬರ. ನಾನೆಂತ ಮಾಡ್ದು? ಮಹಾರಾಜಂಗೆ ನನ್ನ ಮೇಲೆ ನಂಬಿಕೆ ಇಲ್ಲೆ."

"ಹೆಂಗೆ ನಂಬುದು ನಿಮ್ಮಂಥವರ?"

ಅಳ್ಗೆಲ್ ಮಾಡಿಕಂಡ್ ಉತ್ತರ ಬಾತ್.

"ಹಂಗಾರೆ ಈ ಪಾಪಿಗೆ ಇಲ್ಲಿನೆ ಶಿಕ್ಷೆ ಕೊಡಿ ಎರ್ಡ್ ತುಂಡ್ ತುಂಡ್ ಮಾಡಿ ದೇಹನ!"

ಒಂದು ಗಳಿಗೆ ಆಲ್ಸಿ ಹೋತ್ ವೀರರಾಜ.

"ಸಾಕ್ ನಿಲ್ಸಿ ಅಂತ ಮಾತ್! ಈಗ ಇರ್ವ ಪರಿಸ್ಥಿತಿನ ನಿವಾರಿಸಿಕೆ ಮಾತ್ರ ನಿಮ್ಮ ಮೇಲೆ ಇರ್ವ ಅಪವಾದ ದೂರ ಆದೆ".

ಬ್ರಿಟಿಷರ ಕೆಟ್ಟತನಗಳ ಬಗ್ಗೆ ಇಬ್ಬರ್ ಸುಮಾರ್ ಹೊತ್ತ್ ಮಾತಾಡ್ದ ಮೇಲೆ ಬಾತ್ ಕಾಶಿಯಾತ್ರೆನ ಸೂಚನೆ.

ಬೋಪು ಮಹಾರಾಜಂಗೆ ಮನಗಾಣುವಂಗೆ ಹೇಳ್ತ್.

"ಬೇರೆ ಉಪಾಯನೆ ಇಲ್ಲೆ, ಯಾತ್ರೆನ ಹೇಳಿಕಂಡ್ ನೀವು ಹೊರಗೆ ಹೋದರೆ ಬೇರೆ ಸ್ವತಂತ್ರ ರಾಜರ ಕೈಯಿಂದ ಸಹಾಯ ತಕಣಕ್. ಅಷ್ಟಾಕನ ಇಲ್ಲಿ ನಾವುಸ ತಯಾರಾದವೆ.

"ಆ ಸೆರೆಂದ ಹೊರಗೆ ಬಾದು ಅಗತ್ಯಂತ ವೀರರಾಜಂಗೆ ಆಗಲೇ ಆಗಿತ್ತ್. ಹೊರಗೆಂದ ಸಹಾಯ ತಕಣುವ ವಿಷಯಸ ಯೋಚನೆ ಮಾಡಿತ್ತ್.

ಮುಳ್ಗುವನ ಪಾಲಿಗೆ ಸಿಕ್ಕಿದ ಹುಲ್ಲುನ ಕಡ್ಡಿ ಹಾಂಗೆ ಸೂಚಿಸಿ ಆದ ಮೇಲೆ ವೀರರಾಜಂಗೆ ಸಂದೇಹ ಬಾದುಂತ ಬೋಪು ಒಳಗೆ ಹೆದ್ರಿಕಂಡೇ ಹಿಂಗೆ ಹೇಳ್ತ್.

"ಇಂಗ್ಲಿಷರ್ ಇದಿಕ್ಕೆ ಒಪ್ಪುದು ಕಷ್ಟ. ಆದರುಸ ಬುಡಿಕೆ ಬೊತ್ತು"

ರಾಜಂಗೆ ರೇಗಿ ಹೋತ್.

"ಎಲ್ಲ ಕೆಲ್ಸಸ ಅವು ಒಪ್ಪಿ ಆದ ಮೇಲೆನ ಆಕೊ?"

"ಅರ್ಧ ಗೆದ್ದಂಗೆಂತ ಮನ್ಸ್‌ಲಿ ನೆನ್ಸಿಕಂಡ್ ಬೋಪು ಹೇಳ್ತ್. ಹಂಗೆ ಅಲ್ಲ, ಯಾರ್ ವಿರೋಧ ಮಾಡ್ರು ಸೆರೆಂದ ಹೊರಗೆ ಹೋಗಿಯೇ ಹೋದರೆ. ಇಷ್ಟೆಲ್ಲ ಕಷ್ಟಕ್ಕೆ ಕಾರಣ ಆದ ನನ್ನ ಮೇಲೆನೆ ಈ ಜವಬ್ದಾರಿ ಇರ್ಲಿ. ಆದರೆ ರಾಜವೈಭವಂದ ಯಾತ್ರೆ ಹೋದರೆ ಪ್ರಯೋಜನ ಜಾಸ್ತಿ. ತಮ್ಮ ಗೌರವಕ್ಕೆ ಧಕ್ಕೆ

ಬಾತ್ಲೆಂತ ಜನ ತಿಳ್ಕಂಡವೆ. ನೀವು ವಾಪಾಸು ಬಾದರ ಜನ ಕಾದ್‌ಕಂಡ್ ಇದ್ದವೆ.

ಸತ್ಯದ ಮಾತ್. ಆದರುಸ ಇದರ್ಲಿ ಏನೋ ಮೋಸ ಇರ್ದುಂತ ಆಗ್ತಿತ್ತ್ ವೀರರಾಜಂಗೆ. ಬೋಪು ದಿವಾನನ ಕೆನ್ನೆಗಳ ನೋಡ್ತ್. ಆ ಮುಖ ಎಷ್ಟ್ ಲಾಯ್ಕ್ ಇತ್ತ್. ತಿಳಿನೀರ್‌ನ ಹಾಂಗೆ!

ಅಲ್ಲೇ ಇದ್ದ ಕಂದೀಲ್‌ನ ಸುಮಾರ್ ಹೊತ್ತ್ ನೋಡಿಕಂಡೆ ಇತ್ತ್ ವೀರರಾಜ.

ಯೋಚನೆ ಮಾಡಿಕಂಡ್ ರಾಜನ ಹಣೆ ತುಂಬಾ ನೆರಿಗೆಗ ಬಾತ್. ಒಂದು ಪಕ್ಷ ಬೋಪು ದಿವಾನನ ಉಪಾಯಗ ದುರುದ್ದೇಶಂದ ಕೂಡಿದ್ದರೆನು ಅದ್ ಉಪಯೋಗನು ಆದ್ಲೆನಾ? ಈ ಸೆರೆಂದ ಹೊರಗೆ ಹೋದೇ ಸುರುನ ಹೆಜ್ಜೆ. ಮತ್ತೆ ಉಳ್ದದ್... ತೀರ್ಮಾನ ಮಾಡ್ದರವರಂಗೆ ವೀರರಾಜ ಹೇಳ್ತ್.

"ಆಗಲಿ ದಿವಾನರೇ, ತಪ್ಪಿಸಿಕಂಡ್ ಯಾಕೆ ರಾಜನಾಗಿನೆ. ಕಾಶಿಗೆ ಹೋನೆ. ದೇವರ ದಯೆಂದ ವಾಪಾಸು ಬೇಗ ಬನ್ನೆ. ನಮ್ಮ ರಾಜ್ಯಕ್ಕೆ ತಟ್ಟಿದ ಕೆಟ್ಟ ಹೆಸರು ನಿವಾರಣೆ ಮಾಡ್ನೆ."

"ಆ ದಿನ ದೂರ ಇಲ್ಲೆ ಮಹಾರಾಜರೇ?" ಒಂದು ವಿಷಯ, ನಾವು ಹೊರ್ಡುವ ಹೊತ್ತಿಗೆ ನಮ್ಮ ಮನ್ಸಿಗೆ ಸಮಾಧಾನ ಆಗೋ ಹಂಗೆ ಎಲ್ಲಾ ಖೈದಿಗಳ ಇಂಗ್ಲೀಷರ್ ಬಿಡೊಕು.

"ನಾ ಪ್ರಯತ್ನಿಸಿ ನೋಡ್ನೆ"

ಅಷ್ಟು ಮಾಡಿ.

ಗುಟ್ಟುಂದಳೇ ಅಲ್ಲಿಂದ ಬೋಪು ದಿವಾನ ಹೊರ್ಟತ್. ಸೀದಾ ಹೋದ್ ಅರಮನೆ ಕೋಟೆಗೆ. ಲೀ ಹಾರ್ಡಿನೊಟ್ಟಿಗೆ ಪ್ರೇಸರ್ ನಿದ್ದೆಗೆಟ್ಟು ಕಾದ್ ಕುದ್ದಿತ್. ದಿವಾನ ಮೋರೆ ತುಂಬ ಗೆದ್ದ ಕಳೆ ನೋಡಿ ಅವ್ಕೆಸ ಖುಷಿ ಆತ್.

ಬೋಪುನ ವರದಿಗೆ ಇಬ್ಬರುಸ ಉಸುರುಬುಡದೆ ಕಿವಿಗೊಟ್ಟೊ.

ತುಂಬಾ ದಿನ ವೀರರಾಜನ ಬಂಧನದಲ್ಲಿರುದು ಸಾಧ್ಯ ಇಲ್ಲೆಂತ ಪ್ರೇಸರ್ ಅಂದಾಜ್ ಆಗಿತ್ತ್.

ಯಾತ್ರೆ ಹೋಕೆ ಅರಸ ಒಪ್ಪಿದ್ದ್, ತಲೆ ಮೇಲ್‌ನ ದೊಡ್ಡ ಭಾರ ಇಳ್ದಂಗೆ ಆಗಿತ್ತ್. ಪ್ರೇಸರ್ ಹೇಳ್ತ್.

"ಈ ಏರ್ಪಾಟು ನಾವುಗೆ ಒಪ್ಪಿಗೆ, ರಾಜರ್ ಹೊರ್ಡಿಕೆ ಒಳ್ಳೆ ದಿನನ ಗೊತ್ತು ಮಾಡಿ, ಅವು ಪರಿವಾರ ಸಮೇತನ ಹೋಕೆ ಏನು ಅಡ್ಡಿ ಇಲ್ಲೆ. ಬೀದಿಗೆ ಇಳ್ದ

ಮೇಲೆ ತಂಟೆ ಮಾಡ್ರೆ ಫಿರಂಗಿಂದ ಸುಟ್ಟು ಹಾಕಿ ಬುಟ್ಟವೆ. ಮುಂದೆ ಆಕಾಗಿದ್ದ ಯುದ್ಧ ಈಗನೆ ಆತ್‌ಂತ ಭಾವಿಸುವೆ ಅಷ್ಟೆ.

"ಸರಕಾರಕ್ಕೆ ಏನುಸ ತೊಂದರೆ ಆಗದ ಹಂಗೆ ನೋಡಿಕಂಬ ಜವಬ್ದಾರಿ ನನ್ನದ್".

ಯಾತ್ರೆನ ವಿಷಯನ ಪ್ರಚಾರ ಮಾಡಿ ಖೈದಿಗಳಾಗಿರ್ವ ಸೈನಿಕರೆಲ್ಲ ಊರ್‌ನ ಹೊರಗೆ ರಾಜರ ಭೇಟಿ ಆದವೆ.

ವೀರರಾಜ ರಾಣಿನೊಟ್ಟಿಗೆ ಓಂಕಾರೇಶ್ವರ ದೇವಸ್ಥಾನಕ್ಕೆ ಹೋಗಿ ಪ್ರಸಾದ ತಕಂಡ್ ಬಾತ್. ಒಳ್ಳೆ ಗಳಿಗೆಲಿಯೆ ಯಾತ್ರೆ ಹೊರ್ಚತ್. ಒಟ್ಟಿಗೆ ಇನ್ನೂರು ಜನ ಇದ್ದೊ. ಕುದುರೆಗ, ಹೋರಿಗ, ಪಲ್ಲಕ್ಕಿಗಳೊಟ್ಟಿಗೆ ಮಾತಾಡದೆ ಜನ ಹೋಗ್ತಿದ್ದೋ. ತಮಟೆ ಕೊಂಬು. ವಾದ್ಯಗ ಇತ್ಲೆ. ಪ್ರಜೆಗ ಬೀದಿಲಿ ಸಾಲಾಗಿ ನಿಂತ್ ನೋಡ್ತಾ ಇದ್ದೊ. ಅದರ್ಲಿ ಸದ್ದಿಲ್ಲದೆ ಮರ್ಚವು ಎಷ್ಟೋ ಜನ.

ಆ ಮೆರವಣಿಗೆ ಶವನ ಮೆರವಣಿಗೆನಂಗೆ ಸಂಕಟದ್ದಾಗಿತ್ತ್.

ಎಲ್ಲಾ ಪ್ರಜೆಗ ಮಾತಾಡ್ಸದೆ ಕೈ ಮುಗಿತ್ತಿದ್ದೊ. ಭಾರವಾದ ಹೃದಯಲಿ ಪಲ್ಲಕ್ಕಿಲ್ಲಿ ಕುದ್ದ ರಾಜ ಎಲ್ಲವುಕೆ ಕೈ ಮುಗಿತ್ತಿತ್ತ್. ಕೂದಲ್ ಕೆದರಿ, ಕಣ್ಣ್‌ಗ ತೇವತುಂಬಿ, ಮುಖ ನಿಸ್ತೇಜ ಆಗಿತ್ತ್.

ಪ್ರೇಸರ್ ಅರಮೆನನ ಉಪ್ಪರಿಗೆಲಿ ನಿತ್ತ್‌ಕಂಡ್, ದುರ್ಬೀನ್‌ಲಿ ಮೆರವಣಿಗೆನ ಭಾರೀ ಖುಸಿಲಿ ನೋಡ್ತ್. ಊರ ಹೊರಗೆಸ ನೂರಾರ್ ಜನ ಕಾದಿದ್ದೊ. ಅದರ್ಲಿ ವೀರರಾಜನ ಆಪ್ತ ಕೋಟಿಗ – ನಂಜಯ್ಯ, ಪುಟ್ಟಬಸವ, ಚೆಟ್ಟಿ ಕುಡಿಯ, ಕರ್ತು ಕುಡಿಯ ಎಲ್ಲವು ಇದ್ದೊ.

ಅಲ್ಲಿ ಸಂಕಟ ಜಾಸ್ತಿ ಇತ್ತ್. ಮರ್ಡುದು ಜೋರಿತ್ತ್. ವೀರರಾಜಸ ಎಳೆಕರ್‌ನಂಗೆ ಆಗಿಬುಟ್ಟೋ. ಯಾರು ಯಾರ ಸಮಾಧಾನ ಮಾಡ್ದು?

"ಚೆಟ್ಟಿ, ಕರ್ತು ಹಿಂಗಾತಲ!"

ಒಳಗೆನ ಬೇನೆನ ಸಹಿಸಿಕಂಡ್ ಚೆಟ್ಟಿ ಹೇಳ್ತ್.

"ಮಹಾರಾಜರ್ ಮರ್ಡಿಕೆ ಆಗದ್"

ಮೂಗ್‌ನ ಒಟ್ಟೆಗಳಂದ ದೊಡ್ಡದಾಗಿ ಉಸಿರ್‌ನ ಹೊರಗೆ ಹಾಕಂಡ್ ನಂಜಯ್ಯ ಹೇಳ್ತ್.

"ನಾವಿನ್ನುಸ ಸತ್ತತ್ಲೆ"

ಅಳ್ಗೆಲ್ ಬಂದ್ ಪುಟ್ಟ ಬಸವಂಗೆ ಒಂದು ಮಾತುಸ ಆಡಿಕೆ ಆತ್ಲೆ. ಅವನ

ನೋಡಿ ವೀರರಾಜ ಹೇಳ್ತ್.

"ಸುಮ್ಮನೆ ನಿಂತೊಳಲ ಪುಟ್ಟಬಸವ..."

ಸಾಲು ತಪ್ಪಿದರ ಕಂಡ್ ದಳಪತಿಯೊಬ್ಬ ಹೇಳ್ತ್.

"ಎಲ್ಲವು ಅಲ್ಲಲ್ಲೇ ನಿಂತ್‌ಕಣಿ! ಯಾರುಸು ಗುಂಪುಲಿ ಇರ್ಬೇಡಿ"

ಅಷ್ಟೊತ್ತಿಗೆ ಕುದುರೆ ಓಡ್ಸಿಕಂಡ್ ಊರು ಕಡೆಂದ ಒಬ್ಬ ಬಾತ್.

"ಏನಿಯಾ?" ಅಂತ ಕೇಳ್ತ್ ವೀರರಾಜ ಬೋಪು ದಿವಾನ ನನ್ನ ಕಳ್ಸಿದ್. ಯಾತ್ರೆಗೆ ಹೊರ್ಟವು ಇಲ್ಲೆ ಯಾಕೆ ನಿಂತದ್ ಅಂತ ಕರ್ನಲ್ ಸಾಹೇಬ್ರು ಕೇಳ್ತಾ ಒಳೊ.

ನಂಜಯ್ಯನ ಹಕ್ಕಲೆನೇ ಇದ್ದ ಸರದಾರ ಹೇಳ್ತ್.

"ಬಾಯಿ ಮುಚ್ಚು" ಅವ ಯಾರ್ ಕೇಳಿಕೆ?"

ಬಂದವ ಹೆದ್ರಿ ನಡ್ಗಿತ್.

"ಕ್ಷಮಿಸಿ ಒಡೆಯ. ಕೋಟೆನ ಮೇಲೆ ಈ ಕಡೆ ಮೋರೆ ಹಾಕಿ ಪಿರಂಗಿ ನಿಲ್ಸಿಯೊಳ. ಏನಾದ್ರ್ ಅಪಾಯ ಆದರೆಂತ ಹೇಳಿಕೆ ಬಂದೆ" ಒಮ್ಮೆಲೆ ಎಲ್ಲವುಕೆ ಮೈ ಜುಮ್ ಅಂತ ಹೇಳ್ತ್. ಅದ್ ಹೆದ್ರ್‌ಸುವ ಮಾತಾಗಿತ್ಲೆ. ವಾಸ್ತವನೇ ಅವರ ಗೇಲಿ ಮಾಡ್ತಿತ್ತ್. ಬಂದವ ಹೇಳ್ದ ಮಾತ್ ನಿಜವಾಗಿಸ ಸತ್ಯ.

ಸಿಟ್ಟ್‌ಲಿ ನಡ್ಗಿಕಂಡ್ ಸ್ವರಲಿ ನಂಜಯ್ಯ ಹೇಳ್ತ್.

"ಆ ಪಾಪಿಗ ಏನ್ ಬೇಕಾರು ಮಾಡುವೊ, ನಾವು ಮುಂದೆ ಹೋದೇ ಒಳ್ಳೆದ್."

"ನಡಿಯನಿಂತ" ಹೇಳ್ತ್ ವೀರರಾಜ.

ಯಾತ್ರೆನ ಉಸ್ತುವಾರಿ ನೋಡಿಕಣ್ತಿದ್ದ ದಳಪತಿ, ಮುಂದಕ್ಕೆ ಕುದುರೆ ಓಡ್ಸಿ ಬಾವುಟಗಳ ಹಿಡ್ದ ಸೈನಿಕಂಗಳಿಗೆ ಮುಂದೆ ಹೋಕೆ ಹೇಳ್ತ್.

ದುರ್ಬಿನ್‌ಲಿ ನೋಡ್ತಿದ್ದ ಫೇಸರಂಗೆ ಆತ್– ಇವರೆಲ್ಲ ಇಲ್ಲಿನೆ ಸುಟ್ಟು ಹಾಕುದು ಭಾರೀ ಸುಲಭ ಆದರೆ ಹಂಗೆ ಮಾಡ್ರೆ ಅದ್ ಮೂರ್ಖತನದ ಪರಮಾವಧಿ ಆದೆ" ಮುಂದುವರ್ಕಂಡ್ ಹೋಗ್ತಿದ್ದ ಜನರ ಕಾಡ್ ಸ್ವಾಗತಿಸಿದಂಗೆ, ದಾರಿ ಮಾಡಿಕೊಟ್ಟಂಗೆ ಜನಕ್ಕೆ ಕಾಂಬತಿತ್ತ್. ಕಾಡ್‌ನ ನೊಡುಲಿ ಅಷ್ಟು ಜನ ನಡ್ಕಂಡ್ ಹೋಕನ, ಅವರ ಮಾತ್‌ಗ, ಉಸಿರಾಡ್ದು ಎಲ್ಲ ಶೋಕಸಾಗರದ ಅಲೆಗಳಂಗೆ ಹಸುರು ದಂಡೆಗೆ ಹೊಡಿತ್ತಿತ್ತ್.

ಒಳ್ಳ ಬಿಸ್ಲ್‌ಲಿ ಮರದ ನೆರಳ್‌ಲಿ ಕುದ್ದ್, ಖಾಲಿ ಜಾಗೆ ಸಿಕ್ಕಿಕಾನ ರಾತ್ರಿ ಮಲ್ಲಿಗೆ, ತಾತ್ಕಾಲಿಕ ಗೂಡುಗಳ ಮಾಡಿಕಂಡ್ ಹೋಗ್ತಿದ್ದೊ. ಕಾಡ್‌ಪ್ರಾಣಿಗ ಬಾರದಂಗೆ ಬೆಂಕಿನ ಕಾವಲು ಇತ್ತ್. ದಾಸ್ಯದ ಬೇಲಿನ ದಾಟಿ ದೂರ ಬಂದರ್ದ್

ವೀರರಾಜ ಮೆಲ್ಲನೆ ಉಷಾರಾತ್. ಎಲ್ಲಸ ಸ್ಪಷ್ಟವಾಗಿ ಅವಂಗೆ ಗೊತ್ತಾಗಿತ್ತ್. ನಂಗೆ, ರಾಜ್ಯಕ್ಕೆ, ಜನಕ್ಕೆ ಬಂದ ದುರ್ಗತಿ, ಇದಿಕೆಲ್ಲ ಮಾಡಕಾದ ಕ್ರಮಗ, ಭವಿಷ್ಯಲಿ ಇರುವ ಸಾಧ್ಯತೆಗ...

ಕೊಡಗ್‌ನ ಗಡಿ ದಾಟಿ, ದಖಿನ್ ಪೀಠ ಭೂಮಿನ ದಾಟಿ ದೂರದ ಕಾಶಿಗೆ...

ಅರಸಂಗೆ ಭಾರಿ ಕೂಚು ಆಗಿರ್‍ವ ನಂಜಯ್ಯ ಹೇಳ್ತ್.

"ನೀವು ಸ್ವಂತ ಹೇಳ್ರೆ ಸಾಕಿತ್ತ್. ಕೊಡಗ್‌ನ ಜನಂಗೆಲ್ಲ ನಿಮ್ಮ ಹಿಂದೆನೆ ಬರ್ತಿದ್ದೊ"

ಅದ್ ನಿಜಂತ ವೀರರಾಜಂಗು ಗೊತ್ತಿತ್ತ್. ಆದರೆ ಎಲ್ಲವು ಹೊರ್‍ದುದಲ್ಲ. ನಾಳೆ ಏನಾದೆ ಅಂತ ಕಾದ್‌ಕಂಡ್ ಅವೆಲ್ಲ ಅಲ್ಲಿಯೆ ಇರ್‍ದು ಇವಂಗೆ ಮುಖ್ಯ ಆಗಿತ್ತ್.

"ಪುಟ್ಟ ಬಸವ, ನಂಜಯ್ಯ ನೀವಿನ್ನ್ ಜಾಸ್ತಿ ದೂರ ನಮ್ಮೊಟ್ಟಿಗೆ ಬಾಕೆ ಆಗದ್."

"ಇನ್ನೇನು ಮಾಡೊಕು? ಬೇಜಾರಲಿ ಪುಟ್ಟ ಬಸವ ಕೇಳ್ತ್."

"ನೀವೆಲ್ಲಾ ಬಂದರೆ ಇಲ್ಲಿ ಜನಕ್ಕೆ ನಾಯಕ ಯಾರ್? ಇಲ್ಲೇನ್ ಕಡಿಮೆ ಕೆಲಸ ಇರ್‍ದೊ? ಆ ಸ್ವಾಮಿಯವು ನಾಲ್ಕುನಾಡಿಗೆ ಬಂದವು ಎಲ್ಲಳೊ ಹುಡ್ಕಿಸಿ ಅವು ಊರುರು ಹೋಗಿ ಜನರ ತಯಾರು ಮಾಡ್ವೆ.

ಹಂಗೆನೆ ನನ್ನ ದೊಡ್ಡಪ್ಪನ ಮಕ್ಕಳಂದ ಸಹಾಯ ಆದು. ಅವು ಈಗ ಹಾಲೇರಿಲಿ ಇರುವೊ".

ಹೃದಯದ ತಳಮಳ ಕಡಿಮೆ ಆಗಿ ಮೆದುಳು ಚುರುಕಾಗಿ ನಂಜಯ್ಯ ಹೇಳ್ತ್.

"ಆದು ಮಹಾರಾಜರೇ. ಆ ಜವಾಬ್ದಾರಿನೆಲ್ಲ ನಾವುಗೆ ಬುಡಿ. ನಿಮ್ಮ ಮೈಸೂರು ಸೀಮೆನ ಗಡಿ ದಾಟಿ ನಾವು ಹಿಂದೆ ಬಂದವೆ"

"ಹಂಗೆ ಮಾಡಿ"

"... ಮುಂದೆ ಪ್ರಯಾಣ"

ಬುಟ್ಟು ಬೇರೆ ಆಗ್ವ ದಿನ ಬಾಕನ ಮತ್ತೆ ಕೂಸುನಂಗೆ ಆತ್ ವೀರರಾಜ.

"ಇನ್ನ್ ನಾವು ಒಟ್ಟಿಗೆ ಬೇಟೆಯಾಡ್ದು ಯಾಗ ಚೆಟ್ಟಿ ಕುಡಿಯ? ಹಾರ್‍ವ ಹಕ್ಕಿಗೆ ನೀನ್ ಗುರಿ ಇಸುದು ಯಾಗ?

ಕಲ್ಲ್‌ಂದ ಕಡ್ದ ವಿಗ್ರಹದಂಗೆ ನಿಂತ್ ಕುಡಿಯ ಹೇಳ್ತ್.

"ಆ ಬೋಪು ದಿವಾನನ ಹಿಡ್ದ್ ಮರಕ್ಕೆ ಕಟ್ಟಿ ತೂಗಿ ಹಾಕಿದ ಮೇಲೆನೆ

ಹಕ್ಕಿ ಬೇಟೆ ಮಹಾಪ್ರಭು" ಪುಟ್ಟಬಸವ ಹೇಳ್ತ್.

"ಆ ಬಿಳಿಯರೆಲ್ಲ ಪಿಳ್ಳೆ ಸಹಿತ ದೇಶಂದ ಹೊರಗೆ ಕಳ್ಸಿದ ಮೇಲೇನೆ ನಾವುಗಿನ್ನ್ ವಿಶ್ರಾಂತಿ ಮಹಾರಾಜರೇ.

"ಆಪ್ತರಾದ ಹಲವರ ಬುಟ್ಟು ಯಾತ್ರೆ ಮುಂದುವರಿಯಕಾನ ವೀರರಾಜ ಅಳುಕಿತ್."

"ನಂಗೇನೋ ಅಂಜಿಕೆ ಆದೆ ನಂಜಯ್ಯನವೇ. ನಾನ್ ವಾಪಾಸ್ ಬನ್ನೆನೋ ಇಲ್ಲೆನೋ"

ಇವುರು ಮೂರು ಜನನೂ ಒಂದೇ ರೀತಿಲಿ ಉತ್ತರ ಹೇಳ್ದೋ.

"ದಯವಿಟ್ಟು ಅಂಥ ಮಾತ್ ಆಡ್ಬೇಡಿ!"

ವೀರರಾಜನ ಆಪ್ತ ಸರದಾರಂಗ ಗುಡ್ಡದ ಮೇಲೆ ಹಿಂದೆ ನಿಂತೋ. ರಾಜರ ಪರಿವಾರ ಕಣಿವೆಲಿ ಇಳ್ದ್ ಪಿಜಿನ್ ಸಾಲ್‌ನಂಗೆ ಮತ್ತೆ ಕಾಡ್‌ನ ಕಡೆಗೆ ಹೊರ್ಟತ್.

... ಇಲ್ಲಿ ಫ್ರೆಸರ್ ಸರಾಗಲಿ ಉಸಿರಾಡಿಕೆ ಸುರು ಮಾಡ್ತ್. ಬೋಪು ದಿವಾನನನ್ನೇ ಮುಂದೆ ಇರ್ಸಿಕಂಡ್ ಕೊಡಗ್‌ನ 'ಪ್ರಮುಖರ' ಸಭೆ ಕರ್ಸಿತ್. ಇಂಗ್ಲೀಷರ್ ಇಲ್ಲಿಯೆ ಇದ್ದ್ ರಾಜ್ಯಭಾರ ಮಾಡೊಕುಂತ ಪ್ರಜೆಗಳ ಆಸೆ ಹಿಂಗೆ ಕೆಲವರತ್ರ ಭಾಷಣ ಮಾಡ್ತಿತ್ತ್.

ಫ್ರೇಸರನೆಂದ:

ನಿಮ್ಮ ಅಭಿಪ್ರಾಯನ ಮೀರಿಕೆ ನಾವುಗೆ ಇಷ್ಟ ಇಲ್ಲೆ. ಒಂದು ಇಸ್ತಿ ಹಾರು ಹೊರಡ್ಸಿ, ನಿಮ್ಮ ನೋಡಿಕಂಬಕೆ ಲೀಹಾರ್ಡಿಯವರ ಇಲ್ಲಿ ಬುಟ್ಟು ನಾವು ಮೈಸೂರಿಗೆ ಹೋದವೆ.

ಕುಂಪಣಿ ಸರ್ಕಾರದ ಇಸ್ತಿಹಾರು ಸಿದ್ಧ ಆತ್. ಎಂತ ಒಕ್ಕಣೆ!

'ಕೊಡಗು ದೇಶದ ಪ್ರಜೆಗ, ಬ್ರಿಟೀಷ್ ಸರ್ದಾರರ ಕೈಕೆಳಗೆ ಇರಕುಂತ ಏಕಮತಸ್ಥರಾಗಿ ಇಷ್ಟ ಪಡುದಂರ್ದ್, ವೀರರಾಜೇಂದ್ರ ಒಡೆಯರ್ ನೋಡಿಕಣ್ತಿದ್ದ ಈ ದೇಶನ ಘನವುಳ್ಳ ಕುಂಪಣಿ ಸರ್ಕಾರವ್ಕೆ ವರ್ಗ ಮಾಡಿಕೆ ಇಂಡಿಯ ದೇಶದ ಗವರ್ನರ್ ಜನರಲ್ ಸಾಹೇಬರು ಖುಷಿ ಪಟ್ಟವೆ.

ಈ ದೇಶದ ಜನಗಳ, ಪುನಃ ಸ್ವದೇಶಿ ರಾಜರ ಆಳ್ವಿಕೆಗೆ ಬಿಟ್ಟು ಬುಟ್ಟು ಕೊಡ್ದುಲ್ಲೆ. ಇವರ ಮುಲ್ಕಿ ಮತ್ತೆ ಓಟು ಸಂಬಂಧವಾದ ಎಲ್ಲಾ ಪದ್ಧತಿಗಳ ಬಹುಮಾನಂದ ಅಂಗೀಕರಿಸಲ್ಪಟ್ಟವೆ. ಇವರ ಎಲ್ಲಾ ಭದ್ರತೆ ಮತ್ತೆ ಕ್ಷೇಮ ನೋಡಿಕಂಬಕೆ ಖುಷಿ ಪಟ್ಟವೆಂತ ಈ ಮೂಲಕ ತಿಳ್ಸುವೆ.'

**– ಜಿ. ಎಸ್. ಫ್ರೇಸರ, ಮಡಿಕೇರಿ.**

* * * * *

ಬಾಯಿಪಾಠ ಆಗಿದ್ದ ಒಕ್ಕಣೆನ ಸೇರ್ದವರೆದ್ರು ಹೇಳಿ ಮುಗಿಸಿ ನಂಜಯ್ಯ ಹೇಳ್ತ್.

"ಕೇಳ್ದರಿಯಾ, ನಮ್ಮ ಭದ್ರತೆ, ಕ್ಷೇಮನ ಹೆಚ್ಚಿಸಿಕೆ ಬ್ರಿಟೀಷ್ ಸರಕಾರದವು ಖುಷಿ ಪಟ್ಟವೆ ಗಡ!"

ತಲೆ ಆಡಿಸಿಕಂಡ್, ಮುಷ್ಠಿ ಹಿಡ್ಕಂಡ್ ಸೋಮಯ್ಯ ಹೇಳ್ತ್.

"ನೀಚಂಗ! ವಂಚಕರ್! ಪಾಪಿಗ!"

"ಗುಂಪ್‌ಲಿದ್ದವ ಒಬ್ಬ ಹೇಳ್ತ್".

"ಆಮೇಲೆ ಏನಾತ್? ಮಹಾರಾಜರು ಈಗ ಎಲ್ಯೊಳ? ನಮ್ಮ ಸೈನ್ಯ ಎಲ್ಲಿಟ್ಟು? ಏಳು ಸಾವಿರ ಸೀಮೆಯವು ಮಡಿಕೇರಿನಾಡುನವು ಎಲ್ಲಾ ಏನು ಹೇಳುವೆ?"

ಸೋಮಯ್ಯನು ಸ್ವರ ಕೂಡ್ಸಿತ್.

ನೀವು ಮುಂದೆನೆ ಇಲ್ಲಿಗೆ ಧೂತರ ಕಳ್ಸಕಾಯ್ತ್. ಹಿಂಗೆಲ್ಲ ಆದ ವಿಷ್ಯ ನಾವುಗೆ ಸ್ವಲ್ಪ ಆದ್ರ್ ತಿಳ್ದಿದ್ದರೆ.... ಹೊಕ್ಕುಳುಂದ ಹೊರಟಂಗೆ ಇದ್ದ ಸ್ವರಲಿ ಕರಿಯಪ್ಪ ಹೇಳ್ತ್:

"ಈಗೇನ್ ತಡ ಆತ್ಲೆ. ಸ್ವಾತಂತ್ರ್ಯ ಪಡ್ಕನುವ ಕೆಲ್ಸಲಿ ತಡ ಆತ್‌ಂತ್ಲೆ ಇಲಲೆ. ಏನೆಲ್ಲಾ ತಯಾರಿ ಆಗಿಟುಂತ ಹಂಞಲಿ ಹೇಳಿ"

ನಂಜಯ್ಯ ಸುಮ್ಮನಿರ್ದರ ನೋಡಿ ಪುಟ್ಟ ಬಸವ ಮಾತಾಡ್ತ್. ಕೆಂಡಗಳ ಮೇಲೆನ ಬೂದಿನ ಬದಿಗೆ ಮಾಡಿಕಣ್ತ ಬೀಸುವ ಗಾಳಿನಂಗೆ ಇತ್ತ್ ಅವನ ಸ್ವರ ತೂಗಿ ನೋಡಿ ನಿಧಾನಕ್ಕೆ ಉಚ್ಚರಿಸ್ತಿದ್ದ ಪದಗ. ಎಲ್ಲಸ ಪರಿಣಾಮಕಾರಿ.

"ಕೇಳಿ, ಮುಂದೆದೆಲ್ಲ ಸಣ್ಣ ಕಥೆನೆ. ಬುಡ್ಸಿ ಹೇಳಿಕೆ ಏನು ಉಟ್ಟು? ಮನೆಗೆ ಬೆಂಕಿ ಬಿದ್ದ ಮೇಲೆ ಏನು ಉಳ್ದುಟು ಅಂತ ಹೇಳಿಕೆ ಹೆಚ್ಚು ಹೊತ್ತು ಬೇಕಾ? ಸರಪಳಿ ಹಾಕಿ ಕಟ್ಟಿ ಹಾಕಿದ ಮನುಷ್ಯನ ಕೆಳಗೆ ಬೀಳ್ಸುದು ಯಾವ ಮಹಾಕೆಲ್ಸ? ಬಾಯಿಗೆ ಬಟ್ಟೆ ತುರ್ಕಿ ಹುತ್ತರಿ ಹಾಡು ಹೇಳು ಅಂದರೆ..."

ಔ

ಕೊಡಗ್‌ನ ಜನರ ಬಾಯಿಗೆಲ್ಲಾ ಬ್ರಿಟಿಷರ್ ಬಟ್ಟೆ ತುರ್ಕಿದೊ. ಮತ್ತೆ ಹತ್ರ ನಿಂತ್, "ನಾವು ನಿಮ್ಮ ಗೆಳೆಯರ್. ನೀವುಗೆ ಹಾಡಿಕೆ ಸ್ವಾತಂತ್ರ್ಯ ಕೊಟ್ಟಳೋ. ನೀವು ಹಾಡಕ್! ಅಂತ ಹೇಳ್ದೊ. ಸ್ವರ ಹೊರ್ಟತಾ, ಇಲ್ಲೆನಾ ಗೊತ್ಲೆ. ಹೊರಗೆನವ್ಕೆ

ಅದ್ ಕೇಳ್ತಾ ಇಲ್ಲೆನಾ...

ಬಾಳೋ ಬಾಳೋ ಚಂಜಾದಿ
ಪುತ್ತರಿರ ಚೊಲ್ಲಾಲೆ
ನಾಲ್ ಮೂಂದ್ ಪಾಡನ
ಅಲ್ಲತೊಂದು ಅಲ್ಲಲ್ಲ...

ಯಾವ ಸುಗ್ಗಿನ ಸಂಭ್ರಮ? ಯಾವ ಹುತ್ತರಿನ ಹಾಡ್?

ಅರಸು ಮನೆತನಕ್ಕೆ ಸಂಬಂಧಿಸಿದ ಪ್ರತಿಯೊಬ್ಬರ ಸ ಬಂಧಿಸಿ ಕರ್ಕಂಡ್ ಹೋಗ್ತಿದ್ದೊ ಮೈಸೂರಿಗೆ, ಬೆಂಗಳೂರಿಗೆ. ಜನರ ಬಂಡಾಯ ಏಳಿಕೆ ತಯಾರಿ ಮಾಡ್ತಿದ್ದ ಜಂಗಮದೀರ್ ಬ್ರಿಟೀಷರಿಗೆ ಸೆರೆ ಸಿಕ್ಕಿತ್.

ಕೊಡಗು ಸೇನೆನ ಬುಟ್ಟುಬುಡುವ ಯೋಜನೆ ಲೀಹಾರ್ಡಿಗಿತ್ತ್. ಆದರೆ ಆ ಸೈನಿಕರ ಎಲ್ಲಾ ಅವರವರ ಊರುಗಳಿಗೆ, ಎಲ್ಲಾ ಕಡೆಗಳಿಗೆ ಬುಡಿಕೆ ಸಾಧ್ಯ ಇತ್ತಾ? ಹಂಗೆ ಮಾಡ್ರೆ ಅಪಾಯಕೆ ಆಹ್ವಾನ ಹಿಂಗೆ ಸಮಸ್ಯೆನ ಎಲ್ಲಾ ಮುಖಗಳ ಪರಿಶೀಲಿಸಿ ಲೀಹಾರ್ಡಿ, ಸೈನ್ಯದ ಎಲ್ಲಾ ತುಕಡಿಗಳ ಮಡಿಕೇರಿಲಿಯೆ ಇಸಿಕಂಡತ್.

ಆದರುಸ ಅವಂಗೆ ಆಗ್ತಿತ್ತ್.

"ನಾನು ಕುದ್ದದ್ದೆ ಜ್ವಾಲಾಮುಖಿನ ಮೇಲೆ. ಹೊಗೆಯಾಡ್ತಿರೋ ಅಗ್ನಿ ಪರ್ವತ, ಮಡಿಕೇರಿನ ಈ ಬೆಟ್ಟ ಜನರೊಟ್ಟಿಗೆ ಲೀಹಾರ್ಡಿಗಿದ್ದ ಕೊಂಡಿಂತ ಹೇಳ್ರೆ, ವಿನೀತ ಕಿಂಕರ ಬೋಪು ದಿವಾನ. ಈ ದಿವಾನನ ಸ್ನೇಹಿತರ್, ನೆಂಟ್ರ್‌ಗ ಆಳಿಕಂಡಿರ್‌ವರ ನಡೆಗೋಲುಗ. ಒಟ್ಟ್‌ಲಿ ಸಾರಿಗೆ ಸಂಪರ್ಕ ಇದ್ದಲ್ಲಿ ಮಾತ್ರ ಆಂಗ್ಲರ ಆಳ್ವಿಕೆ ಇತ್ತ್. ದುರ್ಗಮವಾದ ಕುಗ್ರಾಮಗ, ದಟ್ಟಡವಿ, ಬೆಟ್ಟ ತಪ್ಪಲುಗಲ್ಲಿ ಪರಕೀಯರ ಹೊಲ್ಸು ಆಗದೆ ಪವಿತ್ರವಾಗಿ ಇತ್ತ್.

ಆ ಪವಿತ್ರ ಪ್ರದೇಶಗ ನೂರಾರ್ ಸ್ವಾತಂತ್ರ್ಯ ವೀರರಿಗೆ ಆಶ್ರಮ ನೀಡಿತ್ತ್.

ವೀರರಾಜ ಕಾಶಿ ಸೇರಿತ್ತ್. ಸಹಾಯಕ್ಕೆ ಬಾವ ಧೀರರ್ ಇತ್ಲೆ ಅಂತಲ್ಲ. ಆದರೆ ಅವೆಲ್ಲ ಕಂಗಾಲಾಗಿದ್ದೊ. ಕಣ್ಣೀರ್‌ನ ಕಥೆ ಕೊಡಗ್‌ದ್ ಮಾತ್ರನಾ? ಎಲ್ಲಾ ಕಡೆಗಲ್ಲಿಸ ಇದೇ ರಾಗ, ಇದೇ ಪಲ್ಲವಿ.

"ವ್ಯಾಪಾರಕ್ಕೆಂತ ನಾವೇ ಕರ್ಸಿಕಂಡ ಧೂರ್ತ ಇಲ್ಲಿಯೇ ಬೀಡುಬಿಟ್ಟ್ ರಾಜ್ಯಗಳ ಕದಿತ ಉಟ್ಟು, ನಾವೆಲ್ಲ ಒಂದಾಕು ಈಗ. ಗಳಿಗೆ ನೋಡಿಕಂಡ್ ಪೆಟ್ಟು ಕೊಡಕು".

"ಪೆಟ್ಟುಂತೇಳ್ರೆ ಹತ್ತ್ ಕಣಗಳಂದ, ಹತ್ತ್ ಬಾಹುಗಳಂದ, ಬಳ್ಳಿ ಬಿಚ್ಚಿದ ಅವರ ಗೂಡುಗ ಗಾಳಿಲಿ ಚಿಂದಿ ಚಿಂದಿಯಾಗಿ ಹೆಂಗೆ ಹಾರೊಕು ಗೊತ್ತುಟಾ!"

"ಎಷ್ಟೊಂದು ಜನ ದ್ರೋಹಿಗ ನಮ್ಮಲ್ಲಿ ! ಥೂ! ಒಗ್ಗಟ್ಟು! ಅದೊಂದೆ ಭಾರತೀಯರ ಭೀಜಮಂತ್ರ ಆಕು. ನಮ್ಮೆಲ್ಲ ಶಕ್ತಿನ ಒಂದುಗೂಡ್ಸುದು ಸಾಧ್ಯ ಆದರೆ, ಈಗಲೇ ಈ ಕ್ಷಣಲೇ..."

"ನಮ್ಮ ಒಳ ಜಗಳದಿಂದಲೇ ಈ ಗತಿ ಬಂದದ್ ನಾವುಗೆ" .... ವೀರರಾಜ ತನ್ನ ಆಪ್ತರಿಗೆ ಸುದ್ದಿ ಕಳ್ಸಿತ್. ಅದರ ಹೊತ್ತ ಧೂತ ತಿಂಗಳಾನುಗಟ್ಟಲೆ ಪ್ರವಾಸ ಆದ ಮೇಲೆ ಊರ್ ಸೇರ್ತ್.

ಅರಸ ಬರ್ದ ಮುಖ್ಯಾಂಶ ಇಷ್ಟೆ. "ನೀವು ಧೈರ್ಯದಿಂದ ಇರೊಕು. ತಾಳ್ಮೆಂದ ಇರಕು. ಎಲ್ಲ ವಿಷಯಗಳಿಗೆಸ ಬರೆಯನಿ, ಬರ್ದ್ ತಿಳ್ಸಿ"

ಏನ್‌ಂತ ಬರೆಯೊದು? ಬೇಸಿಗೆ, ಮಳೆ, ಚಳಿ ಒಂದರ ಮೇಲೆ ಒಂದು ಬಂದ್ ಹೋದೆಂತನಾ?

ಹೇಮಂತ ಋತುನ ಹಿಂದೆನೆ ಬರುವ ವಸಂತ... ಎಲ್ಲಿತ್ತ್ ಅದ್? ಎಲ್ಲಿ?

ಇವ್ ಗೂಢಚಾರರ ಕಣ್ಣ್ ತಪ್ಪಿಸಿ ಊರೂರು ಸಂಚಾರ ಮಾಡ್ತಿದ್ದೋ. ಕತ್ತಲೆ ಕವಿದ ಕೊಡಗ್‌ಲಿ ಇವರ ಸಾಹಸಂಡ್ಲೆ ನಡ್ತ್, ಬೆಳಕ್ ಹುಟ್ಟಿಸಿಕೆಂತ ಕಲ್ಲುಗಳ ಚಕಮಕಿ.

ಬೋಪು ಬಳಸ್ತಿದ್ದ ಪ್ರಚಾರ ಸಾಧನಸ ಪ್ರಬಲ ಆಗಿತ್ತ್. ಕೆಲವರೊಟ್ಟಿಗೆ ಯಾಕೆ ಬೇಕ್ ಯುದ್ಧ? ಎಷ್ಟೊಂತ ಯುದ್ಧ ಮಾಡ್ದು ನಾವು? ಸಾವಿರಾರ್ ಜನರ ಸಾಯಿಸಿ ಒಬ್ಬ ರಾಜ ಗದ್ದುಗೆ ಏರ್ರೆ ಏನ್? ಏರದಿದ್ದರೆ ಏನ್? "ಉಳ್ದವರೊಟ್ಟಿಗೆ"– ಶಾಂತಿ ನೆಮ್ಮದಿ ಅಲ್ಲ ನಾವುಗೆ ಬೇಕಾದ್ದ್?

ಮಡಿಕೇರಿಯ ಕೋಟೆಲಿ ಯಾರಿದ್ದರೆ ನಾವುಗೇನ್? ನಾವು ಯಾವ ತೊಂದರೆಸ ಇಲ್ಲದೆ ಉತ್ತ್ ಬೆಳ್ಸಿ ಲಾಯ್ಕಲಿ ಇದ್ದರೆ ಆತ್."

ಇಂತ ಪ್ರಚಾರನಸ ಕೇಳಿಕಂಡ್, ತಮ್ಮ ಪ್ರಾಣಿಗಳಸ ರಕ್ಷಣೆ ಮಾಡಿಕಂಡ್ ಹಲವಾರ್ ವೀರರ್ ಕಾಲ ಕಳಿತ್ತಿದ್ದೊ.

ಅರಸಂಗೆ ಉತ್ತರ ಅವೇನು ಬರ್ದ್ ತಿಳ್ಸುದು ಸಾಧ್ಯ ಇತ್ತ್? ಆದರೂ ಸತ್ಯಕ್ಕೆ ಜಯ ಸಿದ್ಧ ಎಂಬ ನಂಬಿಕೆ ಅವರ್‌ಂದ ಕಾಗದ ಬರ್ತಿತ್ತ್.

"ನಮ್ಮ ಕೆಲ್ಸ ನಾವು ಮಾಡ್ತ ಒಳ. ಇನ್ನು ಸ್ವಲ್ಪ ಸಮಯಲಿ ನಮ್ಮ ಪ್ರಯತ್ನ ಒಂದು ಮಟ್ಟಕ್ಕೆ ಬಂದದೆ. ಆಗ ಹೊರ್ಟ್ ಬಾಕೆ ತಯಾರಾಕು ನೀವು"

ಅವರ ಕೆಲಸ ಅವು ಮಾಡ್ದೊ. ಪ್ರಯತ್ನಸ ಒಂದು ಮಟ್ಟಕ್ಕೆ ಬಾತ್. ಕೊಡಗ್‌ಂದ ಹೊರಗೆ ಬಿಳಿಯರ ಬೆರ್ಸುದು ಕಷ್ಟ ಅಲ್ಲ ಎಂಬ ಪರಿಸ್ಥಿತಿ ನಿರ್ಮಾಣ

ಆತ್.

ಕೊಡಗ್‌ರ ರಕ್ತಲಿ ಇರ್ದು ವೀರತನ ಅಲಾ? ಅವರ ಪೀಚೆಕತ್ತಿ ಬರಿ ಪೊರ್ಲಿಗೆಂತ ಹೇಳ್ದವು ಯಾರು? ಅವರ ಬಿಚ್ಚುಗತ್ತಿನ ಹರಿ ಯಾಗ ಮೊಂಡಾದ್? ಅವೇನು ಗುಲಾಮಗಿರಿನ ತಬ್ಬಿಕಣುವ ಜೀವಿಗಳೆ? ಜನಾಂಗದ ಹಕ್ಕುನ ನಾಕ್ ಜನ ದ್ರೋಹಿಗಳಿಗೆ ಯಾರ್ ಗುತ್ತಿಗೆ ಕೊಟ್ಟದ್? ಹೆತ್ತ ತಾಯಿನನೆ ಬೀದಿಗಿಳ್ಸಿ ಮೂರ್ಕಾಸಿಗೆ ಮಾರುವ ನರಹುಳುಗ.

"ನಿಲ್ಸಿ ಪುಟ್ಟಬಸಪ್ಪನವೇ! ನಿಲ್ಸಿ!"

ತನ್ನ ರಟ್ಟೆನ ಗಾಳಿಲಿ ಅಲ್ಲಾಡಿಸಿಕಂಡ್ ಸೋಮಯ್ಯ ಕೂಗಾಡ್ತ್.

ಪುಟ್ಟಬಸವ ನಡ್ಗುವ ಧ್ವನಿಲಿ ಮೈಮರ್ತ್ ಆಡ್ತಿದ್ದ ಮಾತುಗಳಂದ ಎಲ್ಲವುಕೆ ರೋಮಾಂಚನ ಆತ್. ಅಸಹನೆಂದ ಪ್ರತಿಯೊಬ್ಬರ ನರನಾಡಿಗ ಬಿಸಿ ಏರ್ತ್. ಒಮ್ಮೆಲೆ ಪುಟ್ಟ ಬಸವ ಮಾತ್ ನಿಲ್ಸಿತ್. ಉಸ್‌ರಾಡಿಕೆ ಪುರ್ಡಿದಂಗೆ ಅವನ ಎದೆ ಮೇಲೆ ಕೆಳಗೆ ಹೋಗ್ತಿತ್ತ್.

ಮೆಲ್ಲೆ ನಿಧಾನಕ್ಕೆ ಮಾತ್ ಸುರು ಮಾಡ್ದ ಅವ ಹೆಜ್ಜೆ ಹೆಜ್ಜೆಗೆ ಪದಗಳ ತೀವ್ರಗೊಳಿಸಿಕಂಡ್ ಸಾಗಿತ್. ಕೇಳುವವರ ಹೃದಯಲಿ ಕಿಡಿ ಪ್ರಜ್ವಲಿಸ್‌ತ್ತಿತ್ತ್.

ದೊಂಡೆಂದ ದಪ್ಪದ ಸ್ವರ ಹೊರಡಿಸಿಕಂಡ್ ಕರಿಯಪ್ಪ ಹೇಳ್ತ್,

"ಇನ್ನ್ ಸಾಕ್! ಈಗ ಆಕಾದ್ದ್ ಏನ್? ಹೇಳಿ!"

ಎಲ್ಲರ ಮನ್ಸ್‌ಲಿಸ ಹುಟ್ಟಿದ ಮಾತ್ ಅದೇ – ಆ ಪ್ರಶ್ನೆನೆ ಪುಟ್ಟಬಸವನ ಮೋರೆ ಪ್ರಸನ್ನ ಆತ್. ತುಟಿಗಳ ಮೇಲೆ ಸಮಧಾನದ ನಗೆ ಹುಟ್ಟಿತ್. ಎದ್ರುಗಿದ್ದ ಎಲ್ಲರಸ ಆತ್ಮೀಯತೆಂದ ನೋಡಿ, ಗೋಡೆಗೊರಗಿ ಚಂದ್ರನ ಕಡೆ ಮುಖ ಮಾಡಿ ನಿಂತತ್.

ಅಲ್ಲಿಯೇ ಗೋಡೆಯಾಚೆಗೆ ಅಮ್ಮನು, ಹೆಣ್ಣ್‌ನು ಕುದ್ದದ್ ಗೊತ್ತಿತ್ತ್ ಪುಟ್ಟಬಸವಂಗೆ. ನಂಜಯ್ಯನ, ತನ್ನ ಮಾತ್‌ಂದ ಅವರ ಮೇಲೆ ಆಗುವ ಪರಿಣಾಮನ ಊಹಿಸಿಕಂಡಿತ್ ಅವ.

ಆ ತಾಯಿ ಮತ್ತೆ ಅವಳ ಸೊಸೆ... ಕೇಳಿಕಂಡ್ ಕುದ್ದ್ ಅವರ ಕಣ್ಣ್‌ಲಿಸ ನೀರಾಡ್ತ್. ರಕ್ತ ಸಂಚಾರ ರಭಸ ಆಗಿತ್ತ್. ಮನೆಗೆ ಬಂದ ಮಂಜ ಬಾಳ ಇರ್ದುಲೆಂತ ತಾಯಿಗಾಗಲೆ ಮನದಟ್ಟಾತ್.

ಗಿರಿಜವ್ವಂಗೆ ಅನ್ಸಿತ್ – ನನ್ನ ಗಂಡ ಅಲ್ಲಿಂದ ಬೇಗ ಹೊರ್ಟದೆಂತ. ಆ ಯೋಚನೆಂದ ಇಬ್ಬರಿಗೆಸ ಸಂಕಟ ಆತ್.

ಕುಡಿಯರಿಬ್ಬರ್ ಕಲ್ಲ್‌ನಂಗೆ ಕುದ್ದಿದ್ದೊ. ಕರ್ತುನ ದೃಷ್ಟಿ ಅಲ್ಲಿ ಆವರಣನ ದಾಟಿ, ಮರದ ನೆರಳ್‌ನತ್ತ ಹರ್ದಿತ್ತ್. ಸಾಯಂಕಾಲದ ಮುಂದೆ ಕಾಂತಿನೆ ಇಲ್ಲದ ಚೆಟ್ಟಿನ ಕಣ್ಣುಗ ಲವಲವಿಕೆಂದ ಮಿನ್‌ಗ್‌ತ್ತಿದ್ದೊ.

ಪುಟ್ಟಬಸವ ಮಾತಾಡದೆ ಕುದ್ದದರ ನೋಡಿ ನಂಜಯ್ಯ ಹೇಳ್ತ್. "ಆಗಬೇಕಾದ್ದು ಏನು? ಏನಿರ್ದು ನೀವೇ ಹೇಳಿ? ಯಾಕೆ ಸುಮ್ಮನಿರ್ದು... ಅದೆಂತ ಅಂತ ಬಾಯಿಬಿಟ್ಟು ಹೇಳದೆ ನಾವುಗೆಲ್ಲ ಗೊತ್ತುಟ? ನಾವುಗೆ ನೀವುಗೆ ಪ್ರತಿಯೊಬ್ಬಂಗೆ, ಮನೆಗೆ ಮಾರಿ ಹೋದ್ಮೇಲೆ ಏನು ಮಾಡೊಕು? ಹೇಳಿ!

ಕರಿಯಪ್ಪ ಹೇಳ್ತ್–ಆ ಮಾರಿನ ಹಿಡ್ದ್ ಕಟ್ಟಿ ಊರ್‌ನ ಹೊರಗೆ ಸಿಗ್ದ್ ತೂಗಿ ಹಾಕೊಕು.

ಸೋಮಯ್ಯ ಹೇಳ್ತ್ – "ದ್ರೋಹಿಗಳ ಹಿಡ್ದ್ ಕುದಿವ ಎಣ್ಣೆಲಿ ಹಾಕೊಕು"

ಆ ಮಾತಿಗೆಲ್ಲ ಉತ್ತರದಂಗೆ ನಂಜಯ್ಯ ಹೇಳ್ತ್. "ನಾನು ಹೇಳ್ತ್‌ಲೆನ ಆಗಲೇ? ಏನಾಕುಂತ ಪ್ರತಿಯೊಬ್ಬಂಗೆ ಗೊತ್ತುಟು. ಎಳೆ ಮಕ್ಕ ಸ ಈ ಪ್ರಶ್ನೆಗೆ ಉತ್ತರ ಕೊಡ್ದು ಖಂಡಿತ!"

ಮಾತ್‌ನ ಅಗತ್ಯನೇ ಇನ್ನಿಲ್ಲೆಂತ ಮೌನ ಮುರ್ದ್ ಪುಟ್ಟ ಬಸವ ಮೊದ್ಲ್‌ನಂಗೆ ಬಲು ನಿಧಾನವಾದ ಸ್ವರಲಿ ಹೇಳ್ತ್.

"ನಮ್ಮ ತಯಾರಿ ಪೂರ್ತಿ ಆಕೆ ಇನ್ನ್ ಹಂಞ ಸಮಯ ಬೇಕು. ಒಮ್ಮೆ ಊರ್ ಬುಟ್ಟ ಮೇಲೆ ನಮ್ಮ ವೀರರ್ ಗೆದ್ದೇ ಬರೊಕು. ಹೇಳಿ ಯಾಗ ಹೋದರೆ ಅನುಕೂಲ?

ಉತ್ತರ ತಡ ಆತ್ಲೆ.

ಯಾಗಂತೇಳ್ರೆ? ಇಂದ್‌ಂತ ಹೇಳ್ರೆ ಇಂದೇ!" ಎಂದ ಸೋಮಯ್ಯ.

ಪುಟ್ಟ ಬಸವ ನಗಾಡ್ತ್.

"ಈ ವಿಷಯ ಪ್ರಸ್ತಾಪ ಮಾಡ್ದ ಕಡೆಲೆಲ್ಲಾ ನಾವುಗೆ ಸಿಕ್ಕಿದ್ ಇಂಥದೇ ಉತ್ತರ." ನಂಜಯ್ಯ ಹೇಳ್ತ್.

"ಇಲ್ಲಿ ಕೇಳಿ ಸೋಮಯ್ಯನವ್ರೇ, ಇನ್ನೇನ್ ಸ್ವಲ್ಪ ದಿನಲಿ ಸುಗ್ಗಿ ಬಂದದೆ. ಕೊಯ್ಲು ಮುಗ್ಸಿ ಹೊಸಕ್ಕಿನ ಪತಾಯಿಗೆ ಹಾಕಿ ಎಲ್ಲವು ಹೊರ್ಟರೆ ಆತ್. ಮುಂದೆನ ಸಾಗ್ವಳಿ ಹೊತ್ತಿಗೆ ಕೆಲ್ಸ ಮುಗ್ಸಿ ನಮ್ಮ ನಮ್ಮ ಊರಿಗೆ ನಾವು ವಾಪಾಸ್ಸಾಕು. ಹೌದೋ, ಅಲ್ಲನೋ?"

"ಅದ್ಸರಿ"

ಪುಟ್ಟ ಬಸವನ ಶಾಂತ ಸ್ವರ ಮತ್ತೆ ಕೇಳ್ತ್.

"ನಾವು ನಮ್ಮ ಗೆಳೆಯರ್ ಒಂದು ಮಾತ್ ಎಲ್ಲವುಕೆ ಹೇಳ್ತಾ ಬಂದೊಳ. ಯಾರ್‍ಯಾರ್ ಹೋಕು ಅಂತ ಊರ್‌ನವು ಆರ್‍ಸುದು ವಾಸಿ. ನಮ್ಮ ಹೆಣ್ಣ್‌ಗಳ, ಮಕ್ಕಳ ಅನಾಥ ಮಾಡಿ ನಾವು ಊರ್ ಬುಡಿಕೆ ಆಗದ್. ಗಂಡಸಿರಿಲ್ಲದ ಸಮಯಲಿ ಲೂಟಿ ಮಾಡು ಜನಕ್ಕೆ ಏನ್ ಬರಗಾಲ ಇಲ್ಲೆ. ಇದರ ನಾವ್ ಮರಿಯಕೆ ಆಗದ್"

ಈ ವಿಚಾರ ಸರಣಿನ ಕರಿಯಪ್ಪ ಸಮರ್ಥಿಸಿತ್.

"ಸರಿ ಹೇಳ್ದರಿ ಅಣ್ಣ. ಹಂಗೆ ಮಾಡಾನ"

... ಸಭೆ ಮುಗ್ತ್! ಪುನಃ ಯುದ್ಧನಾ... ಎಂದ್‌ಕಣ್ತ್ ಗಂಗವ್ವ. ಹೆತ್ತವಳ ಬೇನೆ ನಿಂಗೆನಾದ್ರ್ ಅರ್ಥ ಆದೆನಾ ಎಂದ್ ಗಿರಿಜವ್ವನ ನೋಡ್ತ್ ಅವಳು.

ತನ್ನ ಕೈ ಹಿಡ್ದ ಗಂಡಸ್ ವೀರಂತ ಹೇಳಿ ಗಿರಿಜೆಗೆ ಖುಷಿ ಆಗಿತ್ತ್. ಕೊಳಲ ಧ್ವನಿಂದ ಇಂಪು ಸಿಡಿಲಿನಂಗೆ ಕರ್ಣಕಠೋರ, ಅವ ಮಾತಾಡಿಕಾನ ಮರಗಿಡಗ, ಪ್ರಾಣಿಗಸ ಕಿವಿಗೊಟ್ಟಂಗೆ ಆಗ್ತಿತ್ತ್. ಅದ್ ಹಾಳ್ ಹರಟೆ ಅಲ್ಲ; ದೇಶದ ಭವಿಷ್ಯನೇ ನಿರ್ಧರಿಸುವ ಮಾತ್‌ಕತೆ.

ಗಿರಿಜವ್ವ ಕಣ್ಣೆತ್ತಿ ಅತ್ತೆನ ನೋಡ್ತ್. ಇನ್ನ್ "ಇಲ್ಲಿ ಎಷ್ಟ್ ದಿನ ಇದ್ದರೆ?" ಸೋಮಯ್ಯನ ಆ ಪ್ರಶ್ನೆನ ಕೇಳಿ ಗಂಗವ್ವಂದು ಗಿರಿಜೆದು ಕಿವಿ ಕುತ್ತ ಆತ್.

ಪುಟ್ಟ ಬಸವ ಹೇಳ್ತ್ – "ಅಮರ ಸುಳ್ಯ ಮಾಗಣೆಗೆ ಅಂದೇ ಧೂತರ ಕಳಿಸಿಯೊಳ. ಅಲ್ಲಿಂದ ಸುದ್ದಿ ಬಂದ ಕೂಡ್ಲೆ ಬೆಂಗುನಾಡು, ತಾವುನಾಡುಗಳ ಕಡೆಗೆ ಹೋದವೆ. ಅದೇ ಕಡೆನ ಸಂಚಾರ ಆಮೇಲೆ ಅರ್ಥಾತ್ ಅಲಾ?"

"ಗೊತ್ತಾತ್ ಅಣ್ಣ" ಅಂತ ಹೇಳ್ತ್ ಕರಿಯಪ್ಪ.

ಸೋಮಯ್ಯ ಹೇಳ್ತ್.

ನಾವು ಕಾದವೆ.

ಮಾತ್ ಒಂದ್ ಹಂತಕ್ಕೆ ಬಾತ್‌ಂತ ಅವ್ಕೆಲ್ಲಾ ಸಮಾಧಾನ.

"ಬಾಳ ಹೊತ್ತಾತ್. ಊಟ ತಣ್ಣಂಗೆ ಆಗಿದ್ದದೆ ಇಷ್ಟೊತ್ತಿಗೆಂತ ಹೇಳ್ತ್ ನಂಜಯ್ಯ.

ತಾಳೆಗರಿ ಬೇಕಾ? ದೀಪ ಬೇಕಾ? ಅಂತ ಕೇಳ್ತ್ ಪುಟ್ಟ ಬಸವ.

"ಇಷ್ಟು ತಿಂಗಳ ಬೊಳ್ಪು ಇರಿಕಾನ ದೀಪ ಯಾಕೆ? ಸೋಮಯ್ಯ ಹೇಳ್ತ್.

ಜನ ಎದ್ದದರ ನೋಡಿ ಕುದುರೆಗ ಹಿಡಿಂತ ಕೆನೆದಾಡಿದೊ.

ಕುದುರೆಗಳಿಗೆ ನಂಜಯ್ಯ ಹೇಳ್ತ್.

"ಇನ್ನು ಸ್ವಲ್ಪ ದಿನ ಹೊರ್ಡಿಕೆ ಇಲ್ಲೆ, ಅಷ್ಟರವರೆಗೆ ಮಜಾಲಿ ಇರಿ!" ಈ ಮಾತು ಕೇಳಿ ಕೆಲವು ಜನ ನಗಾಡ್ದೊ."

## ೬

ನೊಡುಮನೆಲಿ ಗಿರಿಜನ ಗಂಡಂಗೆ ಮತ್ತೆ ಅವನ ಕೂಟುಗಳಿಗೆ ಊಟ ಬಳ್ಸಿತ್. ಪೊಕ್ಲ ರೊಟ್ಟಿ ಸಾಯಾಂಕಲನೆ ಮಾಡ್ದರಂದ ತಣ್ಣಂಗೆ ಆಗಿತ್ತ್. ಆದರೆ ಕೆಂಡದ ಮೇಲೆನೆ ಇದ್ದ ಪಲ್ಯ ಬಿಸಿ ಇತ್ತ್. ಹೆಂಗು ಇದ್ದರು ಊಟದ ಬಗ್ಗೆ ಯೋಚಿಸುವ ಸ್ಥಿತಿಲಿ ಅವು ಇದ್ದರೆ ತಾನೆ? ಆ ಹೊತ್ತ್‌ಲಿ ಅವೆಲ್ಲ ಉತ್ಸಾಹಲಿದ್ದೊ. ಮನೆಯಂಗಳಲಿ ಜರುಗಿದ ಸಭೆನ ಕುರಿತೇ ಮಾತು. ಕರಿಯಪ್ಪನ ಎಲ್ಲವು ಹೊಗಳುವವೆ. ದೊಡ್ಡವನಾದ ಸೋಮಯ್ಯನ ಬಗ್ಗೆ ಗೌರವದ ಮಾತು. ಪುಟ್ಟಬಸವ ಹೇಳ್ತ್ – "ನೀವಿಂದ್ ಲಾಯ್ಕ ಮಾತಾಡ್ದರಿ ನಂಜಯ್ಯನವೇ"

ನಂಜಯ್ಯಂಗೆ ಹೊಗಳಿಕಾನ ನಾಚಿಕೆ ಆತ್. "ಬಿಡಿಯಪ್ಪ ಮಾತಾಡಿಕೇನ್? ನಿಮ್ಮದೇನ್ ಕಡಿಮೆ ಇತ್ತಾ? ಚೆಟ್ಟಿ ಕುಡಿಯ ಮಾತಾಡ್ತ್"

"ಜನ ಒಳ್ಳೆವು! ರಾಜಂಗೆ ಬೇಕಾಗಿ, ರಾಜ್ಯಕ್ಕೆ ಬೇಕಾಗಿ ಇವು ಏನ್ ಮಾಡಿಕೆ ತಯಾರೊಳ. ಮಾತಾಡದೆ ಇದ್ದ ಕರ್ತು ಕುಡಿಯನ ಉದ್ದೇಶಿಸಿ ಪುಟ್ಟ ಬಸವ ಹೇಳ್ತ್.

"ಇಂಥ ಸಾವಿರ ಎರಡು ಸಾವಿರ ಜನ ಇದ್ದರೆ ಇಂಗ್ಲೀಷರ ಓಡ್ಸುದು ಕಷ್ಟದ ಕೆಲಸನಾ ಕರ್ತು?"

ಒಂದೇ ತಿಂಗಳ್ಲಿ ಅದು ಸ ಸಾಧ್ಯ ಆದೆ" ಅಂತ ಕರ್ತು ಕುಡಿಯ ನಿರ್ಧರಿಸಿದಂಗೆ ಹೇಳ್ದೊ.

ಹೊನ್ನೆಣ್ಣೆಲಿ ದೀಪ ಹೊತ್ತಿ ಉರಿತ್ತಿತ್ತ್. ಚಿನ್ನದ ಬಣ್ಣದ ನೆರಳು ಗೋಡೆಲಿ ಕುಣಿದಾಡ್ತ್‌ತಿತ್. ಸದ್ದಿಲ್ಲದೆ ಒಳಗೆ ಬಾತಿದ್ದ ಗಾಳಿನೊಟ್ಟಿಗೆ ಬೆಳಕು ಕುಸ್ತಿಗೆ ನಿಂತಿತ್.

ಗಿರಿಜವ್ವ ಖಾಲಿ ಬಟ್ಲ್‌ಗಳಿಗೆ ರೊಟ್ಟಿಗಳ ಹಾಕಿತ್. ಮೂಲೆಲಿ ಕುದ್ದ ಗಂಗವ್ವ ಆಗಾಗ ಸೊಸೆಗೆ ಹೇಳ್ತಿತ್ತ್.

"ನೀಡವ್ವ, ಇನ್ನು ಒಂದಿಷ್ಟು ಹಾಕ್. ಗಂಡಸರ ಮಾತುಕತೆ ಅಪ್ಪಿಗೆ ಇಷ್ಟನೆ ಆಗಿತ್ತ್. ಆದರುಸ ಅವರ ಭಾವನೆಗಳ್ಲಿ ಕಂಡೂ ಕಾಣದಂಗೆ ನೋವು ಮನೆ

ಮಾಡಿತ್.

.... ಪುಟ್ಟ ಬಸವ ಗೆಳೆಯರೊಟ್ಟಿಗೆ ಹೊರಗೆ ಕುದ್ದ್‌ಕಂಡಿರಿಕಾನ ಅತ್ತೆನು ಸೊಸೆನು ಊಟ ಮಾಡಿ ಎದ್ದೊ. ಗಂಗವ್ವ ಗಿರಿಜೆಗೆ ಹೇಳ್ತ್,

"ನಾನು ಅಡಿಗೆ ಮನೆಲಿ ಮಲ್ಕಣೆ"

ಸೊಸೆ ಬೇಡಂತ ಹೇಳ್ತ್‌ಲೆ. ಅಂತ ಏರ್ಪಾಡ್ ಆ ರಾತ್ರಿ ಏನ್ ಶುರು ಆದ ಪದ್ಧತಿ ಆಗಿತ್ಲೆ.

ಸೆಕೆಗೆ ಚಿಂಟೆನೆ ಸರಿಂತ ಹೇಳ್ದೊ ಗೆಳೆಯರ್.

"ನೀವ್ಯಾಕೆ ಬಂದರೆ ನಮ್ಮೊಟ್ಟಿಗೆ!" ಹಂಗೆಂತ ನಂಜಯ್ಯ ನಗಾಡ್ತ್ ಪುಟ್ಟಬಸವನ ನೋಡಿ.

... ಬಾಗ್ಲ್ ಹಾಕಿ ಬಂದ್ ಗಿರಿಜ ಗಂಡನೊಟ್ಟಿಗೆ ಮಲ್ಗಿತ್. ಯಾವ ರೀತಿನ ಮಾತ್‌ನ ಅಗತ್ಯ ಅವ್ಳಿಗೆ ಕಂಡತ್ಲೆ. ದಷ್ಟಪುಷ್ಟವಾದ ರಟ್ಟೆ ಅವಳ ದೇಹನ ಬಳಸಿತ್. ಆ ತಬ್ಬುದು ಸಿಕ್ಕದೆ ಯುಗನೇ ಆಗಿತ್ತ್ ಕಂಡದೆ? ಆದರು ಸ ಗಿರಿಜೆನ ಮನ್ಸ್‌ಲಿ ಹೊಸ ಆಸೆಯೊಂದು ಹುಟ್ಟಿತ್.

ಈ ಇರ್ಲ್ ಬೊಳ್ಪಾಗದೆ ಇರಿಕೆ ಸಾಧ್ಯ ಆದರೆ? ಸೂರ್ಯ ಹುಟ್ಟುದು ಇರಿಕೆ ಆಗದ್, ಮುಳ್ಗಿಕೆನು ಆಗದ್. ಈ ನಿಮಿಷಂದ ಹಿಂಗೆ ಇದ್ದರೆ ಎಷ್ಟ್ ಲಾಯ್ಕ.

## ೭

ನಾಲ್ಕನೇ ದಿನಲಿ ತಿರ್ಗಿ ಬಂದವೆಂತ ಹೇಳಿ ಪುಟ್ಟಬಸವ ಮತ್ತೆ ಅವನ ಗೆಳೆಯರ್ ಹೊರಟ್ ಹೋದ ಮಾರ್ನೆ ದಿನನೆ ಯಾರೋ ಇಬ್ಬರ್ ಆ ಹಳ್ಳಿಗೆ ಬಂದೊ. ತಮ್ಮ ಮನೆ ಕಡೆಗೆ ಬರ್ತಿದ್ದ ಅವರ ಕಂಡ್ ಗಿರಿಜವ್ವಂಗೆ ಹೆದ್ರಿಕೆ ಆತ್. ಅವ್ಳ ಗಂಡ ಹೇಳಿಸ ಹೋಗಿತ್ತ್, ಕುಂಪಣಿ ಸರಕಾರದ ಗೂಢಚಾರರು ಬಂದರೂ ಬರುವಂತ.

'ಆ ಜನ ತುಂಬಾ ಹತ್ರಕ್ಕೆ ಬಾಕನ ಒಬ್ಬನ ಗಿರಿಜವ್ವ ಗುರ್ತಿಸಿತ್. ಮಾಚಯ್ಯ. ಪುಟ್ಟಬಸವನೊಟ್ಟಿಗೆ ಹಿಂದೊಮ್ಮೆ ಅವ ಊರಿಗೆ ಬಂದಿತ್ತ್. ಆ ಇನ್ನೊಬ್ಬ- ಅದೆಷ್ಟು ದಿನಗಳಂದ ನಡ್ದು ಬಂದಳೊನಾ? ಇಬ್ಬರ ಪಾದಗಸ ದಪ್ಪ ಆಗಿತ್ತ್. ಚಿಂಟೆಲಿ ಕುದ್ದ್ ಬೈರಸ್‌ಲಿ ಎದೆಗೆ ಗಾಳಿ ಹಾಕಿಕಣ್ತಿದ್ದ ಅವರೆದುರು ಗಿರಿಜವ್ವ ನೀರ್‌ನ ಚೊಂಬು ಇಸಿತ್. ಒಟ್ಟಿಗೆ ಬೆಲ್ಲನು ಇಸಿತ್.

ತನ್ನ ಗಂಡ ಎಲ್ಲಿಂತ ಕೇಳ್ರೆ ನಾನೆಂತ ಉತ್ತರ ಕೊಡಕುಂತ ಗಿರಿಜೆಗೆ

ಬಗೆಹರ್ತ್ಲೆ. ಮನ್ಸ್‌ಲಿದ್ದ ಆತಂಕನ ಮುಚ್ಚಿಸಿಕಂಡ್ ಅವ್ವು ಹೇಳ್ತ್.

"ಯಾವೂರಿಂದ ಬಂದರಿ?

"ನನ್ನ ಗುರ್ತ ಸಿಕ್ಕಿತ್ಲೆನಾ ಅಕ್ಕಾ? ಕೇಳ್ತ್ ಮಾಚಯ್ಯ.

ನಗಡಿಕಂಡ್ ಗಿರಿಜವ್ವ ಹೇಳ್ತ್ "ಸಿಕ್ಕಿತ್"

ನಾನ್ ಕೇಳ್ವ ಪ್ರಶ್ನೆಗೆ ಉತ್ತರ ತಾನಾಗಿಯೇ ಸಿಕ್ಕುದೋ ಏನೋ ಎಂದು ಮನೆಯೊಳಗೂ ಸುತ್ತಮುತ್ತ ನೋಡಿಕಂಡ್ ಮಾಚಯ್ಯ ಹೇಳ್ತ್.

"ಅಣ್ಣನವು ನನ್ನ ಸುಳ್ಯಕ್ಕೆ ಕಳ್ಸಿದೋ"

(ತನ್ನ ಗಂಡ ಧೂತರ ಆ ಊರಿಗೆ ಕಳ್ಸಿದ ವಿಷಯ ಗಿರಿಜವ್ವಂಗೆ ಗೊತ್ತಿತ್ತ್. ಹಂಗಾರೆ ಇವ ನಮ್ಮವನೆ)

ಸುಮ್ಮನಿದ್ದ ಗಿರಿಜವ್ವನ ನೋಡಿಕಂಡ್ ಮಾಚಯ್ಯ ಮಾತ್ ಮುಂದುವರ್ಸಿತ್.

"ಇಬ್ಬರ್ ಹೋಗಿದ್ದೋ. ಒಬ್ಬ ಅಲ್ಲಿಯೇ ಉಟ್ಟು. ಇವು ರಾಮಗೌಡರುಂತ. ಅಡ್ಕಾರಿನ ಮುಖ್ಯಸ್ಥರು. ಅಣ್ಣನವರ ನೋಡಿಕೆ ಕರ್ಕಂಡ್ ಬಂದೆ."

"ಯಾರ್ ಬಂದದ್?" ಹಂಗೆ ಕೇಳಿಕಂಡ್ ಗಂಗವ್ವನೂ ಸೊಸೆನ ಹಿಂದೆ ಬಂದ್ ನಿಂತತ್.

ಮನುಷ್ಯರ ದೇಹಗ ಸ್ವಲ್ಪ ಕಂಡತೇ ಹೊರ್ತ್, ಮಾಚಯ್ಯನ ಗುರ್ತ ಅವ್ವಿಗೆ ಸಿಕ್ಕಿತ್ಲೆ. ಸ್ವರ ಕೇಳ್ದಂತೆ ಆತ್ ಅವ್ವಿಗೆ. ಮಾಚಯ್ಯ ನೆಂಪು ಮಾಡಿಕೊಡಿಕಾನ ಹೌದುಂತ ಹೇಳ್ತ್.

ಅಂತು ಈ ಇಬ್ಬರ್ ಬಂದದಂರ್ದ ತನ್ನ ಗಂಡಂಗೆ ಯಾವ ತೊಂದರೆಸ ಇಲ್ಲೆಂತ ಗಿರಿಜೆಗೆ ಸಮಾಧಾನ ಆತ್. ಕೊನೆಗೆ ಮಾಚಯ್ಯಂದ ಪ್ರಶ್ನೆ ಬಾತ್.

"ಎಲ್ಲಿ ಅಣ್ಣನವು? ಹುಣ್ಣಿಮೆನ ಹೊತ್ತಿಗೆ ಊರು ಸೇರ್ನೆಂತ ಹೇಳ್ದೊ..."

ಈಗ ಹೆದ್ರದೆ ಗಿರಿಜಾ ಉತ್ತರಕೊಟ್ಟತ್.

"ಬಂದವು ಇಲ್ಲೆ ಹತ್ರ ಎಲ್ಲಿಗೋ ಹೋಗ್ಯೊಳೋ ಶನಿವಾರ ಬಾವ"

"ಇನ್ನು ಎರ್ಡ್ ದಿನ ಕಾಯೊಕಲ" ರಾಮಗೌಡನ ಸ್ವರ ಕೇಳ್ತ್.

"ಯಾವುದೋ ಗಡಿಬಿಡಿನ ಕೆಲ್ಸಕ್ಕೆ ಅವು ಬಂದದ್‌ಂತ ಆತ್. ನಡ್ದ್ ಸುಸ್ತಾದ್ರುಸ ಮುಖಲಿ ತೇಜಸ್ಸು ಇತ್ತ್. ಕೂದ್ಲ್ ತೆಳ್ಳಂಗಾಗಿ ತಲೆ ದುಂಡಗೆ ಕಂಡದೆ. ಮೋರೆಗೆ ಒಪ್ಪುವ ಮೀಸೆ. ವಿಶ್ರಾಂತಿ ಇಲ್ಲದ ಕಣ್ಣ್‌ಗ, ನೋಡ್ರೆ ಮತ್ತೊಮ್ಮೆ ನೋಡುವಂಗೆ ಇತ್ತ್ ಆ ರಾಮೇಗೌಡ.

ಮಾಚಯ್ಯ ಕೇಳ್ತ್, "ಸೋಮಯ್ಯನವು ಊರ್ಲಿ ಒಳನಾ?"

ಹೂಂ, "ಮೊನ್ನೆ ದಿನ ಹಳ್ಳಿನ ಮುಖಂಡಗ ಎಲ್ಲಸ ಇಲ್ಲಿಗೆ ಬಂದಿದೊ" ಗಿರಿಜವ್ವ ಹೇಳ್ತ್.

ಮಹತ್ವದ ಘಟನೆ ಇಲ್ಲಿ ಆಗಿಟುಂತ ರಾಮಗೌಡನೊಮ್ಮೆ ಮಾಚಯ್ಯ ನೋಡ್ತ್.

"ಸರಿ ನಾವ್ ಅವರಲ್ಲಿಗೆ ಹೋದವೆ" ಬಂದವರ ಊಟಕೆ ಏಳಿಕೆ ಹೇಳಕುಂತ ಗಿರಿಜೆನ ಗೃಹಿಣಿ ಮನ್ಸ್ ಹೇಳ್ತ್. ಅತ್ತೆನ ಕೇಳಕುಂತ ಆಕನ ಗಂಗವ್ವ ಅವಳೇ ಹೇಳ್ತ್.

"ಯಾಕಪ್ಪ ಇಲ್ಲಿನೆ ಊಟ ಮಾಡಕಲಾ"

"ಊಟಕ್ಕೇನ್ ತಾಯಿ? ಅಣ್ಣ ಬಂದಕೂಡ್ಲೆ ಇಲ್ಲಿಗೆ ಬಂದವೆ ಆಗದಾ?"

"ಅವಿಬ್ಬರು ಏನೋ ಕೆಲ್ಸಕ್ಕಾಗಿ ಬಂದೊಳಂತ ಗಂಗವ್ವ ಹೇಳ್ತ್."

"ನಿಮ್ಮಿಷ್ಟ"

ಮಂಜನ ನೆಂಪಾಗಿ ಇನ್ನೂ ಒಂದು ಪ್ರಶ್ನೆ ಕೇಳ್ತ್.

"ಘಟ್ಟದ ಕೆಳಗಿನ ಸುದ್ದಿ ಹೆಂಗಟ್ಟು?"

ಮಾಚಯ್ಯ ನಗಡಿಕಂಡ್ ಹೇಳ್ತ್.

"ಭಾರಿ ಸುದ್ದಿನೆ ಉಟ್ಟು ಅವ್ವ, ಎಲ್ಲವು ಅಣ್ಣ ಬಾದರ್ನೆ ಕಾಯ್ತಾ ಒಳ" ಅದರ ಕೇಳಿ ಅತ್ತೆ ಸೊಸೆ ಇಬ್ಬರಿಗು ಅಭಿಮಾನದ ಒಟ್ಟಿಗೆ ಹೆದ್ರಿಕೆನು ಆತ್. ಆ ದಿನ ಮನೆ ಎದ್ರು ನಡ್ದದರ, ನನ್ನ ಕಿವಿ ಬಿದ್ದ ವಿಷಯನ ಅವುಕೆ ಹೇಳುವ ಆಸೆ ಆತ್. ಗಂಗವ್ವಂಗೆ. ಮಾಚಯ್ಯಸ ಮಂಜನೊಟ್ಟಿಗೆ ಇದ್ದದ್ ನೆನ್ಪಿಗೆ ಬಾತ್. ಮಂಜನು ಅವನ ಗೆಳೆಯರ್ ಕುದುರೆ ಓಡ್ಸಿಕಂಡ್ ಬಂದಿದ್ದೊ. ಇವ? ಈ ಇಬ್ಬರ್?"

"ಅಷ್ಟು ದೂರಂದ ನೀವ್ ನಡ್ಕಂಡ್ ಬಂದದ್ದಾ?"

"ಹೂ ತಾಯಿ. ಇಲ್ಲಿಗೆ ಬಾವ ವಿಷ್ಯ ಡಂಗುರ ಆದು ಬೇಡಾಂತ ಕುದುರೆಗಳ ತಾತ್ಲೆ."

ಅಪಾಯ ತುಂಬಿದ ಭಾರಿ ಸುದ್ದಿನೆ ಉಟ್ಟು. ಹೆದ್ರಿಕೆನ ತೋರ್ಸದಂಗೆ ಗಂಗವ್ವ ಹೇಳ್ತ್.

ಮಂಜನೊಟ್ಟಿಗೆ ಮೂರ್ ಜನ ಕೂಟುಗಸ ಬಂದಿದ್ದೊ. "ನಂಜಯ್ಯನವು, ಚೆಟ್ಟಿ ಮತ್ತೆ ಕರ್ತು ಆಗಿರ್ದು. ಅಲ್ಲಾ?

"ಹೂಂ. ಅವರೇನೇ

"ಮೂರು ವಾರಗಳ ಹಿಂದೆ ನಾವೆಲ್ಲ ಸೇರಿದ್ದೊ ಅಮ್ಮ"

"ಹಂಗ?"

ರಾಮಗೌಡ ಮೋರೆಲಿದ್ದ ಬೆವ್ರ ಹನಿನ ಕೈಲಿ ಉಜ್ಜಿ ಹೆಂಗಸ್ರ ಕಡೆಗೊಮ್ಮೆ ನೋಡಿ ಸಣ್ಣ ದನಿ ಮಾಚಯ್ಯಂಗೆ ಹೇಳ್ತ್.

"ಸೋಮಯ್ಯನವರ ಮನೆ ಇಲ್ಲಿಂದ ಎಷ್ಟು ದೂರ"

"ಒಂದು ಫರ್ಲಾಂಗು ಆದು"

ಅಷ್ಟೇನಾ? ಹಂಗಾರೆ ನಡಿಯನಿ, ಪೋಯಿ.

ಹೊರ್ಡಿಕೆಂತ ಅವು ಎದ್ದದರ ಕಂಡ್ ಗಂಗವ್ವ ಹೇಳ್ತ್.

"ಪುಟ್ಟ ಬಸ್ಯ ಬಂದ ಕೂಡ್ಲೆ ನೀವು ಬಂದ ವಿಷ್ಯ ಹೇಳ್ನೆ. ಆ ಮೇಲೆ ಇಬ್ಬರುಸ ಇಲ್ಲಿಗೆ ಊಟಕ್ಕೆ ಬನ್ನಿ"

"ಊಟಕ್ಕೇನು ತಾಯಿ? ಖಂಡಿತ ಬಂದವೆ."

... ಗದ್ದೆ ಪುಣಿ ದಾಟಿದಂಗೆ ಮಾಚಯ್ಯ ಹೇಳ್ತ್.

"ಮನೆಗೆ ಬಂದವ್ಕೆ ಊಟ ಹಾಕುದರ ಬುಟ್ಟು ಬೇರೆ ಯೋಚನೆನೆ ಇಲ್ಲೆ ಹೆಂಗಸರಿಗೆ"

ರಾಮಗೌಡ ಉತ್ತರವಿತ್ತ.

"ಎಲ್ಲ ಕಡೆಲಿಸ ಅಷ್ಟೆ. ಊರ್‍ಲಿ ನಮ್ಮ ಅಮ್ಮನನ್ನೇ ನೀವು ನೋಡ್ದರಿ ಅಲಾ? ನನ್ನ ಸ್ನೇಹಿತರುಂತ ಹೇಳ್ದ ಕೂಡ್ಲೆ ಮಕ್ಕಳ ಹಂಗೆನೆ ಕಂಡದೆ."

ಕಾಡ್‌ನ ಕಾಲುದಾರಿ ಬಾತ್. ನಾಕ್ ಮಾರ್ ದೂರಲೇ ಅದು ಕವಲೊಡ್ತ್. ಒಂದು ಕ್ಷಣ ಅಲ್ಲಿ ನಿಂತ್ ಯಾವ ದಿಕ್ಕ್‌ಲಿ ಹೋಕುಂತ ಯೋಚಿಸಿ ಮತ್ತೆ ಮುಂದೆ ಹೋದೊ.

ನಡ್ಕಂಡ್ ಹೋಕನ ಮಾಚಯ್ಯ ಹೇಳ್ತ್.

"ಪುಟ್ಟ ಬಸವರಾಜರ ತಾಯಿ ತುಂಬಾ ಕಷ್ಟ ಅನುಭವಿಸ್ಯೊಳ. ಅವು ಬಸ್ಸಿ ಆಗಿರಿಕಾನಲೇ...

ಆಸಕ್ತಿಂದ ರಾಮಗೌಡ ಕತೆಗೆ ಕಿವಿಗೊಟ್ಟತ್. ಆ ತಾಯಿನ ವಿಷಯಲಿ ಅವನ ಗೌರವ ಹೆಚ್ಚಿತ್.

ಮಾಚಯ್ಯ ಮಾತ್ ನಿಲ್ಸಿಸಿ "ಹೂಂ" ಗುಟ್ಟುದು ಅನಗತ್ಯಂತ ಆಕನ ರಾಮಗೌಡ ಹೇಳ್ತ್.

"ಇಲ್ಲೆಗೆ ಬಂದ ಮೇಲಂತು ನಮ್ಮ ಕೆಲ್ಸ ಗಂಡಾದೆಂತ ನಂಬಿಕೆ ಹೆಚ್ಚಿಟು ಮಾಚಯ್ಯನವೇ.

"ಪುಟ್ಟ ಬಸವರಾಜರ ಸುರುಗೆ ನೋಡೊಕು. ಆ ಮೇಲೆ ಹೇಳಿ.." ಸ್ವಲ್ಪ ದೂರ ಮಾತಾಡದೆ ನಡ್ದ ಮೇಲೆ ರಾಮಗೌಡ ಹೇಳ್ತ್.

"ನಾನಾಗಲೀ ನಮ್ಮ ಜನ ಆಗಲಿ ಇಲ್ಲಿವರ್ಗೆ ಯುದ್ಧ ಮಾಡ್ದವೆ ಅಲ್ಲ. ನಾವುಗೆ ಯುದ್ಧದ ಅಗತ್ಯನೇ ಇದ್ದರೆಲ? ಗದ್ದೆಲಿ ಬೇಸಾಯ ಮಾಡಿ ನಮ್ಮಷ್ಟಕ್ಕೆ ನಾವು ಇರುವವು. ಆ ಸ್ವಾತಂತ್ರ್ಯಕ್ಕೆಸ ಅಡ್ಡಿ ಬಾಕನ ಹೆಂಗೆ ಸುಮ್ಮನಿರ್ದು ಹೇಳಿ? ಗೌಡಂಗೆಲ್ಲ ಪುಕ್ಕಲು ಜನಂಗಂತ ಕುಂಪಣಿಯವು ನೆನ್ಸಿದನೋ ಏನೋ. ಅದು ಈಗ ಇತ್ಯರ್ಥ ಆಕು. ನಮ್ಮ ಗದ್ದೆಲಿ ನಾವು ಬೆಳಿಯದು ನಮ್ಮ ಸೊತ್ತೇ ಆಕು. ಅದರ ಇನ್ನೊಬ್ಬಂಗೆ ನಾವು ಯಾಕೆ ಕೊಡ್ದು?

ರಾಮಗೌಡನ ಬಾಯಿಂದ ಆ ಮಾತ್‌ಗಳ ಮಾಚಯ್ಯ ಹಿಂದೆನು ಕೇಳಿತ್. ಮಂತ್ರಶಕ್ತಿನ ಪ್ರಯೋಗ ಮಾಡ್ದಂಗೆ ಕೇಳುವ ಜನರ ಮೇಲೆ ಆ ಪದಗ ಪ್ರಭಾವ ಬೀರ್ತಿದ್ದೋ. ಒಂದೆ ಸೂತ್ರಲಿ ಕೇಳುವವರೆಲ್ಲ ಹಿಡಿವ ಶಕ್ತಿ ಇತ್ತ್ ಆ ಮಾತ್‌ಗಳಿಗೆ.

ಸುಳ್ಯದಲ್ಲಿ ರಾಮಗೌಡ ಹೇಳ್ತಿತ್.

"ನೀವುಗೆ ಎಷ್ಟ್ ಜನ ಬೇಕು ಮಾಚಯ್ಯನವೇ?

ಸಾವಿರನೇ? ಎರ್ಡ್ ಸಾವಿರನಾ? ಮೂರೇ? ಉಳುವವರ ಕುಲ ಅಳಿಯದುಲ್ಲೆ. ಭೂಮಿ ತಾಯಿನು ಬಂಜೆ ಅಲ್ಲ. ಒಂದು ತಲೆ ಕಡ್ದರೆ ಅದ್ರ ಬದ್ಲ್ ನೂರ್‌ತಲೆಗೆ ಚಿಗುರುವೆ!"

ಲೆಕ್ಕನೇ ಇಲ್ಲದಷ್ಟ್ ಆತ್ಮವಿಶ್ವಾಸ ಇದ್ದ, ತನ್ನ ರಟ್ಟೆಬಲಲಿ ತನಗೇ ನಂಬಿಕೆ ಇದ್ದವ ಧೀರ ಮಾತ್ರ ಹಂಗೆ ಮಾತಾಡಿಕೆ ಸಾಧ್ಯ ಇತ್ತ್.

ದರ್‌ಗಗಳ ನೊಡುಂದ ಓಂತಿ ಹರ್ತ್. ಎರ್ಡ್ ಹಳೇ ಮುದಿ ಮರಗ ಕಿರ್ ಕಿರ್‌ಂತ ಹೇಳ್ದೊ. ಗಾಳಿ ಮೋರೆಗೆ ಲಾಯ್ಕ ಬೀಸ್‌ತ್ತಿತ್. ತೋಡುಲಿ ನೀರ್ ಜುಳು ಜುಳುಂತ ಹರಿತ್ತಿತ್.

ಆದರೆ ಮಾಚಯ್ಯ ಈ ಸೌಂದರ್ಯದ ಲೋಕಲಿ ಇತ್ಲೆ. ಅವನ ತಲೆಲಿ ಗುಂಯ್‌ಗುಡ್ತಿದ್ದದ್ ರಾಮಗೌಡ ಹೇಳ್ದ ಪದಗಳೇ ಮಾಚಯ್ಯ ಮೆಲ್ಲನೆ ಹೇಳ್ತ್.

ನಂಗೆ ಬುದ್ಧಿ ಬಂದ ದಿನಂದಸ ನಾನ್ ಯುದ್ಧ ಮಾಡ್ತಾನೆ ಒಳೆ ಗೌಡರೇ. ಆ ಯುದ್ಧಗಳಿಗೆಲ್ಲ ಅರ್ಥ ಇತ್ತಾ ಇತ್ಲೆನಾ ಗೊತ್ಲೆ. ಹೊಡಿಯದು, ಕಡಿಯದು ಮಾತ್ರ ಗೊತ್ತಿರುವ ವಿದ್ಯೆ. ಆದರೆ ಈಗ ಹಂಗೆ ಅಲ್ಲ. ಇಲ್ಲಿಯವರೆಗೆ ಇಲ್ಲದ ಅನುಭವ ಈಗ ಆಗ್ತಾ ಉಟ್ಟು. ನಾ ಹುಟ್ಟಿದ್ ಸುಮ್ಮನೆ ಅಲ್ಲ, ಬದ್ಕಿಗೆ ಅರ್ಥ ಉಟ್ಟುಂತ ಈಗ ಅನ್ಸಿದೆ. ಪವಿತ್ರ ಯುದ್ಧ, ಧರ್ಮಯುದ್ಧ ಅಂತ ಹೇಳ್ದು ಇದಿಕ್ಕೆ

ಅಲಾ? ಇಂಥ ಯುದ್ಧಲಿ ಸಾಯಕೆ ಆದರೂ ಖುಷಿಲಿ ಸತ್ತನೆ.

ರಾಮಗೌಡ ಒಟ್ಟಿಗಿದ್ದ ಯೋಧನ ತುಂಬು ಪ್ರೀತಿಲಿ ನೋಡ್ತ್. ಮಾತಾನಾಡೊಕುಂತ ಮಾತ್ರ ಅನ್ನಿಸಿತ್ಲೆ.

... ಅತ್ತೆ ಸೊಸೆ ನಿಂತಲ್ಲೆ ನಿಂತಿದ್ದೋ. ಸುಮಾರು ಹೊತ್ತು. ಗದ್ದೆ ದಾಟಿ ಕಾಡ್ ಬದಿ ತಲ್ಪುವರೆಗೆ ನೋಡಿಕಂಡೆ ನಿಂತಿದ್ದೊ.

ಗಂಗವ್ವಂಗೆ ಕಣ್ಣ್ ಸರಿ ಕಾಂಬೊದ್ಲೆ. ಆದರುಸ ಅಭ್ಯಾಸ ಬಲಲಿ ಆ ಕಡೆನೆ ಕಣ್ಣ್‌ಗ ಹೋಗ್ತಿತ್ತ್. "ಇಬ್ಬರ್ ಹೋದೇನಾ? ಸೊಸೆನ ಅತ್ತೆ ಕೇಳ್ತ್.

'ಹೂಂ' ಅತ್ತೆಮ್ಮಂತ ಹೇಳ್ತ್ ಗಿರಿಜಾ.

"ಊಟದೊತ್ತಿಗೆ ಸೋಮಯ್ಯನಲ್ಲಿಗೆ ಹೋಗಿದ್ದವೆ"

"ಹೂಂ"

ಆ ಇಬ್ಬರ ದೂರಂದ ಸುರುಗೆ ನೋಡಿಕಾನ ಅಫ್ಳಿಗೆ ಆದ ಹೆದ್ರಿಕೆನಾ ನೆನ್ಸಿಕಂಡ್ ಗಿರಿಜವ್ವ ಹೇಳ್ತ್.

"ಅವು ಕುಂಪಣಿ ಕಡೆವುಂತ ಹೆದ್ರಿಕೆ ಆಗಿತ್ತ್. ಕಯಿ ಯೋಚನೆಗಳ ಹತ್ರಕೆ ಬಾಕೆ ಬುಡದೆ ಗಂಗವ್ವ ಹೇಳ್ತ್.

"ಕುಂಪಣಿ ಕಡೆಯವು ಈ ಊರಿಗೆ ಬಂದರೆ ಜೀವ ಸಹಿತ ವಾಪಾಸು ಹೋಗುವನಾ?"

## ೮

ತಾನ್ ಬಂದ ಉದ್ದೇಶನ ರಾಮಗೌಡ ಹೇಳಿಕಾನ, ಪುಟ್ಟ ಬಸವ ಒಮ್ಮೆಲೆ ಉತ್ತರ ಕೊಟ್ಟತ್ಲೆ. ಅವನ ಕೂಚುಗಸ ಸುಮ್ಮನೆ ಕುದ್ದಿದ್ದೊ.

ಇವು ಹಿಂದೇಟು ಹಾಕುವಂತ ನೆನ್ಸಿ ರಾಮಗೌಡಂಗೆ ಕಸಿವಿಸಿ ಆತ್.

"ಯಾಕೆ ಸುಮ್ಮನೊಳರಿ? ಇದ್ ಅಸಾಧ್ಯ ಅಂತನಾ?" ಪುಟ್ಟಬಸವನ ಕಣ್ಣ್‌ಗ ಮಿನ್ಕಿತ್. ತುಟಿಲಿ ಲಾಯ್ಕನ ನೆಗೆ ಬಾತ್.

"ನಿಮ್ಮದ್ ತಪ್ಪು ಯೋಚನೆ ಗೌಡ್ರೆ. ಇಲ್ಲಿವರ್ಗೆ ನನ್ನ ಕಣ್ಣ್ ಮುಂದೆ ಇದ್ದದ್ ಕೊಡಗ್ ಮಾತ್ರ. ಈಗ ದೊಡ್ಡ ಚೌಕಟ್ಟ್‌ನ ಒಳಗೆ ಬೇರೆ ಚಿತ್ರನಾ ಕಲ್ಪಿಸಿಕಂಡ್ ಒಳೆ.

ರಾಮಗೌಡನ ಮೋರೆ ಅರ್ಳಿತ್. ಅವ ಹೇಳ್ತ್

"ಮಾಚಯ್ಯನವೇ ಕೇಳಿ ಇಲ್ಲಿ. ನಮ್ಮ ಜನರ್ಲಿ ಎಲ್ಲಾ ಅಶಾಂತಿ ಹೊಗೆ

ಆಡ್ತಾ ಉಟ್ಟು. ಒಂದೇ ಒಂದು ಕಿಡಿ ಸಾಕ್ ಭಗ್ ಅಂತ ಹೊತ್ತಿಕಂಬಕೆ. ಒಬ್ಬ ನಾಯಕ ಬಂದ್ ಈ ದಾರಿ ಹಿಂಗೆಂತ ಹೇಳ್ರೆ ಸಾಕ್. ಜನ ಮುಂದೆ ನುಗ್ಗುವೆ."

...ಇದ್ ನಿಜವಾದ ವರದೀಂತ ಹೇಳಿಕೆ ಸಾಕಷ್ಟ್ ಆಧಾರ ಇತ್ತ್. ಅಮರ ಸುಳ್ಯನ ಈಗ ಕನ್ನಡ ಜಿಲ್ಲೆಗೆ ಸೇರ್ಸಿದೋ. ಮುಂದೆ ಆದರೆ ಅಮರ ಸುಳ್ಯಲಿ ಆಚರಣೆಲಿ ಇದ್ದದ್ ಲಿಂಗರಾಜನ ಶಿಸ್ತ್. ರೈತರೆಲ್ಲ ರಾಜಂಗೆ ಒಪ್ಪಿಸ್ತಿದ್ದದ್ ಧ್ಯಾನ ರೂಪದ ಕಂದಾಯ. ಆದರೆ ಈಗ ಕುಂಪಣಿ ಸರಕಾರಕ್ಕೆ ಕಂದಾಯನ ದುಡ್ಡನ ರೂಪಲಿ ಕೊಡಕುಗಡ. ದುಡ್ಡು ಕೊಡಿಕೇನ್ ಟಂಕಸಾಲೆ ಉಟ್ಟಾ ಜನರತ್ರ? ಅಷ್ಕೆ ಇದ್ದ ದಾರಿಂತ ಹೇಳ್ರೆ ಸಾಹುಕಾರ್‍ರಿಗೆ ಧಾನ್ಯನ, ಕಾಳ್‌ಗಳ ಮಾರ್ದು. ಚೊಲ್ಲುವ ಅವಕಾಶ ಸಿಕ್ಕಿರೆ ಸುಮ್ಮನಿದ್ದವೆನಾ ವ್ಯಾಪಾರಿಗ? ಬೇಕಾದಷ್ಟ್ ಬೆಳೆಗೆ ಅವು ಕೊಡ್ತಿದ್ದದ್ ಹಂಞನೆ ಬೆಲೆ. ಬೆಳ್ಸಿದ ಅಕ್ಕಿ, ಭತ್ತ ಎಲ್ಲಾ ವ್ಯಾಪಾರಿಗೆ ಕೊಟ್ಟರು ಸಹ ಕಂದಾಯಕ್ಕೆ ದುಡ್ಡು ಎತ್ತ್‌ತ್ತಿಲ್ಲೆ. ಮುಂದೆ ಉಣ್ಣಿಕೆ ಮತ್ತೆ ಬಿತ್ತನೆ ಮಾಡಿಕೆ ಆ ವ್ಯಾಪಾರಿಗಳಂದ್ಲೆ ವಾಪಾಸು ತಕಣುವದರ್ದು ಬೇರೆ.

ಪಾರತಂತ್ರ್ಯದ ಪ್ರಾಣಿಗ ಕುಮ್ಮನ ಬಗ್ಗ್ದ ಕರ್ಳ್‌ನನೇ ಕಿತ್ತ್‌ಹಾಕ್ತಿದ್ದೊ.

...ಪುಟ್ಟ ಬಸವ ನಂಜಯ್ಯನ ಮೋರೆ ನೋಡ್ತ್ ಚೆಟ್ಟಿ ಮತ್ತೆ ಕರ್ತುಕುಡಿಯರ ನೋಡ್ತ್. ಅವ್ರ ಮನ್ಸ್‌ಲಿ ಏನಿತ್ತ್‌ಂತ ಗ್ರಹಿಸಿಕಂಡ್ ಅವ ಕೇಳ್ತ್.

"ಏನ್ ಹೇಳ್ರೆ?"

ನಂಜಯ್ಯ ಮೀಸೆ ಮೇಲೆ ಕೈ ಇಸಿತ್.

"ಹೇಳಿಕೆ ಏನುಟ್ಟು? ಕೊಡಗ್ ಕನ್ನಡ ಜಿಲ್ಲೆ ಎರ್ಡೆ ಸಾಕಾ? ನಾಳೆ ಮೈಸೂರುಂದಸ ಆ ಕುರೆಗಳ ಓಡ್ಸಮ. ಕಾಶೀವರೆಗೆ ಬೇಕಾರೆ ಪೋಯಿ."

"ಮಹಾರಾಜರಂದ ಸುದ್ದಿ ಬಾತಾ?" ಕೇಳ್ತ್ ರಾಮಗೌಡ ಪುಟ್ಟ ಬಸವ ಹೇಳ್ತ್.

"ಬಂದಿತ್ತ್ ಈಗ ಪುನ ನಾವೆ ಧೂತರ ಕಳ್ಸೊಕು. ನಮ್ಮ ಕಾರ್ಯಕ್ರಮನ ಅವ್ಕೆ ಹೇಳೊಕು."

"ಹೂಂ. ಮುಖ್ಯ ಕೆಲ್ಸನೆ ರಾಜರ್ ಕಾಶಿಂದ ಪುನಃ ಬಂದವೆಂತ ಹೇಳ್ರೆ ಜನರ್‍ಲಿ ಆಸಕ್ತಿ ಹೆಚ್ಚಾದೆ.

ಪುನಃ ಚಿಂತೆಲಿ ಮುಳ್ಗಿ ಹೋದ ಪುಟ್ಟಬಸವ ಹೇಳ್ತ್.

"ಹೆಜ್ಜೆ ಮುಂದೆ ಇಸಿದ ಮೇಲೆ ಹಿಂದೆ ತೆಗಿವ ಪ್ರಶ್ನೆನೆ ಇಲ್ಲೆ. ಇದ್ ಮಕ್ಕಳಾಟ ಅಲ್ಲ. ಈ ಹೋರಾಟ ಎಷ್ಟ್ ಗಂಭೀರಂತ ನೀವುಗೆಲ್ಲ ಗೊತ್ತುಟಲಾ?

"ಗೊತ್ತುಟು. ನಿಮ್ಮನೆಲ್ಲ ಕರಿಯಕೆ ಬಂದ ನಂಗೆ ನನ್ನ ಜವಬ್ದಾರಿನು ಗೊತ್ತುಟು. ಯಾಕೆ ನನ್ನ ಮಾತ್‌ಂದ ನೀವುಗೆಲ್ಲಾ ನಂಬಿಕೆ ಹುಟ್ಟುದ್ಲೆನಾ?"

ಆ ಮಾತ್‌ಲಿದ್ದ ನೊಂದ ಧ್ವನಿನ ಗುರ್ತಿಸಿ ಪುಟ್ಟಬಸವ ಹೇಳ್ತ್.

"ಹಂಗೆ ಕೇಳ್ದೆಂತ ತಪ್ಪು ಭಾವಿಸ್ಬೇಡಿ ಗೌಡ್ರೆ. ಪರಿಸ್ಥಿತಿ ಸರ್‍ಯಾಗಿ ತಿಳ್ದಷ್ಟು ಕೆಲ್ಸ ಸುಲ್ಬ ಆದೆ. ಹೌದೇ ಅಲ್ಲನಾ? ಈ ಮಾತ್ ಕಿವಿಗೆ ಬೀಳಿಕಾನ. ಗೌಡಂಗ ಖುಷಿ ಆತ್.

ನಂಜಯ್ಯ ಕೇಳ್ತ್.

"ಯಾಗ ಸುರು ಮಾಡೊಕುಂತ ನಿಮ್ಮ ಅಭಿಪ್ರಾಯ?

"ಆದಷ್ಟು ಬೇಗ, ತಡ ಮಾಡಿಕೆ ಇಲ್ಲೆ, ಎಲ್ಲಾ ತಯಾರಾಗಿಟು ನೋಡಿ"

ಚೆಟ್ಟಿ ಬಾಯಿ ತೆರ್ತ್.

ನಮ್ಮಲ್ಲಿ ಶಸ್ತ್ರಾಸ್ತ್ರ ಏನೆಲ್ಲಾ ಉಟ್ಟು. ಲೆಕ್ಕ ಹಾಕ್ಯೊಳರಿಯ?

ರಾಮಗೌಡನೆಂದ

"ಈ ಪ್ರಶ್ನೆನು ಅರ್ಥ ಆತ್ ನಂಗೆ ತಮ್ಮಾ. ಅವರತ್ರ ಫಿರಂಗಿ ಉಟ್ಟು. ನಮ್ಮತ್ರ ಇಲ್ಲೆ ಅಂತ ನೀನು ಹೇಳ್ದೊಲ?

ನೋಡಿಕಣಮ! ಸಧ್ಯಕ್ಕೆ ಕುದುರೆಸ ನಮ್ಮಲ್ಲಿ ಹೆಚ್ಚಿಲ್ಲೆ. ಇದ್ದಷ್ಟು ಜನಕ್ಕೆ ಕೋವಿ–ಕತ್ತಿ, ಉಳ್ಕವ್ಕೆ ಬಡಿಗೆ–ದೊಣ್ಣೆ. ನಂಜಯ್ಯ ಮಾತ್ ಸೇರ್‍ಸಿತ್.

ಶಸ್ತ್ರಾಸ್ತ್ರಕ್ಕೇನ್! ಶತ್ರುಗಳ ಹತ್ರ ಇದ್ದರೆ ನಮ್ಮಲ್ಲಿ ಇದ್ದ ಹಂಗೆ ಒಂದೊಂದು ಯುದ್ಧಲಿ ಸಂಪಾದಿಸಿಕಂಡ್ ಹೋದರೆ ಆತ್!"

"ಸರಿ ಹೇಳ್ದರಿ! ಎಂದ ರಾಮಗೌಡ, ನಂಜಯ್ಯನ ಮಾತಿಗೆ ಗೌರವ ಕೊಟ್ಟ್‌ಕಂಡ್,

ಮಾತ್ ಮತ್ತೆ ಅಮರಸುಳ್ಯದ ಕಡೆಗೆ ತಿರ್‍ಗಿತ್.

ರಾಮಗೌಡ ಕೇಳ್ತ್

"ಅಲ್ಲ ಕೊಡಗ್‌ಲಿ ದಿವಾನರ್ ಎಷ್ಟ್ ಜನ?

ನಂಜಯ್ಯ ಗೌಡರ್‍ನೆ ನೋಡಿ ಹೇಳ್ತ್.

"ನೀವು ಮಡಿಕೇರಿಗೆ ಇಲ್ಲಿವರ್‍ಗೆ ಬಾತ್ಲೆಲಾ?"

"ಇಲ್ಲೆ"

ಮುಖ್ಯ ದಿವಾನಂತ ಯಾಗೊಳು ಒಬ್ಬನೆ ಆದರೆ ದಿವಾನಗ ಅಂತ ಹೆಸರಿರವು ಬೇರೆ ಮೂರ್ ಜನ ಒಳ. ಈಗ ನೋಡಿ ಬೋಪು ಮುಖ್ಯ ದಿವಾನ.

"ಅದಿಕ್ಕೆ ಕೇಳ್ದ್. ಲಕ್ಷ್ಮೀನಾರಾಯಣ ಅಂತ ಒಬ್ಬ ಬ್ರಾಹ್ಮಣಸ ದಿವಾನ ಆಗಿಟು ಅಲಾ?"

"ಹೌದು"

"ಅವನ ತಮ್ಮನೇ ರಾಮಪ್ಪಯ್ಯ"...

... ರಾಮಪ್ಪಯ್ಯ ಅಮರ ಸುಳ್ಯದ ತುಂಡು ಪಾಳೆಗಾರ. ಜಾತಿಲಿ ಬ್ರಾಹ್ಮಣ. ಕನ್ನಡ ಜಿಲ್ಲೆಯ ಕಲೆಕ್ಟರ್ ಸಾಹೇಬರಿಗೆ ಗೆಳೆಯ. ಕೊಡಗ್‌ನ ವಿಷಯಲಿ ಸ್ವತಃ ದಿವಾನನ ಹತ್ರದ ನೆಂಟ ಆತ್. ತನ್ನ ತಾನೆ ಹತ್ತೂರ ದೊರೆಂತ ಕರ್ದ್‌ಕಂಡಿತ್ತ್. ನೊಡುಪ್ರಾಯ ದಾಟಿರುಸ ಗಟ್ಟಿಮುಟ್ಟಾಗಿತ್ತ್ ಅವನ ಜೀವ.

ಹೊರಗೆಂದ ದೊರೆ, ಪರಾಕು. ಅಂತ ಹೇಳುವವು ಹೆಬ್ಬುಲಿಂತ ಅಡ್ಡ ಹೆಸರ್ ಇಸಿದ್ದೋ. ಯಾಕೆಂತ ಹೇಳ್ರೆ ಕುಂಪಣಿ ಸರ್ಕಾರಕ್ಕೆ ಕೊಡ್ವ ಕಂದಾಯ ಅಲ್ಲದೆ ರೈತರು ಇವಂಗು ಒಂದು ಪಾಲು ಒಪ್ಪಿಸಕಾಯ್ತ್. ಒಳ್ಳೆ ಫಸಲು ಬರ್ವ ಭೂಮಿಯೆಲ್ಲ ಇವಂದೆ. ಪೆಟ್ಟ್‌ನ ಹೆದ್ರಿಕೆ ತೋರ್ಸಿನೆ ಇನ್ನೊಬ್ಬರ ಗದ್ದೆನ ಆತ ತಕಣ್ತಿತ್ತ್. ಓಲೆಗರಿಗೆ ಒತ್ತಾಯಲಿ ಹೆಬ್ಬೆಟ್ಟು ಹಾಕ್ಸಿಕಣ್ತಿತ್ತ್. ಪ್ರತಿಭಟನೆ ಮಾಡ್ದವರ ಮೇಲೆ ರಾಮಪ್ಪಯ್ಯನ ಬಂಟರು ಬರೆ ಹಾಕ್ತಿದ್ದೊ. ತಿರ್ಗಿಸಿ ಹೊಡಿವವರ ಹೆಡೆಮುರಿ ಕಟ್ಟಿ ರಾಜನ ಕಾಲ್ಬುಡಕ್ಕೆ ತಂದ್ ಹಾಕ್ತಿದ್ದೊ.

ಅಟ್ಲೂರ್ಲಿದ್ದ ಅವನ ಮನೆನೆ-ಮನೆ ಅಲ್ಲ ಅದ್ ಅರಮನೆನೆ ಅವಂಗೆ ದುರ್ಗ ಆಗಿತ್ತ್. "ಗುರುವ!" ಹಿಂಗೆ ಕರ್ದರೆ ಸಾಕ್ "ಉಳ್ಳಯ್ಯಾ!" ಅಂತ ಓಡಿಬರ್ತಿದ್ದ ಚಾಕರ. ಹಂಗೆ ತನಿಯ, ತುಕ್ರ... ಎಷ್ಟ್ ಜನ! ಸುಬ್ಬಯ್ಯ ಅಂತು ಚಿಗುರು ವೀಳ್ಯದೆಲೆಗೆ ಸುಣ್ಣ ಹಾಕಿ ಕೊಡಿಕೆ ಅಂತನೇ ನೇಮಕ ಆಗಿತ್ತ್.

ನಾಳೆ ಎಂತ ಆದೆನೋ ಅಂತ ಹೆದ್ರಿಕಂಡಿದ್ದರೆ ರಾಮಪ್ಪಯ್ಯ ಮಾತ್ರ ಧಿಮಾಕ್‌ಲಿ ಹೊತ್ತ್ ಕಳೀತಿತ್ತ್.

ತುಂಬಾ ಅಸಹನೀಯ ಆಗಿ ಕಂಡದ್ ಜನಕ್ಕೆ ಅಣ್ಣಿಗೌಡನ ಪ್ರಕರಣ. ಅದ್ ತೋಳ ಕುರಿಮರಿ ನ್ಯಾಯ.

ಆಸ್ತಿನ ಬುಟ್ಟು ಕೊಡು ಅಂತ ಹೇಳ್ತ್ ರಾಮಪ್ಪಯ್ಯ.

ಅಣ್ಣಿಗೌಡ ಜಪ್ಪಯ್ಯ ಒಪ್ಪಿತ್ಲೆ. ದಿಟ್ಟತನಂದ ಹೇಳ್ತ್

'ಭೂಮಿತಾಯಿ ನನ್ನ ಸಂತಾನಕ್ಕೆಲ್ಲ ಬೇಕಾಗುವಷ್ಟು ಕೊಟ್ಟುಟ್ಟು. ನಾನು ದುಡ್ಡ್ ಬೆವ್ರು ಸುರ್ಸಿ ಮಾಡ್ದ್ ನನ್ನದ್. ಅದ್ ನನ್ನ ಅನ್ನ. ಅದರ ಕಿತ್ತ್‌ಕಣಿಕೆ ನೀನ್ಯಾರ್? ರಾಮಪ್ಪಯ್ಯ ಬೊಬ್ಬೆ ಹೊಡ್ದ್ ಹೇಳ್ತ್.

ನಾನಾ? ನಾನ್ ಹತ್ತೂರ ದೊರೆ.

ಅಮರಪಡ್ನೂರ, ಕಡಬ, ಸುಳ್ಯಗಳಿಗೆಲ್ಲಾ ಯಾರ್‌ಂತ ಕೇಳಿ? ಬೇಗ ಹೆಬ್ಬೆಟ್ಟ್ ಹಾಕ್! ಇಂದ್‌ಂದ ನಿನ್ನ ಆಸ್ತಿ ನನ್ನದ್.

'ಹಾಕುದ್ಲೆ. ನ್ಯಾಯ ಈ ಊರ್‍ಲಿ ಸತ್ತೇ ಹೋಗಿಟಾ? ದೇವ್ರು ನಿಂಗೆ ಶಿಕ್ಷೆ ಕೊಟ್ಟದೆ. ನೋಡಿಕಾ! ದೇವ್ರು ನಿನ್ನಂಥ ಮೂರ್ಖನ ಸಹಾಯಕೆ ಬಾದ್ಲೆ, ಅಣ್ಣಿ! ಪ್ರಜ್ಞೆ ತಪ್ಪಿ ಅಣ್ಣಿಗೌಡ ಬಿದ್ದ್‌ಹೋತ್. ರಾಮಪ್ಪಯ್ಯ ತನ್ನ ಜನಗಳಿಗೆ ಆಜ್ಞೆ ಮಾಡ್ತ್.

'ಇವನ ತೋಪುನ ಆಚೆಗೆ ಬಿಸಾಡಿ! ಇವನ ಗದ್ದೆ ತೋಟನ ವಶ ಮಾಡಿಕಣಿ! ಸಂಸಾರನ ಮನೆ ಬುಟ್ಟು ಓಡ್ಸಿ!'

ಬಾಡಿಗೆ ಕೆಲ್ಸದವು ದೊರೆನ ಆಜ್ಞೆನ ಪಾಲಿಸಿದೊ. ನಿಧಾನಕೆ ಹುಷಾರಾದ ಅಣ್ಣಿಗೌಡ ತುಂಬಾ ದಿನ ಆದ ಮೇಲೆ ಎದ್ದ್ ಓಡಾಡಿಕೆ ಆತ್. ಸೇಡ್‌ನ ಕೆಂಡ ಅವನ ನಾಲಗೆ ಮೇಲೇನೆ ಇತ್ತ್. ಊರ್‌ನ ಮುಖಂಡರಿಗೆಲ್ಲ ಬಾಕೆ ಹೇಳ್ತ್. ಒಂದೋ ನ್ಯಾಯ ಕೊಡ್ಸಕು! ಇಲ್ಲರೆ ಅವನ ಕೊಲ್ಲಿಕೆ ಒಪ್ಪೊಕು!

..... 'ಹೊಗೆಯಾಡಿಕಂಡಿತ್ತ್ ಅಮರ ಸುಳ್ಯ ಪುಟ್ಟಬಸವ ತಲೆದೂಗಿತ್.

"ರಾಮಗೌಡರೆ ಇಂಥ ರಾಕ್ಷಸರೆಲ್ಲಸ ನಮ್ಮ ವೀರಕತ್ತಿಗೆ ಬಲಿ ಆಕು. ಅಣ್ಣಿಗೌಡ್ರಿಗೆ ಅಭಯ ಕೊಟ್ಟಳರಿ ತಾನೆ?

ರಾಮಗೌಡ ಹೇಳ್ತ್.

ಕೊಡದೆ ಉಟ್ಟ? ಅವನ ಮಾತು ಕೇಳ್ರೆ ದುರ್ಬಲ ತೋಳುಲಿಸ ಶಕ್ತಿ ಬಂದದೆ. ಒಳ್ಳೆ ಮೊನುಷ್ಯ ಹೆಂಗಾತ್ ಅಂತ!"

"ಅದ್ ಸ್ವಾಭಾವಿಕ. ಅಂಥವ್ರ ಕೈಲಿ ಖಡ್ಗಕ್ಕೆ ಆವೇಶ ಬಂದದೆ."

"ಒಮ್ಮೆ ಸ್ವಾತಂತ್ರ್ಯ ಬಾವುಟದ ಸುತ್ತ ಜನ ಸೇರಲಿ. ಆ ಮೇಲೆ ಅವರ ಹಿಡಿಯಕೆ ಯಾರಿಗೆಸ ಆಕಿಲೆ"

ಹಂಗೆ ಜನ ನೆರಿವ ನಾಳೆನ ಕಲ್ಪನೆ ಎಲ್ಲರ ಒಮ್ಮೆ ಭ್ರಮೆಯ ಲೋಕಕ್ಕೆ ಎಳ್ತ್.

ರಾಮಗೌಡ ಪುಟ್ಟಬಸವನನ್ನೇ ನೋಡ್ತಿತ್ತ್, ಹಿಂದೆಗೆ ಬಾಚಿದ ತಲೆಕೂದ್ಲು, ಅಗಲದ ಹಣೆ, ಸಣ್ಣಕ್ಕೆ ಮೀಸೆ, ಗಾಂಭೀರ್ಯದ ಗಲ್ಲ, ಮಂದ ನೆಗೆ, ಅಗಲ ಎದೆ...

ತೀರ್ಮಾನ ಆಗದೆ ಉಳ್ದ ಮುಖ್ಯ ವಿಷಯನ ಪ್ರಸ್ತಾಪಿಸಿ ನಂಜಯ್ಯ ಹೇಳ್ತ್.

"ದಿನ ಗೊತ್ತು ಮಾಡ್ದು ಒಳ್ಳೆದಲ್ಲ?"

ಅಷ್ಟೊತ್ತು ಮಾತಾಡದೆ ಕುದ್ದ ಮಾಚಯ್ಯ ಹೇಳ್ತ್.

"ಇನ್ನೊಂದು ವಾರಲಿ ಕೊಯ್ಲು ಸುರು ಆದೆಂತ ಸೋಮಯ್ಯನವು ಹೇಳ್ದೊ"

"ನಮ್ಮಲ್ಲಿ ಅಂತು ಕೊಯ್ಲುನ ಕ್ಯಾಮೆ ಮುಕ್ಕಂಡ್ ಬಾತ್"ಂತ ರಾಮಗೌಡ ಹೇಳ್ತ್.

"ಈ ತಿಂಗಳ್ಲೆ ಪೋಯಿ ಆಕಿಲೆನಾ ನಂಜಯ್ಯನವೇ?"

"ಆದು"

"ಹಾರುವಯ್ಯನವ್ಕೆ ಹೇಳಿ ಕಳ್ಸಮ ಅಲಾ? ದಿನ ನಿಘಂಟ್ ಮಾಡಲಿ."

"ಈ ವಿಷಯನ ಆಗಲೇ ಯೋಚಿಸಿದ ರಾಮಗೌಡ ಹೇಳ್ತ್."

"ನೀವುಗೆಲ್ಲಾ ಒಪ್ಪಿಗೆ ಆಗುವಂಗೆ ಇದ್ದರೆ ನಾನೊಂದು ಸೂಚನೆ ಕೊಟ್ನೆ"

ಅಗತ್ಯವಾಗಿ ಹೇಳಿ"ಂತ ಹೇಳ್ತ್ ಪುಟ್ಟಬಸವ.

ಕೊಡಗ್‌ಲಿ ತಯಾರಿ ನಡ್ಕಂಡ್ ಇರಲಿ. ಯುಗಾದಿ ದಿನ ಸುಳ್ಯಲಿ ಸ್ವಾತಂತ್ರ್ಯ ಪ್ರಚಾರ ಮಾಡಿ ಮತ್ತೆ ಮುಂದಕ್ಕೆ ಪೋಯಿ.

ಆ ಸೂಚನೆನ ಬಗ್ಗೆ ಎಲ್ಲವು ಯೋಚಿಸಿದೋ. ಪುಟ್ಟಬಸವನ ನೋಟ ತನ್ನನನ್ನೇ ನೋಡ್ದರ ನೋಡಿ ಚೆಟ್ಟಿ ಹೇಳ್ತ್.

"ಆದುಂತ ಕಂಡದೆ"

ನಂಜಯ್ಯನು ಒಪ್ಪಿ ತಲೆಯಾಡ್ಸಿತ್.

ಪುಟ್ಟ ಬಸವ ನಗಾಡಿಕಂಡ್ ಹೇಳ್ತ್.

"ಗೌಡ ಮುಂದೆನೆ ಎಲ್ಲ ನಿಘಂಟ್ ಮಾಡಿಕಂಡ್ ಬಂದ ಹಂಗೆ ಕಂಡದೆ" ರಾಮಗೌಡನ ಮೋರೆಲಿ ಹೆಮ್ಮೆಂದ ರಂಗ್‌ಬಾತ್. ಕಣ್ಣ್‌ಗ ಮಿಂಚಿದೋ. ಮುಂದೆ ಆಡಿಕಿದ್ದ ಮಾತಿಗೆ ಪೀಠಿಕೆ ಆಗಿತ್ತ್. ಆ ಹೊಗಳಿಕೆ. ಆದ್ರುಸ ಪ್ರಸ್ತಾಪನ ಹೆಂಗೆ ಮಾಡಕುಂತ ಗೌಡಂಗೆ ಗೊತ್ತಾತ್ಲೆ. ಆ ತೊಂದರೆನ ಅಲ್ಲಗಳೆವಂಗೆ ಪುಟ್ಟ ಬಸವನೇ ಹೇಳ್ತ್."

"ಈಗೇನೋ ನಾವುಗ ಸೈನ್ಯಗ ಇಲ್ಲದ ಸರದಾರರ್. ನಾಳೆ ಜನ ಎಲ್ಲಾ ಸೇರಿಕಾನ ಯಾರ್‍ಯಾರ್ ಎಲ್ಲಿಗೆ ಹೋಕುಂತ ನಿಶ್ಚಯ ಮಾಡಮ.

ಇದೇ ಸಂದರ್ಭಂತ ರಾಮಗೌಡ ಹೇಳ್ತ್.

"ಕೊಡಗ್‌ನ ಏರ್ಪಾಡ್‌ನ ಬೇರೆ ಸರದಾರರಿಗೆ ಬಿಟ್ಟ್ ನೀವು ನಾಕ್ ಜನ ಸುಳ್ಯಕೆ ಬಾಕೆ ಸಾಧ್ಯ ಆದೊ?

"ಯಾಕೆ ಸಾಧ್ಯ ಆಕಿಲೆ" ಎಂದ ನಂಜಯ್ಯ "ಅರಸನ ಕಡೆಯವೆ ಬಂದೊಳಂತ ಜನಕ್ಕೆ ಹೆಚ್ಚು ವಿಶ್ವಾಸ ಉಂಟಾದೆ" ಕನ್ನಡ ಜಿಲ್ಲೆನ ಗೆಲ್ಲುದು ಬಾಳ ಸುಲಭ. ಅದರ ಮುಗಿಸ್ಕಂಡ್ ನಾವ್ ಕೊಡಗ್‌ಗೆ ಬಂದ್ ಮಡಿಕೇರಿ ಕೋಟೆನ ಹಿಡಿಯಕ್. ಅಷ್ಟೊತ್ತಿಗೆ ಇಲ್ಲಿಸ ಸಾಕಷ್ಟ್ ಕೆಲ್ಸ ಆಗಿದ್ದದೆ.

ಪುಟ್ಟಬಸವ ಹೂಂಗುಟ್ಟಿ ಹೇಳ್ತ್.

"ಆದು"

ಈಜುವವ ನೀರಿಗೆ ಹಾರಿಕೆ ಮುಂದೆ ಮೈ ಕುಲುಕುವಂಗೆ ಕುಲುಕಿ ರಾಮಗೌಡ ಹೇಳ್ತ್.

"ನೀವು ರಾಜರ ನೆಂಟ್ರಂತ ಪ್ರಚಾರ ಮಾಡೊಕು.

ಪುಟ್ಟ ಬಸವ ಸರ್ತ ಕುದ್ದತ್.

"ನಿಮ್ಮ ಮಾತ್ ಅರ್ಥ ಆತ್ಲೆ!

ನೀವುಗು ಅರ್ಥ ಆತ್ಲೆನಾ.. ಬೇಡುವ ನೋಟಲಿ ರಾಮಗೌಡ ನಂಜಯ್ಯನೂ, ಕುಡಿಯ ಸೋದರರ್ರೂ ನೋಡ್ತ್. ಎಲ್ಲರ ಮೋರೆಲು ಪ್ರಶ್ನಾರ್ಥಕ ಚಿಹ್ನೆ ಕಂಡ್ ಗೌಡ ವಿವರಿಸಿತ್.

"ಇಂಗ್ಲೀಷರ ಮೇಲೆ ಯುದ್ದ ಹೂಡಿಕೆ ನೀವುಗೇನ್ ಅಧಿಕಾರಂತ ಯಾರಾದ್ರ್ ಕೇಳುವ. ನಮ್ಮ ನಾಯಕ ರಾಮನೆತನದವು. ರಾಜರ ಕಡೆಯವುಂತ ಹೇಳ್ರೆ ಸಂಶಯ ಇರ್ದುಲೆ"

"ಕ್ಷಮಿಸಿ ಗೌಡ್ರೆ! ನಾವೇನಿದ್ದರುಸ ವೀರರಾಜನ ಸೇವಕರ್. ಅವು ಕಾಶಿಲಿ ಒಳ. ಏನು ಮಾಡ್ರುಸ ಅಅವ್ರ ಹೆಸ್‌ರ್‌ಲಿ ಮಾಡ್ವೆ ಹೊರ್ತು"– ಪುಟ್ಟಬಸವನ ಧ್ವನಿ ಏರ್ತ್. ಗೌಡನೂ ಸ್ವರ ಏರ್ಸಿತ್.

"ಅಲ್ಲಂತ ಹೇಳ್ದವು ಯಾರ್? ನಾವೆಲ್ಲ ವೀರರಾಜನ ಪ್ರಜೆನೆ ಆದರೆ ಅವು ಬರುವರ್ಗೆ ಕುಂಪಣಿಯವರ ಬದ್ಲ್ ರಾಜ್ಯ ಆಳಿಕೆ ನಾವುಗೆ ಹಕ್ಕು ಎಲ್ಲಿಟ್ಟು? ನಿಮ್ಮಂದಾಗಿ ಆ ಹಕ್ಕು ಬಂದುಟುಂತ ಜನಕ್ಕೆ ಹೇಳ್ವೆ.

"ಹಕ್ಕು ಎಂತಕೆ? ರಾಮ ವನವಾಸಕ್ಕೆ ಹೋಕನ ಭರತ ಸಿಂಹಸಾನದ ಮೇಲೆ ಅಣ್ಣನ ಚಪ್ಪಲಿಸಿ ರಾಜ್ಯಭಾರ ಮಾಡ್ದು ಗೊತ್ತುಟಲಾ?

ಗೊತ್ತುಟು. ಆ ಭರತ ರಾಮನ ತಮ್ಮ ಆಗಿತ್ತ್. ಅದ್ ಮರಿಬೇಡಿ. ನಂಜಯ್ಯಂಗೆ ನೆಗೆ ಬಾತ್.

"ನೀವು ಗೆದ್ದರಿ ರಾಮಗೌಡರೇ ಅಂತ ಹೇಳ್ತ್. ಪುಟ್ಟಬಸವನು ನಗಾಡಿಕಂಡ್

ಕೇಳ್ತ್.

"ಇನ್ನ್ ನಾನ್ ರಾಜನ ಹಂಗೆ ಹೆಸರ್ ಬದಲಾಯಿಸಕೋ? ರಾಮೇಗೌಡನ ಪಾಲಿಗೆ ಅದ್ ಹಾಸ್ಯ ಆಗಿತ್ಲೆ.

"ತಪ್ಪೆಂತ"?

ಏನ್‌ಂತ ಹೇಳ್ದರಿ? ಸಾಧ್ಯ ಇಲ್ಲೆ. ಇದ್ ಮೋಸ!"

ರಾಮೇಗೌಡ ಮಡೆ ನುಂಗಿ ಸ್ವಲ್ಪ ಹೊತ್ತು ಮಾತಾಡದೆ ಕುದ್ದತ್. ಈ ರೀತಿನ ವಿರೋಧ ಬಾದುಂತ ಅವ ನಿರೀಕ್ಷಿಸಿತ್ಲೆ. ಮುಂದೆ ಮಾತಾಡ್ದುದ್ರ ಮನ್ಸಲೇ ನೆನ್ನಿ ಮೆಲ್ಲ ಮಾತ್ ಸುರ್‌ಮಾಡ್ತ್.

"ಇವ ಎಂಥವಪ್ಪ ಶಕುನಿಂತ ನೀವುಗೆ ಕಾಂಬೊದು. ನೀವಾಗಲೀ, ನಂಜಯ್ಯ ಆಗಲೀ ಇಲ್ಲಿರ್ವ ಯಾರಿಗಾಗಲಿ ರಾಜ್ಯಕಾರ್ಯ ಗೊತ್ಲೆ. ಅಗತ್ಯ ಬಾಕನ ಒಂದುಂದ್ದ ಜಾಸ್ತಿ ಹೆಸರ್ ಇಸಿಕಂಡ್ರೆ ಏನ್‌ತಪ್ಪು? ಯಾರ್‌ಂತ ಗೊತ್ತಾಗದೇ ಇಂಗ್ಲೀಷರು ಗಾಬರಿ ಆಕು. ಪ್ರಜೆಗಳ ದೃಷ್ಟಿಂದಸ ಇದು ಅಗತ್ಯನೇ. ಇದೆಲ್ಲ ಒಂದಿಬ್ಬರ್ ಸರದಾರರ ಆಟಂತ ಹೇಳ್ದಕ್ಕೆ ಯಾಕೆ ಅವಕಾಶ ಕೊಡಕು? ಯೊಚ್ಸಿ ನೋಡಿ

ಮತ್ತೆ ಮಾತಿಲ್ಲದೆ ಕಳ್ತ್ ಸಮಯ

ರಾಮಗೌಡನ ವಿಷಯಲಿ ಆಗಲೇ ಅದರ ಒಪ್ಪುವ ಭಾವನೆ ಬಂದ ನಂಜಯ್ಯ ನಗಡಿಕಂಡ್ ಪುಟ್ಟಬಸವನ ನೋಡಿಕಂಡ್ ಕೇಳ್ತ್.

"ಬೇರೆ ಏನ್ ಹೆಸರಿಲ್ಲೆನಾ ನೀವುಗೆ?

"ನೀವು ತಮಾಷೆ ಮಾಡ್ತಾ ಒಳರಿಯ ಹೆಂಗೆ? ಪುಟ್ಟ ಬಸವ ಸಿಟ್ಟ್ ಕೇಳ್ತ್"

"ಪುಣ್ಯಾತ್ಮ! ಕಾರ್ಯ ಆಕೊರೆ ಸದಾಶಿವ ಕತ್ತೆ ಕಾಲು ಹಿಡ್ತ್‌ಗಡ ಎಂಬುದರ ಕೇಳ್ತ್‌ಲೆನಾ? ಆ ಇಂಗ್ಲಿಷ್‌ನವು ವ್ಯಾಪಾರಕೆ ಬಂದವೆಂತ ಸುಳ್ಳು ಹೇಳಿಕಂಡ್ ಅಲಾ ಈ ದೇಶಕ್ಕೆ ಬಂದದ್? ನೀವು ಸುಮ್ಮನಿರಿ ಪುಟ್ಟ ಬಸಪ್ಪನವೇ. ರಾಮಗೌಡ್ರು ತಿಳುವಳಿಕೆಂದ ಒಳ್ಳೆ ಮಾತು ಹೇಳ್ಯೊಳ. ನೀವುಗೆ ನಾನೇ ಇನ್ನೊಂದು ಹೆಸ್ರ್ ಇಸಿನೆ.

ಚೆಟ್ಟಿ–ಕರ್ತು ಇಬ್ಬರಿಗೆಸ ನೆಗೆ ಬಾತ್. ಪುಟ್ಟಬಸವನ ಸಿಟ್ಟ್‌ಲ್ಲಿದ್ದ ಮೋರೆ ಸರ್‍ಯಾಗಿ ಮತ್ತೆ ನಗಾಡ್ದುದ್ರ ಮಾಚಯ್ಯ ಕಾದತ್ತ್. ರಾಮಗೌಡ ನಾ ಇನ್ನು ಗೆದ್ದಂಗೆ ಎಂಬ ಮುಖಭಾವಲಿತ್ತ್.

ಪುಟ್ಟಬಸವನ ಗಂಟ್ ಕಟ್ಟಿಕಂಡಿದ್ದ ತುಟಿಗ ಅರ್ಥಿತ್ತ್.

"ನಾ ಸೋತೆ. ಆದ್ರೆ ಯಾರುಸ ನನ್ನ ಮಾನ ಕಳಿಬೇಡಿ. ನಂಗೆ ನಮ್ಮವ್ವ

ಇಸಿದ ಇನ್ನೊಂದು ಹೆಸರ್ ಉಟ್ಟು. ಅದು ಸಾಕಾದೋ ನೋಡಿ."

ಯಾವುದುಂತ ಕೇಳ್ತ್ ನಂಜಯ್ಯ.

"ನಾ ಸಣ್ಣವ ಇರಿಕಾನ ಸ್ವಾಮಿಯವು ಇಲ್ಲಿಗೆ ಬಂದಿದ್ದೊ. ನನ್ನ ನೋಡಿ ಅವು ಕಲ್ಯಾಣಪ್ಪ ಬಾ ಇಲ್ಲಿ ಕುದ್ರು ಕೂಸು ಅಂತ ಹೇಳ್ಯೊಳ. ನನ್ನ ಹೆಸ್ರ್ ಪುಟ್ಟಬಸ್ವಾಂತ ಹೇಳ್ದೆ."

ಇರ್ಲಿ ಬುಡು. ಆ ಕಲ್ಯಾಣಸ್ವಾಮಿನ ಕೃಪೆ ಇರ್ದೊಂದ ನೀ ಹಿಂಗೆ ಬೆಳಿತಾ ಒಳ. ಅಂತ ಹೇಳ್ದೊ. ಆ ಮೇಲೆ ಅಜ್ಜಿ ಇರುವರ್ಗೆ ಕಲ್ಯಾಣಪ್ಪ ಅಂತನೇ ಕರಿತ್ತಿದ್ದೊ.

ರಾಮಗೌಡ ಒಮ್ಮೆಗೆ ಕುದ್ದಲ್ಲಿಂದ ಎದ್ದತ್. ಹೈದನ ಉತ್ಸಾಹ ನೋಡಿ ಪುಟ್ಟಬಸವನೆಡೆಗೆ ಹಾರ್ತ್. ಅವನ ಎರ್ಡ್ ಕೈಗಳ ಅಂಗೈನ ತನ್ನ ಮೋರೆಲೆಸಿ. ಎದೆ ಉದ್ವೇಗಲಿ ಏರಿ–ಇಳಿತ್ತಿತ್ತ್. ಕಣ್ಣ್‌ಲಿ ನೀರ್ ಇತ್ತ್. ದೊಂಡೆಂದ ಗೊಗ್ಗರಲಿ ಸ್ವರ ಬಾತ್.

'ಕಲ್ಯಾಣಸ್ವಾಮಿ! ಕಲ್ಯಾಣಸ್ವಾಮಿ!'

ಪೂರ್ವಾಲೋಚನೆ ಇಲ್ಲದೆನೆ ನಡ್ದ ಭಾವಪ್ರದರ್ಶನ

ರಾಮಗೌಡ ಮೋರೆ ಎತ್ತಿ ಪುಟ್ಟಬಸವನ ಹತ್ರ ನಿಂತ್ ಎಳೇ ಕೂಸುನಂಗೆ ಖುಷಿಲಿ ಹೇಳ್ತ್.

"ಕಲ್ಯಾಣಸ್ವಾಮಿ ನಮ್ಮ ನಾಯಕ! ಅರಸರ ಬದಲಾಗಿ ನಮ್ಮನ್ನೆಲ್ಲಾ ನಡ್ಸಿಕಂಡ್ ಹೋಗುವ ರಾಜ್ಯಪಾಲರ್!. ಆ ಹೊತ್ತ್‌ಲಿ ಎಲ್ಲರ ಹೃದಯಲಿ ಇದೇ ಮಾತ್ ಮತ್ತೆ ಮತ್ತೆ ಕೇಳ್ತಿತ್ತ್. ರಾಮಗೌಡ ಪುಟ್ಟಬಸವ ಅಂಗೈನ ಖುಷಿಲಿ ಹಿಡ್ದ್ ಕವಾಯತ್ ಬಯಲ್‌ನ ಬುಟ್ಟು ಹೋಗುವ ಹುಡುಗನಂಗೆ ಅಡ್ಡಾದಿಡ್ಡಿ ಓಡಿ ಮುಂದೆ ಕುದ್ದಲಿಗೆ ಬಾತ್.

ನಂಜಯ್ಯ ಹಂಞ ನಡ್ಗುವ ಸ್ವರಲಿ ಹೇಳ್ತ್.

"ಇಂಥ ದಿನ ಹಿಂಗೆ ಬಂದದೆಂತ ನಾ ಭಾವಿಸಿತ್ಲೆ. ಒಳ್ಳೆದಾತ್!" ಈ ಹೊಸ ಪರಿಸ್ಥಿತಿಗೆ ಕಾರಣ ಆದ ರಾಮಗೌಡನ ಕರ್ಡ್ ತಂದದ್ ನಾನುಂತ ಮಾಚಯ್ಯ ಎದೆ ಉಬ್ಬಿಸಿ ಕುದ್ದತ್.

ಒಂದು ಹಂತ ಮುಕ್ತ್ ಎಂಬಂಗೆ ಪುಟ್ಟಬಸವ ಉಸ್ರುಬುಟ್ಟತ್.

.... ಅಡಿಗೆ ಮನೆಲಿ ಸೊಸೆಗೆ ಕೆಲ್ಸಕೆ ಸಹಾಯ ಮಾಡ್ತಿದ್ದ ಗಂಗವ್ವ ಮೆಲ್ಲೆ ಹೊರಗೆ ಬಾತ್. ಮಂಜನು ಅವನ ಗೆಳೆಯರ್ ಅಲ್ಲಿಯೇ ಇದ್ದದ್ದರ ಕಂಡ್

ಅವ್ವ್ ಹೇಳ್ತ್.

"ಇನ್ನೊಂದು ಗಳಿಗೆಲಿ ಊಟ ತಯಾರಾದೆ. ನೀವೆಲ್ಲ ಮೀದು ಬಾದಿದ್ದರೆ ಹೋಗಿ ಬನ್ನಿ"

"ಹೂನಮ್ಮ" ಪುಟ್ಟ ಬಸವ ಹೇಳ್ತ್

ರಾಮಗೌಡನೆಂದ

"ಇಂದ್ ನಾನಿಲ್ಲೆ ಊಟ ಮಾಡ್ನೆ ತಾಯಿ"

ಅವ ಮಾಚಯ್ಯನೊಟ್ಟಿಗೆ ಬಂದವಂತ ಸ್ವರವೇ ಗುರ್ತ್‌ಸಿ ಗಂಗವ್ವ ಹೇಳ್ತ್.

"ಹೂ ಕಣಪ್ಪ, ನೀವುಗೆಸ ಅಡಿಗೆ ಮಾಡ್ಯೊಳ" ನಂಜಯ್ಯ ಪುಟ್ಟ ಬಸವಂಗೆ ಹೇಳ್ತ್.

"ಏಳಿ ಸ್ವಾಮಿಯವೇ. ಇನ್ನ್ ಯೋಚಿಸಿಕೆ ಎಂತ ಇಲ್ಲೆ. ಮೀಯಕೆ ಪೋಯಿ.

ಯಾರ್? ಯಾವ ಸ್ವಾಮಿಯವು?

ಗಂಗವ್ವಗೇನ್ ಗೊತ್ತಾತ್ಲೆ.

## ೬

ರಾತ್ರೆಗೆ ಅವೆಲ್ಲ ಸೋಮಯ್ಯನ ಮನೆಗೆ ಊಟಕ್ಕೆ ಹೋದೊ. ಅದ್ ಭಾಂದವರಿಗಾಗಿ ಮಾಡ್ದ ಗಮ್ಮತ್ತ್. ಪುಟ್ಟಬಸವನಂಗೆ ಸಸ್ಯಹಾರಿಗಸ ಅಲ್ಲಿದ್ದೊ. ಕುಡಿಯಕೆ ಬೇರೆ ಬೇರೆ ಹಣ್ಣುಗಳ ಭಟ್ಟಿ ಇಳ್ಸಿದ ಸರಾಯಿ ಇತ್ತ್.

ಪುಟ್ಟ ಬಸವ ಕುಡ್ತ್‌ಲೆ. ಕುಡಿವ ಅಭ್ಯಾಸನೇ ಇತ್ಲೆ ಅವಂಗೆ. ನಂಜಯ್ಯಂಗೆ ಮಾಂಸ ಗೈಪು ಇಷ್ಟ ಇತ್ಲೆಂತಾದರು ಕುಡಿವ ಅಭ್ಯಾಸ ಇತ್ತ್.

ಪುಟ್ಟ ಬಸವನ ಹತ್ರನೆ ಕುದ್ದಿತ್ತ್ ರಾಮಗೌಡ. ಬುಡ್ಡಿಗ ಒಂದೊಂದಾಗಿ ಖಾಲಿ ಆದರುಸ ಅವ ಎಚ್ಚರ ತಪ್ಪಿತ್ಲೆ. ನಾಲಗೆ ತಡವರ್ಸಿತ್ಲೆ. ಕಣ್ಣ್‌ಗ ಮಾತ್ರ ಮಾದಕ ಆಗಿತ್ತ್.

ಆಗಾಗ ಪುಟ್ಟಬಸವನ ನೋಡಿಕಂಡಿತ್ತ್. ಮತ್ತೆ ಕೇಳ್ತ್,

"ಸ್ವಾಮಿಯವ್ಕೆ ಇಂಥಾ ಅಭ್ಯಾಸ ಒಂದೂ ಇಲ್ಲೆ ಹಂಗಾರೆ"

ನಗಾಡಿಕಂಡ್ ಪುಟ್ಟಬಸವ ಹೇಳ್ತ್- "ಇಲ್ಲೆ ಗೌಡ್ರೆ".

ಇವರ ಮಾತ್‌ಕತೆ ನಂಜಯಗೆ ಕೇಳ್ತ್. ಅವನ ವಿಚಾರಗಳ ವೀಣೆಲಿ ಅಪಸ್ವರ ಹೊರ್ಡಿಕೆ ಸುರು ಆಗಿತ್ತ್. ನಾಲಿಗೆ ಪದಗಳ ಜಗ್ಗಿಕೆ ಸುರು ಮಾಡ್ತ್. ಅವ ಹೆಳ್ತ್.

"ಅವರನ್ನೆಂತ ಕೇಳ್ರೆ? ಅವಿನ್ನೂ ಕೂಸು. ಕೇಳಿನೋಡಿ ಹೌದೋ ಅಲ್ಲನಾಂತ. ಹಂಗೇಳ್ರೆ? ನಂಗೆ ಅರ್ಥ ಆತ್ಲೆಂತ ಕರಿಯಪ್ಪ ಕೇಳ್ತ್. ಉತ್ತರ ಕೊಡಿಕೆ ಮುಂದೆನೆ ನಂಜಯ್ಯ ಖೊ ಖೋ ಖೊಂತ ನಗಾಡ್ತ್.

"ಅಲ್ಲ ಕರಿಯಪ್ಪ ನಿಂಗೆ ಆದರ್ ಹೆಂಗೆ ಗೊತ್ತುಟು? ನೀನು ಕೂಸು!"

"ಸ್ವಾಮಿಯವ್ಕೆ ಮದ್ವೆಯಾದ್ರ್ ಆಗಿಟುಂತ ಸೋಮಯ್ಯ ಹೇಳ್ತ್."

"ಅದೇನಿದ್ರುಸ ಮಕ್ಕಳಾಗುವರ್ಗೆ ಕೂಸುನೆ!"

ಆ ಮಾತ್ ಕೇಳಿ ಅಲ್ಲಿದ್ದವೆಲ್ಲಾ ನಗಾಡ್ದೊ.

ಆ ನೆಗೆಲಿ ಪುಟ್ಟ ಬಸವನು ಸೇರಿಕಂಡ್ ಹೇಳ್ತ್.

"ಎಲ್ಲದಕ್ಕು ಕಾಲ ಕೂಡಿ ಬರೊಕು."

"ಹ್ಹೊ ಹ್ಹೊ ಹ್ಹೊ ನಗಾಡ್ತ್ ನಂಜಯ್ಯ"! ಇಂಗ್ಲೀಷ್‌ರವರ್ನ ಸಮುದ್ರಕ್ಕೆ ಬಿಸಾಡ್ದ ಮೇಲೆ ಪುಟ್ಟಬಸಪ್ಪ ದೊಡ್ಡಬಸಪ್ಪ ಆದವೆ  ಹ್ಹ ಹ್ಹ ಹ್ಹ!"

ರಾಮಗೌಡ ಹೇಳ್ತ್ : ಆ ಮೇಲೆ ಸ್ವಾಮಿಯವ್ ನಮ್ಮೊಟ್ಟಿಗೆ ಕುಡ್ದವೆ. ಹೊರಗೆ ಅಂಗಳಲಲಿ ಅಗ್ಗಿಷ್ಟಿಕೆನ ಕೆಂಡದ ಮೇಲೆ ಕೈ ಒಣಗಿಸಿಕಂಡಿದ್ದ ಒಬ್ಬ ಹೇಳ್ತ್.

"ಯಾರಾದ್ರು ಹಾಡಿಯಪ್ಪ"

ತಪೋ ಮಗ್ನ ಶಿವನಂಗೆ ಕುದ್ದ ಚೆಟ್ಟಿನ ಕುರ್ತ್ ಪುಟ್ಟ ಬಸವ ಹೇಳ್ತ್.

"ಹಾಡಾಬಾರ್ದಾ"

ಕಪ್ಪು ಕಲ್ಲ್‌ಂದ ಕೆತ್ತಿದ್ದ ವಿಗ್ರಹವಾಗಿತ್ತ್ ಚೆಟ್ಟಿ. ಕಣ್ಣೆವೆಗಳ ಆಗಾಗ ಮುಚ್ಚಿ ತೆಗ್ದ್, ಕೆಂಪು ಕಣ್ಣ್‌ಗಳ ತೋರಿಸ್ತಿತ್ತ್. ನನ್ನತ್ರನೇ ಪುಟ್ಟಬಸವ ಹಾಡಿಕೆ ಹೇಳ್ದರ ಕೇಳಿ ಚೆಟ್ಟಿಗೆ ಖುಷಿ ಆತ್. "ಎಲ್ಲೈತೆ ದುಡಿ"?

ಸೋಮಯ್ಯ ಮಕ್ಕಳ ಕರ್ದ್ ಹೇಳ್ತ್.

"ದುಡಿ ತಕಂಡ್ ಬನ್ನಿ"

ಅಗ್ಗಿಷ್ಟಿಕೆನ ಉರಿನ ಜಾಸ್ತಿ ಮಾಡ್ದೊ. ಆ ಕರ್ಕುಟ್ಟಿ ಕತ್ತಲೆಲಿಸ ಕರಿ, ಬಿಳಿ, ಗೋಧಿ ಬಣ್ಣದ ಮೈಗೆಲ್ಲ ಬೆಂಕಿಲಿ ಹೊಳಿತ್ತಿತ್ತ್. ಚೆಟ್ಟಿಗೆ ಬೇಕಾದಷ್ಟ್ ಜಾಗ ಬುಟ್ಟು ಜನ ಸುತ್ತ ನಿಂತೊ. ನಿದ್ದೆನು ಮಾಡದೆ ಮಕ್ಕಸ ಬಂದೊ. ತಮ್ಮ ಊಟನ್ನೆಲ್ಲ ಮುಗ್ಸಿ ಸುತ್ತಮುತ್ತದ ಹೆಂಗಸರ್ ಇದ್ದೊ. ಅವೆಲ್ಲ ಮನೆ ಬಾಗ್ಲ್‌ನ ಮೆಟ್ಲ್‌ಲಿ ಕುದ್ದ್‌ಕಂಡೋ.

ಎತ್ತರ ದೇಹದ ಚೆಟ್ಟಿ ಎದ್ದ್‌ನಿಂತತ್. ದುಡಿನ ತೂಗುವ ದಾರನ ಅವ

ಕುತ್ತಿಗೆಗೆ ಹಾಕಿಕಣ್ತ್.

'ಡಮ್‌ಕಿ ಡಿಕಿ' ದುಡಿನ ಸದ್ದ್ ಮಾಡಿ ಚೆಟ್ಟಿ ಕೇಳ್ತ್.

"ಯಾವ ಹಾಡ್ ಹೇಳೊಕು?"

ಕರಿಯಪ್ಪನೆಂದ

"ಯಾವುದುಸ ಆದು ಹಾಡಿ"

"ಬೆಳಕ್‌ನ ಹಬ್ಬದ ಪದ ಹೇಳಕಾ?

"ನಂಜಯ್ಯ ನಗಾಡಿಕಂಡ್ ಈ ಕತ್ಲೆಲಿ ಬೆಳಕಿನ ಹಬ್ಬದ ಹಾಡು ಅದು"

ಚೆಟ್ಟಿನ ಭುಜ ಅಲ್ಗಿತ್. ಮೈ ಮಿಸುಕಾಡ್ತ್. ಕಾಮನ ಬಿಲ್ಲಿನಂಗೆ ಬಾಗಿ ದುಡಿನ ಮೇಲೆ ಕೆಳಗೆ ತಂದ್ ಹೊಡಿತ್ತಿತ್ತ್. ತೆಗ್ದ್ ಬಾಯಿಲಿ ಆಲಾಪನೆ ಹೊರ್ಟ್ ಆವರಣ ದಾಟಿ, ಹೊಲಗಳೆಲ್ಲ ದಾಟಿ ಕಾಡ್‌ನತ್ತ ಹರ್ತ್.

ಚೆಟ್ಟಿ ಹೇಳ್ತ್ : "ಹಿಗ್ಗಿ ಬೋಗಿ ಬೋಗಿ ಬೊ। ಹೋ। ಎಯ್ಯೋ।

ಹುರ್ ತೂಮ। ಬೋಗಿ ಬೋ। ಹೋ ಏಹಿ। ಏಹಿ। ಯೋ।

ಮತ್ತೆ ಮತ್ತೆ ಆ ಸಾಲ್. ಅಗ್ಗಿಷ್ಟಿಕೆಗೆ ಯಾರೋ ದರ್ಗ್ ಹಾಕಿದೋ. ಬೆಂಕಿ ಹೊತ್ತಿಕಂಡ್ ಉರ್ತ್. ಕೀರಲು ಧ್ವನಿಲಿ ಹೈದಂಗ ಕೂಗಾಡ್ತಿದ್ದೋ.

ಚೆಟ್ಟಿ ಸ್ವರ ಏರ್ಸಿ ಹಾಡ್ತ್. ಆವೇಶಲಿ ಹಾಡ್ತ್. ಪಾದಗಳ ತಾಳಕ್ಕೆ ತಕ್ಕಂಗೆ ಹಾಕ್ತಿತ್ತ್. ಪ್ರತಿ ಸಾರಿ ಮೈ ಬಾಗಿ ಬಗ್ಗಿಕಂಡ್. ದುಡಿನು ಮೇಲೆ ಕೆಳಗೆ ಹೋಕನ ಬಲೆ ಹಾಕುವ ಬೆಸ್ತನಂಗೆ ಆಗ್ತಿತ್ತ್ ಈ ಕುಡಿಯ. ಇದ್ ಖುಷಿನ ಬಲೆಗೆ ಜನರ ಎಳೆವ ಬಲೆ.

"ಹಿಗ್ಗಿ ಬೋಗಿ। ಬೋಗಿ। ಬೋ। ಹೊ। ಏಹಿ। ಯೊ।

ತುಮ್ಮ ದೇವಿ। ದೇವಿತಾ। ಏಹಿ। ಯೊ। ಎಯ್ಯೊ।

ಶಂಭೊ। ಶಿವ। ಮಾದೇವೋ। ಎಯ್ಯೊ। ಏಹಿ। ಯೊ

ಒಂದರ ಮೇಲೆ ಇನ್ನೊಂದು. ಒಬ್ಬರಾದ ಮೇಲೆ ಇನ್ನೊಬ್ಬರ್ ಅದ್ ಮುಗಿಯಕೆ ಮುಂದೆ ಕತ್ತಲೆ ಕಳ್ದ್ ಬೆಳಕ್ ಬಂದರು ಬಾತ್.

ಇದರ ಲಾಯ್ಕ ತಿಳ್ದ ಪುಟ್ಟಬಸವ ಮನೆಗೆ ಹೊರ್ಡುವ ಯೋಚನೆ ಮಾಡ್ತ್. ನಾಲಿಗೆ ಆಗಲೇ ಜಾರ್ತಿದ್ದ ರಾಮಗೌಡ ಹೇಳ್ತ್.

"ಕೊಡಗರೆಲ್ಲಾ ಒಳ್ಳೆಯವು, ನಿಮ್ಮಲ್ಲಿ ಬೇಧಭಾವನೆ ಇಲ್ಲೆ. ದುಡಿ ತೆಗ್ದ್ ಹಾಡ್ರೆ. ನಮ್ಮಲ್ಲಿ ಹಂಗಿಲ್ಲೆ" ದುಡಿ ಹಿಡ್ದ್ ಹಾಡ್‌ವ ಜನನೇ ಬೇರೆ. ಆದರೆ ಈಗ ಯಕ್ಷಗಾನಂತ ಒಂದು ಸುರು ಆಗಿಟು. ಆಹಾ ಏನ್ ಹೇಳ್ರೆ! ಅದ್ ಭಾರಿ

ತಮಾಷೆಯಾಗಿದ್ದೆ.

ಪುಟ್ಟಬಸವ ಮೆಲ್ಲ ಎದ್ದ್ ನಿಂತತ್. ರಾಮಗೌಡನು ಎದ್ದತ್. ಕಷ್ಟಲಿ ಎದ್ದತ್.

"ಸ್ವಾಮಿಯವ್ ಯಾಕೆ ಎದ್ದದ್?"

"ಮನೆ ಕಡೆ ಹೋನೆ"

"ಒಬ್ಬರೆನಾ ಛೆ! ಆಕಿಲೆಲ ನಾನು ಬನ್ನೆ ಪೋಯಿ

"ಛೆ। ಛೆ। ಅದಾಕಿಲ್ಲೆ.

ರಾಮಗೌಡ ಒಟ್ಟಿಗೆ ಹೊರ್ಡಿಕೆ ನೋಡ್ತ್. ಆದರೆ ಕಾಲ್‌ಗ ಸ್ಥಿರ ಇತ್ಲೆ. ಶರೀರ ತೂರಾಡ್ತಿತ್ತ್. ಅದರ ಪುಟ್ಟಬಸವ ನೋಡ್ತ್.

ಆ ಇರ್‍ಳ್ ಜಾಸ್ತಿ ಕುಡಿಯದೇ ಇದ್ದ ಸೋಮಯ್ಯ ಅವರತ್ರ ಬಾತ್. "ಹೋದರೆನಾ? ನಿಲ್ಲಿ ನಮ್ಮ ಹೈದಂಗಳ ಕಳ್ಸಿನೆ.

ನೀವು ನಮ್ಮ ನೆಂಟ್ರ್ ಗೌಡ್ರೆ. ನೀವುಗೆ ಕೆಲ್ಸ ಕೊಡ್ದಾ?

'ಯಾರಾದ್ರ್ ಒಟ್ಟಿಗೆ ಹೋದರೆ ಆತ್"

'ನೀವು ಕುದ್ರಿ ಗೌಡ್ರೇ" ಎಂದ ಪುಟ್ಟಬಸವ.

"ಹಂಗೇನಿಲ್ಲೆ. ನಂಗೇನ್ ಆತ್ಲೆ ಅಂತ ರಾಮಗೌಡ ಹೇಳ್ರುಸ ನಿಂತಲ್ಲಿಯೆ ಕುಸ್ತ್ ಕುದ್ದ್ ಹೋತ್.

"ಎಲ್ಲಿಯೋ ಒಂದು ತೊಟ್ಟು ಹೆಚ್ಚಾಗಿರಕು. ಸ್ವಾಮಿಯವು ಕ್ಷಮಿಸಿಬುಡಿ ಅಂತ ಹೇಳಿ ಪುಟ್ಟಬಸವನ ನೋಡಿ ನಗಾಡ್ತ್.

ಕರ್ತು ಕುಡಿಯ ಒಣಸೋಗೆನ 'ಸೂಟೆ' ಹೊತ್ತಿಸಿ ಕಾಣ್ಸಿದೋ.

"ನೀನ್ ಬಂದಿಯ ಕರ್ತು?" ಕೇಳ್ತ್ ಪುಟ್ಟಬಸವ 'ಹೂಂ' ಅಣ್ಣ ನಡಿನಿ.

"ಬೊಳ್ಪಿಗೆ ಹತ್ತ್ ಗಂಟೆಗೆ ಎಲ್ಲವು ನಮ್ಮಲ್ಲಿಗೆ ಬಂದುಬುಡಿ" ಆಗಲಿಂತ ಹೇಳ್ತ್ ಸೋಮಯ್ಯ.

...ಕರ್ತು ಬೆಂಕಿನ ಬೀಸಿಕಂಡ್ ಮುಂದೆ ಹೋತ್. ಪುಟ್ಟಬಸವ ಹಿಂದೆಂದ ಹೋತ್.

ದೊಡ್ಡ ದಾರಿನ ನಡ್ಕಂಡ್, ಮೌನ ಮುರ್ದ್ ಆಗೊಮ್ಮೆ, ಈಗೊಮ್ಮೆ ಮಾತಾಡ್ತಿದ್ದೊ. ಗಮ್ಮತ್ತ್ ಏರ್ಪಾಟ್ ಮಾಡ್ದಕ್ಕೆ ಹೊಗಳಿ, ಚೆಟ್ಟಿನ ಹಾಡ್‌ನ ಬಗ್ಗೆ, ಇನ್ನ್ ಸ್ವಲ್ಪ ಸಮಯಲಿ ದೊಡ್ಡ ರೂಪಲಿ ಯೋಜನೆ ಆದ ಅವರ ಕೆಲಸ ಹಿಂಗೆ ಬೇರೆ ಬೇರೆ ವಿಷಯಗ. ಉಳ್ದವರೆದ್ರು, ಅಣ್ಣನೆದ್ರು ಯಾಗೊಳು ಸುಮ್ಮನಿರ್ತಿದ್ದ

ಕರ್ತು ಈಗ ನಾಚಿಕೆ ಬಿಟ್ಟ್ ಮಾತಾಡ್ತ್‌ತಿತ್ತ್. ಆದರುಸ ಅವಂದು ತೂಕದ ಮಾತು. ಎಷ್ಟು ಬೇಕೋ ಅಷ್ಟು.

ಪುಟ್ಟ ಬಸವಂಗೆ ಆದರೆ ಈ ಮಾತ್‌ಕತೆ ಬೇಕಾಗಿತ್ತ್. ಅವನ ಪಾಲಿಗೆ ಕಳ್ದ ಈ ಒಂದು ದಿನ ಮಹತ್ವದಾಗಿತ್ತ್. ತನ್ನ ಕೂಟುಗಳೊಟ್ಟಿಗೆ ಮುಖ್ಯ ನಿರ್ಧಾರಗಳ ಮಾಡಿಕಂಡಿತ್ತ್. ಕಾರ್ಯಕ್ಕಿಳಿಯಕ್ಕಾನ ರಾಜ್ಯದ ಭವಿಷ್ಯನೇ ಬದಲ್ ಮಾಡುವಂತ ತೀರ್ಮಾನಗ. ಸಣ್ಣ ಪುಟ್ಟ ಯುದ್ಧ ಅಲ್ಲ. ನಮ್ಮ ಸ್ವಾತಂತ್ರ್ಯನೇ ಕದ್ದ್‌ಕಂಡ ಪರಕೀಯ ಧೂರ್ತರೊಟ್ಟಿಗೆ ಹೋರಾಟ. ಈ ಸುದ್ದಿ ಕೇಳಿಕಾನ ವೀರರಾಜಂಗೆಷ್ಟು ಸಮಾಧಾನ ಆಕಿಲೆ? ಕನ್ನಡ ಜಿಲ್ಲೆಯ ಜನರೊಟ್ಟಿಗೆ ಕೊಡಗ್‌ನವರ ಗೆಳೆತನ. ಇದೂ ಮುಖ್ಯ ಘಟನೆಯೇ. ಘಟ್ಟದ ಮೇಲೆನವು, ಬಯಲ್ ಸೀಮೆಯವು. ಕರಾವಳಿ ಪ್ರದೇಶದವು ಹಿಂಗೆ ಎಲ್ಲವುಸ ಒಟ್ಟಿಗೆ ಕೂಡ್ರೆ ಸ್ವಾತಂತ್ರ್ಯ ರಕ್ಷಣೆ ಸಾದ್ಯ.

ಈ ತೀರ್ಮಾನಂದ ಎಲ್ಲವುಕೆ ಖುಷಿ ಆಗಿತ್ತ್. ಹಂಗೆನೆ ಗಮ್ಮತ್ತ್ ಮಾಡ್ದ್ ಕೂಡ ಸಮಯೋಚಿತವಾಗಿತ್ತ್.

ಎಲ್ಲವರಂಗೆ ನಂಗುಸ ಖುಷಿ ಆಗದೆ ಇತ್ಲೆ. ಆದರೆ ಜಾಸ್ತಿ ತೂಕ ನನ್ನ ಭುಜದ ಮೇಲೆನೆ ಉಟ್ಟುಂತ ಹೆದ್ರಿಕೆ. ನಾಯಕ ಆಕೆ ಒಪ್ಪಿಕೆ ಕೊಟ್ಟಾಗಿಟು. ನಂಜಯ್ಯ ವಯಸ್ಸ್‌ಲಿ ದೊಡ್ಡವ ಆದ್ರುಸ ನನ್ನನ್ನೇ ಮುಖ್ಯಸ್ಥ ಮಾಡಿಕೆ ಒಪ್ಪಿತ್. ಇನ್ನ್ ನಾನ್ ಪುಟ್ಟಬಸವ ಅಲ್ಲ. ಕಲ್ಯಾಣಸ್ವಾಮಿ. ಈ ಬದಲಾವಣೆ ಅಗತ್ಯ ಉಟ್ಟೋ ಇಲ್ಲೆನಾ. ಆದರುಸ ರಾಮಗೌಡ ಎಷ್ಟ್ ದಕ್ಷತೆಲಿ ವಾದ ಮಾಡಿ ಎಲ್ಲರ ಬಾಯಿ ಕಟ್ಟಿಸಿತ್! ಅವ ವೀರ ಸರಿ. ಅಂಥವರಿಂದಲೇ ಜಾಸ್ತಿ ಒಳಿತಾದೆ.

ನಡ್ಕಂಡ್ ಹೋಕಂಡ್ ಇರಿಕಾನಲೇ ಈ ವಿಷಯವನ್ನೆಲ್ಲಾ ಮತ್ತೆ ಮತ್ತೆ ಯೋಚಿಸಿತ್ ಪುಟ್ಟಬಸವ; ಕರ್ತುನೊಟ್ಟಿಗೆ ಮಾತಾಡ್ತ್. ಆ ಯೋಚನೆಂದ, ಮಾತ್‌ಕತೆಂದ ಪ್ರತಿಯೊಂದು ನಾಳೆನ ಕೆಲಸ ಸ್ಪಷ್ಟ ಆತ್.

.... ಮನೆ ಬಾತ್. ಕುದುರೆಗ ನಾವು ಎಚ್ಚರ ಒಳಂತ ತೋರ್ಸಿಕೆ ಕೆನೆದಾಡಿದೋ. ತಮ್ಮ ಒಡೆಯರ ಗುರ್ತ ಹಿಡ್ದ್ ಪುಟ್ಟಬಸವನ ಕಂಡು ಕುದುರೆ ಮತ್ತೆ ಕರ್ತುಕುಡಿಯನ ಕುದರೆನು ಜೇಂಕರಿಸಿತ್.

ನೊಡುಮನೆಲಿ ಸಣ್ಣಂಗೆ ಹೊತ್ತಿದ್ದ ದೀಪ ಬಾಗಿಲ್‌ಸೆರೆಲಿ ಕಾಣ್ತಿತ್ತ್. ತಾಯಿಗೆ ಎಚ್ಚರ ಆಗದಂಗೆ ಮೆಲ್ಲ ಗಿರಜಾಂತ ಕರ್ತ್.

## ೧೦

ಇರ್ಲ್ಲ್ ಬಾಳ ಹೊತ್ತುನ ಮುಟ್ಟ ಎಚ್ಚರಲೇ ಇದ್ದ ಗಿರಿಜವ್ವಂಗೆ ಮಂಪ್ರು ಬಂದಿತಷ್ಟೆ ಆಗ. ಆದ್ರುಸ ಗಂಡ ಕರ್ದದ್ ಕೇಳ್ತ್. ದಡಬಡ್ಸಿ ಎದ್ದ್ ಹೋಗಿ ಬಾಗ್ಲ್ತೆಗ್ತ್.

"ಎಷ್ಟೊತ್ತಾತ್ ಬಂದ್? ಕರ್ದದ್ ಕೇಳ್ತ್‌ಲೆ ನಂಗೆ ಅಮ್ಮಂಗೆ ಎಚ್ಚರಾಗದಂಗೆ ಮೆಲ್ಲ ಮಾತಾಡ್ತ್ ಪುಟ್ಟ ಬಸವ

"ಈಗ ಬಂದದಷ್ಟೆ" ಒಮ್ಮೆನೆ ಕರ್ದದ್. ಅಷ್ಟೊತ್ತಿಗೆ ಎದ್ದೊಳ ನೀನ್"

"ಊಟ ಆತಾ?"

"ಹೂಂ ಭಾರಿ ಗಮ್ಮತ್ತ್"

"ನಾನ್ ಎಚ್ಚರನೇ ಇದ್ದೆ. ಹೆಂಗೋ ನಿದ್ದೆ ಬಂದಂಗೆ ಆತ್."

ಇರ್ಲಿ ಬುಡು. ಅವ್ವ ಮಲ್ಗಿತಾ?

ಪುಟ್ಟಬಸವ ತಾಯಿ ಮಲ್ಗುವ ಜಾಗ ನೋಡ್ತ್. ಅಲ್ಲಿ ಅವ್ವು ಇತ್ಲೆ. ಮಂಜ ಬಂದೇ ಬಂದದೆಂತ ಅಡಿಗೆ ಮನೆಲಿ ಮಲ್ಗಿತ್.

'ಹೂಂ' ಎಲ್ಲವುಸ ಬಂದೊಳನಾ?

"ಇಲ್ಲೆ, ಕರ್ತು ಒಬ್ಬನೇ ಬಂದದ್. ಚಾಪೆ ಹಾಕ್ಯೊಳ?"

'ಹೂಂ'

"ಕೊಡ್ಪಾನಲಿ ನೀರ್?"

"ಇಸ್ಯೊಳೆ"

ಕುದುರೆ ಹತ್ರ ಹೋಗಿ ಬಂದ್ ಕರ್ತು ಚಾಪೆ ಮೇಲೆ ಮಲ್ಗಿಕೆ ಹೊರ್ಟತ್. ಅವು ಮಾತ್‌ಕತೆ ಹಂಜ ಕೇಳಿಕೇಳ್ತ್.

"ನಾ ಮಲ್ಗಿನೆ ಅಣ್ಣ."

"ಆದು ಕರ್ತು" ಪುಟ್ಟಬಸವ ಹೇಳ್ತ್.

ಇವನು ಕೈ ಕಾಲ್ ತೊಳ್ದ್ ಬಟ್ಟೆ ಬದಲಾಯಿಸಿ ತೇಗ್ ಬರ್ತಿತ್ತ್‌ಂತ ನೀರ್ ಕುಡ್ದ್ ಬಂದ್ ಮಲ್ಗಿತ್.

"ದೀಪ ಕೆಡ್ಸಕಾ?" ಗಿರಿಜವ್ವ ಕೇಳ್ತ್.

"ಹೂಂ"

ಗಿರಿಜಾ 'ಫೂ' ಅಂತ ಕೆಡ್ಸಿತ್. ಆ ಕತ್ತಲೆಲಿ ಪುಟ್ಟಬಸವ ಮೈಮುರ್ದು 'ಶಿವಾ ಅಂತ ಹೇಳಿ ತಲೆದಿಂಬು ತಲೆ ಇಸಿತ್. ಅವನತ್ರನ ಮಲ್ಗಿದ ಗಿರಿಜ

ಎದೆ ಮೈ ಕೈ ಇಸಿ ತುಂಬಾ ಬೊಚ್ಚಿಟಾ ಅಂತ ಕೇಳ್ತ್.

"ಬೊಚ್ಚುದಾ?" ಏನ್ ಕಡ್ದೊಳೆಂತ? "ಸೋಮಯ್ಯನ ಮನೆವರೆಗೆ ಒಮ್ಮೆ ಹೋಗಿ ಬಂದರೆ ಸುಸ್ತಾದೆನಾ?"

"ಸಾವಿರ ಹರದಾರಿ ಸವಾರಿ ಮಾಡ್ರುಸ ನನ್ನ ರಾಜಂಗೆ ಸುಸ್ತಾದ್ಲೆ ಅಲಾ?"

ರಾಜರು ಪುಟ್ಟಬಸವಂಗೆ ನೆಗೆ ಬಾತ್. ಹೆಣ್ಣ್‌ಗೆ ಹೇಳಕು ಈಗ. ಜನ ನನ್ನ ಮೇಲೆ ಇಸಿದ ವಿಶ್ವಾಸ, ಕೈಗೊಂಡ ತೀರ್ಪು, ಹೊರ್ದುವ ಪ್ರಮೇಯ...

ಹೆಂಗೆ ಸುರು ಮಾಡ್ದುಂತ ಯೋಚಿಸಿಕಂಡ್ ಇದ್ದಂಗೆ ಒಳಗೆಂದ ಗಂಗವ್ವನ ಸ್ವರ ಕೇಳ್ತ್.

ಬಂದನಾ ಪುಟ್ಟ ಬಸ್ಯಾ? ಬಂದ ಮಂಜ?

ನಿದ್ದೆಲಿದ್ದ ಸ್ವರ

"ಹೂನವ್ವಾ ನೀನ್ ಮಲ್ಕ"

"ಹೂಂ"

ಸ್ವಲ್ಪ ಹೊತ್ತಾದ ಮೇಲೆ ಗಿರಿಜಾ ಹೇಳ್ತ್.

ಇತ್ತೀಚೆಗೆ ಅತ್ತೆಯವ್ಕೆ ನಿಮ್ಮ ನೆಂಪು ಜಾಸ್ತಿಯಾಗಿಟು.

"ನಿಂಗೆ ನನ್ನ ನೆನಪಾದ್ಲೆನಾ?"

ತುಂಟತನದ ಪ್ರಶ್ನೆ. ಗಿರಿಜಂಗೆ ಮೈ ಜುಮ್ ಅಂತ ಹೇಳ್ತ್. ಅವ್ಳ ಹಗುರ ಆದ ತಲೆಕೂದ್ಲೆಡೆಗೆ ಪುಟ್ಟ ಬಸವ ಕೈ ಆಡ್ಸಿತ್. ಮೆಲ್ಲ ಅವ ಕೇಳ್ತ್.

ನಿಂಗೆ ಏನ್ ಕೊಡಕು ಗಿರಿಜಾ?

"ನೀವು ನನ್ನ ಬುಟ್ಟು ಹೋಗದೆ ಇದ್ದರೆ ಸಾಕ್. ನಂಗೆ ಬೇರೆನ್ ಬೇಡ. ತಂಗಾಳಿ ಮೈ ಕೊರ್ದ ಹಂಗಾತ್ ಪುಟ್ಟಬಸವಂಗೆ. ಆ ಆಶ್ವಾಸನೆನ ಕೊಡ್ದು ಅವಂಗೆ ಸಾಧ್ಯ ಇತ್ಲೆ. ತಾನು ತಿಳ್ಸುವ ವಿಷ್ಯಕ್ಕೆ ಎಂಥ ಹಿನ್ನೆಲೆ ಮಾತ್ ಆಗಿತ್ತ್ ಹೆಂಡತಿ ಹೇಳ್ದ್!."

ಯಾಕೆ ಸುಮ್ಮನೊಳರಿ?

ಬಾಯಿ ಬುಟ್ಟು, ಮನ್ಸ್ ಬಿಚ್ಚಿ, ಮಾತಾನಾಡಿಕೆ ಇದ್ ಕೆಟ್ಟ ಸಮಯ ಅಥವ ಇದುವೆ ಸರ್ಯಾದ ಸಮಯವ ಏನೋ.

"ಇನ್ನು ಒಮ್ಮೆ ಹೋಗಿ ಬನ್ನೆ. ಆಮೇಲೆ ಎಲ್ಲಿಗೆಸ ಹೋದ್ಲೆ" ತಾನ್ ಕೇಳ್ದು ಚಂದಮಾಮನಾಂತ ಗಿರಿಜೆಗೆ ಗೊತ್ತಿಲ್ಲೆಂತಾನ? ಆದರ್...

ಹೋದರೆನಾ? ಎಲ್ಲಿಗೆ? ಯಾಕೆ?

ತಿಳಿ ಹೇಳುವಂಗೆ ವಿಶ್ವಾಸದ ದನಿಲಿ ಪುಟ್ಟಬಸವ ಹೇಳ್ತ್.

"ನಿಂಗೆ ಗೊತ್ತೆನಾ ಗಿರಿಜಾ? ಎಂಥಾ ದುರವಸ್ಥೆ ಬಂದುಟು. ನಮ್ಮ ರಾಜ್ಯಕ್ಕೆ..!" ಒಮ್ಮೆ ಇಂಗ್ಲೀಷರ ಓಡಿಸಿದ ಮೇಲೆ..

ಯಾರೋ ಕಿತ್ತುಕಣುವ ತನ್ನ ಚಿನ್ನನ ಬಿಟ್ಟು ಕೊಡದೆ ಹಿಡ್ಕಂಡಂಗೆ ಅವನ ಕೈನ ಗಟ್ಟಿಯಾಗಿ ಹಿಡ್ಕಣ್ತ್ ಗಿರಿಜಾ. ತಾನ್ ಅಸಾಯಕಳ್ ಅಂತ ತಿಳ್ದ್ ಅವಳ್ ಚಡಪಡ್ಸಿತ್. ಕಣ್ಣ್ ಮಂಜಾತ್. ಆ ಜೀವದ ಬೇನೆನ ಅರ್ಥಮಾಡಿಕಂಡ್ ಪುಟ್ಟಬಸವ ಹೇಳ್ತ್.

"ಮರ್ರಿಕೆ ಆಗದ್"

ಸಣ್ಣ ಸ್ವರಲಿ ಗಿರಿಜಾ ಉತ್ತರ ಕೊಟ್ಟತ್.

"ಇಲ್ಲೆ"

"ನೀನ್ ವೀರ ನಾರಿಂತ ತಿಳ್ದ ಗಿರಿಜಾ ಗಂಡಂದಿರ್ ಒಳ್ಳೆ ಕೆಲ್ಸಕ್ಕೆ ಹೊರ್ಡಿಕಾನ ವೀರ ಹೆಣ್ಣ್‌ಗ ಎಂತ ಮಾಡ್ವೆ ಗೊತ್ತುಟಾ?"

"ಯಾಗ ಹೊರ್ಟರೆ ನೀವು?"

ಇಷ್ಟ ಆದ ವಸ್ತುನ ಕೂಸಿಗೆ ಕೊಡ್ವ ಬದ್ಲ್ ಬೇರೆನೋ ಕೊಟ್ಟ್ ಸಮಾಧಾನ ಮಾಡ್ದಂಗೆ ಪುಟ್ಟ ಬಸವ ಹೇಳ್ತ್.

"ಎಲ್ಲವು ಸೇರಿ ನನ್ನ ನಾಯಕ ಅಂತ ಮಾಡ್ಯೊಳ ಗೊತ್ತುಟಾ? ನಂಜಯ್ಯನವು, ಎಲ್ಲವುಸ ನಂಗೆ ದೊಡ್ಡ ಸ್ಥಾನ ಕೊಟ್ಟಳೊ. ಅವಳ ಗಂಡ ನಾಯಕ ಆಗದೆ ಕೆಳಗಿನ ಜಾಗಲಿ ಇದ್ದದಾದ್ರ್ ಯಾಗ? ಆದರು ಗಿರಿಜಾ, ಗಂಡ ಮಹತ್ವದ್ ಏನೋ ಹೇಳಿಟು ಅಂತ ಮಾತ್‌ನ ಮೆಲುಕು ಹಾಕ್ತಿತ್.

ಪುಟ್ಟಬಸವ ಮುಂದುವರ್ಸಿತ್.

"ನಮ್ಮ ಸೈನ್ಯಕ್ಕೆಲ್ಲ ಇನ್ನ್ ನಾನೇ ಸೇನಾಧಿಪತಿ ಕೊಡಗಿನ ಸೈನ್ಯ ಕನ್ನಡ ಜಿಲ್ಲೆದು ಎಲ್ಲದಕ್ಕು. ಇಂಗ್ಲೀಷರ ಓಡ್ಸಿ ರಾಜರ ವಾಪಾಸು ಮಾಡಿಕಂಬದು ನಾನೇ"

ಇದೀಗ ದೊಡ್ಡ ವಿಷಯಾಂತ ಗಿರಿಜೆಗೆ ಆತ್. ಆಕೆ 'ಓ' ಅಂತ ಹೇಳ್ತ್.

"ಆಮೇಲೆ ಏನಾದೆ ಹೇಳ್"?

ಗಿರಿಜ ಸಣ್ಣಕೆ ನಗಾಡ್ತ್.

"ರಾಜರ್ ನೀವುಗೆ ಸನ್ಮಾನ ಮಾಡುವೆ"

"ನಂಗೊಬ್ಬಂಗೆ ಅಲ್ಲ. ನಾವುಗೆಂತ ಹೇಳ್. ನಮಿಗಿಬ್ಬರಿಗು"

'ಹೂಂ'

ಆದರೆ ಆ ಸನ್ಮಾನಕ್ಕಿಂತಸ ದೊಡ್ಡ ಆಸೆ ಇತ್ತ್ ಗಿರಿಜೆಗೆ ಅವ್ಳೇಳ್ತ್.

"ಅದರೆಲ್ಲಾ ಮುಗ್ಸಿಕಂಡ್ ಇಲ್ಲಿಗೆ ಬಂದವ್, ಮುಂದೆ ಯಾಗೊಳು ಇಲ್ಲೇ ಇದ್ದರೆಲಾ?"

ತಬ್ಬಿಕಂಡಿದ್ದ ಕೈನ ಇನ್ನು ಗಟ್ಟಿಮಾಡಿ ಹೇಳ್ತ್.

"ಇದ್ದನೆ"

ಗಿರಿಜವ್ವಂಗೆ ಒಮ್ಮೆಗೆ ಉಸ್ರುಕಟ್ಟಿದಂಗಾತ್. ಮೈ ಬೇನೆ ಆತ್. ಸುಧಾರಿಸಿಕಂಡ್ ಹೇಳ್ತ್ ಅವ್ಳು.

"ಈಗ ಹೋದವು ಎಷ್ಟು ದಿನ ಆಗಿ ಬಂದರಿ? ದಿನಗಳೇ? ಶ್ರೀಮಂಗಲ ನಾಡಿನ ಗಿರಿಜಾ ಕೊಡಗ್‌ನ ವಿಸ್ತಾರ ಗೊತ್ತಿಲ್ಲದವಳಲ್ಲ. ಕನ್ನಡ ಜಿಲ್ಲೆ ಅದಕ್ಕಿಂತಸ ದೊಡ್ಡದ್‌ಂತ ಗೊತ್ತುಟು ಅವ್ಳಿಗೆ. ಅಷ್ಟಿದ್ದೂ..."

"ಮಳೆಗಾಲದೊಳಗೆ ಎಲ್ಲಾ ಮುಗ್ಸಕು ಅಂತ ಒಳ ಗಿರಿಜಾ. ಸಿಡ್ಲ್‌ನ ಹಂಗೆ ಅವರ ಮೇಲೆ ಬೀಳಕು. ಕುದ್ದು ಹೋದವ್ಕೆ ಎದ್ದ್ ನಿಲ್ಲಿಕೆ ಅವಕಾಶ ಕೊಡಿಕೆ ಆಗದ್."

ಯುದ್ಧಭೂಮಿನ ಹೆದ್ರಿಕೆ ಗಿರಿಜಂಗೆ ಇತ್ತ್. ಆದರೆ ಎಷ್ಟೋ ಯುದ್ಧನ ಗೆದ್ದ್ ಬಂದ ವೀರ ಅವ್ಳ ಗಂಡ. ಅವನೆದುರು ನಂಗೆ ಆಗುವ ಹೆದ್ರಿಕೆನ ತೋರ್ಸುದು ಯೋಗ್ಯ ಅಲ್ಲಂತ ಅವ್ಳಿಗೆ ಗೊತ್ತಿತ್ತ್.

ಆದರೂಸ ಹೇಳಿಕೆ ಆಗದ ಭಾವನೆಗಳ ನೊಡುಗೆ ಸಿಕ್ಕಿ ಗಂಡಂಗೆ ಇನ್ನೂ ಅಂಟಿ ಮಲ್ಗಿತ್ ಗಿರಿಜಾ.

## ೧೧

ರಾಮಗೌಡನ ನಡೆನಷ್ಟೆ ನುಡಿ ಕೂಡ ಸ್ಪಷ್ಟ ಇತ್ತ್. ಅವ ಪುಟ್ಟಬಸವನ ಉದ್ದೇಶಿಸಿ ಹೇಳ್ತ್.

"ಸ್ವಾಮಿಯವು ಒಪ್ಪಿಗೆ ಕೊಡಕು. ನಾಳೆ ಬೊಳ್ಪಿಗೆ ನಾನು ಮಾಚಯ್ಯ ಹೊರ್ಟವೆ. ಕುದುರೆ ಸಿಕ್ಕುದು ಸಾಧ್ಯ ಆದರೆ...

"ಕೊಡ್ಸಮ" ಕುದುರೆಗ ಸಿಕ್ಕುವೆಂತ ಹೇಳ್ತ್ ನಂಜಯ್ಯ.

"ಹಂಗಾರೆ ಕುದುರೆ ಓಡ್ಸಿಕಂಡೆ ಹೋದವೆ ನಾವ್" ನೀವೆಲ್ಲ ಬಾಕಿ ಮುಂದೆ ಎರ್ಡ್ ದಿನ ಮುಂದೆನೆ ನಾವು ಊರ್ ಸೇರಕು ಒಳ್ಳೆ ಮೂರ್ತ ನೋಡಿಕಂಡ್_"

"ಇನ್ನ್ ನಾಲ್ಕೈದು ದಿನ ಬುಟ್ಟು ನಾವೆಲ್ಲ ಹೊರ್ಡಿಕೆ ಸರಿ ಆದೆ" ಸೋಮಯ್ಯ ಹೇಳ್ತ್.

"ಹಂಗೆ ಮಾಡಿ" ಅಷ್ಟೊತ್ತಿಗೆ ಕೊಡಗ್‌ನ ಬೇರೆ ಬೇರೆ ಊರ್ಗಳಿಗೆ ಆದೇಶ ಕಳ್ಸಿಕೆ ಸರಿ ಆದೆ. ಸರೀನಾ?

"ಆದು ಗೌಡ್ರೆ"

ಹೆಚ್ಚ್‌ಂತ ಹೇಳ್ರೆ ಎರ್ಡ್ ದಿನ ಪ್ರಯಾಣ. ನೀವೆಲ್ಲ ಬಾಕನ ಬೊಳ್ಪುಗೆ ತಿಂಗಳ್ ಬೆಳ್ಕ ಇದ್ದದೆ. ಅಷ್ಟ್ ಸಾಕ್.

"ಸರಿ"ಂತ ಹೇಳ್ತ್ ಕರಿಯಪ್ಪ.

ರಾಮಗೌಡ ನಗಾಡಿಕಂಡ್ ಪುಟ್ಟಬಸವನ ಮೋರೆ ನೋಡ್ತ್.

ಎಂತ?" ಪುಟ್ಟಬಸವನು ನಗಾಡಿಕಂಡ್ ಕೇಳ್ತ್.

"ಏನಿಲ್ಲೆ" ತಿಂಗಳ್ ಬೊಳ್ಪುನ ವಿಷ್ಯ ಯೋಚನೆ ಮಾಡ್ದೆ. ಬಾಕನ ಅಮವಾಸ್ಯೆ. ಮತ್ತೆನ ಹುಣ್ಣಿಮೆಲಿ ನಾವು ಸಮುದ್ರ ದಂಡೆಲಿ ಇದ್ದವೆ. ಹೌದು?" ಓಹೋ!ಂತ ಹೇಳ್ತ್ ಪುಟ್ಟಬಸವ.

ಸೋಮಯ್ಯ ಹೇಳ್ತ್.

ನಾವು ದಂಡೆ ಮೇಲಿದ್ದವೆ. ಇಂಗ್ಲೀಷ್‌ನವು ಉಪ್ಪು ನೀರ್ ಕುಡಿತ್ತಿದ್ದವೆ.

"ಹೌದು" ಉಪ್ಪು ನೀರ್ ಕುಡ್ದ್, ತಿಮಿಂಗಿಲದ ಹೊಟ್ಟೆಲಿ ಕಂಪೆನಿನ ಬ್ಯಾಂಕ್ ತೆಗಿಯಲಿ ಕರಿಯಪ್ಪ ಹೇಳ್ತ್.

ಎಲ್ಲವು ನಗಾಡ್ದೊ.

ನಂಜಯ್ಯ ಯೋಚಿಸಿ ಹೇಳ್ತ್.

"ನಾವು ಕೊಡಗ್‌ಲಿ ಈಗಂದಲೇ ಇಂಗ್ಲೀಷರ ಮೇಲೆ ಯುದ್ಧ ಸಾರ್ದ ಹಂಗೆನೆ ಲೆಕ್ಕ. ಆದರೆ ನಮ್ಮ ಸೈನ್ಯ ಮಡಿಕೇರಿ ಕಡೆ ನುಗ್ಗುದು, ಕನ್ನಡ ಜಿಲ್ಲೆನ ವಶಪಡ್ಸಿದ ಮೇಲೆನೆ ಅಲಾ?" ಪುಟ್ಟಬಸವ ಉತ್ತರಿಸಿತ್.

'ಹೌದು' ಅಷ್ಟರವರೆಗೆ ಎದುರೆದುರು ಇಂಗ್ಲೀಷರ ಎದುರಿಸದೆನೆ ಇಲ್ಲಿ ಯುದ್ಧ ನಡಿಯಲಿ.

ರಾಮಗೌಡನ ಹಣೆ ಮೇಲೆ ನೆರಿಗೆ ಬಾತ್. ಹಂಞ ಹೊತ್ತು ಹಂಗೆನೆ ಇದ್ದಾದ ಮೇಲೆ ಮತ್ತೆ ಹಿಂದಿನ ಉತ್ಸಾಹಲಿ ಮಾತಾಡ್ತ್.

"ಆದು". ಯುದ್ಧತಂತ್ರದ ದೃಷ್ಟಿಲಿಸ ಅದ್ ಒಳ್ಳೆದು. ನಾವು ಮಂಗಳೂರು ಕಡೆಗೆ ಹೋಕನ, ಇಂಗ್ಲೀಷರ ಸೈನ್ಯ ಮಡಿಕೇರಿಂದ ಸುಳ್ಯಕ್ಕೆ ಬಂದದೆ. ಆಗ

ಕೊಡ್ಗನೊಳಗೆ ಕೆಲ್ಸ ಸುಲಭ ಆದೆ. ಆಮೇಲೆ ಮೇಲಿಂದಸ, ಕೆಳಗೆಂದಸ ಎರ್ಡ್ ಕಡೆಂದ ಒತ್ತಿರೆ, ಅವು ಪುಡಿ ಪುಡಿ – ಅಡಿಕೆ ಕತ್ತರಿಲಿ ಸಿಕ್ಕಿದ ಅಡಿಕೆನ ಹಂಗೆ"

"ಸರಿ ಹೇಳ್ದರಿ ರಾಮಗೌಡರೆ" ಎಂದ ಪುಟ್ಟ ಬಸವ. ನಂಜಯ್ಯ ತಲೆಯಾಡ್ಸಿ ಹೇಳ್ತ್.

"ಗೌಡರೇ ನಿಮ್ಮ ಮಾತ್ ಕೇಳ್ರೆ ಜೀವಮಾನ ಎಲ್ಲಾ ಯುದ್ಧ ಭೂಮಿಲೆ ಕಳ್ದಳೊರಿ ಅಂತ ಭಾವಿಸಕು! ಇಂಗ್ಲೀಷರ್ ನಮ್ಮ ದೇಶಕ್ಕೆ ಬಾರದೆ ಇದ್ದಿದ್ದರೆ ನಿಮ್ಮಂಥ ದಂಡನಾಯಕನ ಪರಿಚಯ ನಾವುಗೆ ಆಗ್ತಿತ್ಲೆ!"

ಸಮರ ಪಟುಂದ ಬಂದ ಹೊಗಳಿಕೆ. ಹೃದಯಂದಲೇ ಬಂದಿತ್ತ್ ಮೋಕೆನ ಮಾತ್.

ನಾಚಿಕೆಂದ ರಾಮಗೌಡನ ಮುಖ ಹಂಞ ಕೆಂಪಾತ್.

"ಸರಿ, ಸರಿ! ಎಂತ ದಂಡನಾಯಕ? ಬರಿ ದಂಡಕ್ಕೆ! ಹೈದಂಗ ತಮಾಷೆ ಮಾಡ್ರೆ ಸುಮ್ಮನಿರಕ್. ನನ್ನಷ್ಟೆ ಪ್ರಾಯ ಆದ ನೀವು ಹಿಂಗೆ ಹೇಳ್ದೊ?"

"ಆದು ಇನ್ನ್ ಹೆಚ್ಚ್ ದಿನ ಇಲ್ಲೆಲ್ಲಾ. ನಾ ಮಾಡ್ದ್ ತಮಾಷೆನಾ ಎಂತಂತ ಲೋಕಕ್ಕೆ ಆಗ ಗೊತ್ತಾದೆ!"

ರಾಮಗೌಡ ಎರ್ಡ್ ಕೈಗಳ ಮೇಲೆತ್ತಿ. ಮಡ್ಚಿ, ಬುಡ್ಸಿ ತೊಡೆ ತೋರ್ಸಿಕಂಡ್ ಹೇಳ್ತ್.

"ನೋಡಿ ರೈತ ಆಗಿ ನೇಗಿಲ್ ಹಿಡ್ದ ಕೈಗ. ಫೈರ್ ಹಾಳ್ ಮಾಡಿಕೆ ಕಾಡ್ ಹಂದಿ ಬಾಕನ ಯುದ್ಧಕ್ಕೆ ಹೋದುಟ್ಟು. ಕೋವಿ ಹಿಡ್ದ್ ಅಭ್ಯಾಸ ಆದ ಮೇಲೆ ಒಂದು ಪಟ್ಟೆಹುಲಿ ಹೊಡ್ದೊಳೆ. ಸಾಕಾ ದಂಡನಾಯಕನ ಚರಿತ್ರೆ?"

ಮಾಚಯ್ಯ ನಗಡಿಕಂಡ್ ಮಾತ್ ಸೇರ್ಸಿತ್.

"ಇವು ಹೇಳ್ದೊರ ನಂಬೇಡ ನಂಜಯಣ್ಣ. ಅಮರ ಸುಳ್ಯಲ್ಲೆಲ್ಲಾ ರಾಮಗೌಡರು ಮಹಾಶೂರ ಅಂತ ಹೆಸರ್ ಮಾಡ್ಯೊಳ.

ರಾಮಪ್ಪಯ್ಯನ ಹಣ್ಣ್ ಮಾಡ್ವ ಶಕ್ತಿ ಯಾರಿಗಾದ್ರ್ ಇದ್ದರೆ ಅದ್ ಇವ್ಕೆ ಮಾತ್ರಾಂತ ಜನ ತಿಳ್ಕಂಡೊಳ.

"ಸುಮ್ಮನಿರಿ ನೀವು" ರಾಮಗೌಡ ಸುಮ್ಮನೆ ಸಿಡ್ಕಿತ್.

"ಸೂರ್ಯಂಗೆ ಕೈ ಅಡ್ಡ ಹಿಡ್ದವರುಟ್ಟ?" ಹಂಗೆ ಹೇಳಿಕಂಡ್ ನಂಜಯ್ಯ ನಗಾಡ್ತ್. ಹಂಞ ಹೊತ್ತು ಇವರ ಕುಶಾಲ್ ಆದಮೇಲೆ ಮತ್ತೆ ಗಂಭೀರತೆ ನೆಲ್ಸಿತ್.

ರಾಮಗೌಡ ಹೇಳ್ತ್.

"ಹಂಗಾರೆ ಈ ಸರ್ತಿ ಯುಗಾದಿ ಹಬ್ಬ ನಮ್ಮ ಊರ್ಲ ಆಚರಿಸಮ"

"ಅಂದ್ ಸಾಯಂಕಾಲನೆ ನಮ್ಮ ಸೈನ್ಯದ ಸುರ್ನ ಕವಾಯಿತು" ಅಂತ ಹೇಳ್ತ್ ಪುಟ್ಟಬಸವ.

"ಆದು ಸ್ವಾಮಿಯವರೆ ನಾವು ಸುರುನ ಜಯ ತಕಂಬದು ಕೂಡ ಅಂದೆ"

ಆ ಸುರುನ ಜಂಬರನ ಮನ್ಸ್‌ಲಿನೆ ನೆನ್ಸಿಕಂಡ್ ನಂಜಯ್ಯ ಹೇಳ್ತ್.

"ರಾಮಪ್ಪಯ್ಯ ಒಂದು ಹುಳ ಇದ್ದ ಹಂಗೆ. ಹೊಸ್ಕಿ ಬಿಸಾಕಕು. ಬಾಳ ಸುಲಭಲಿ ಆ ಕೆಲ್ಸ ಆಕು. ನಮ್ಮ ಪಾಲಿಗೆ ಯಾವ ನಷ್ಟಸ ಆಗದೆ ನಾವು ಗೆಲ್ಲೊಕು. ಅಲಾ ರಾಮಗೌಡರೇ?"

"ಹೌದು, ಒಪ್ಪಿದೆ".

ಪುಟ್ಟಬಸವ ಹೇಳ್ತ್

"ಪ್ರತಿ ಸರ್ತಿಸ ನಮ್ಮ ದೃಷ್ಟಿ ಹಂಗೆನೆ ಇರೊಕು. ಸುಮ್ಮ ಸುಮ್ಮನೆ ನಮ್ಮ ಕಡೆ ಏನುಸ ಹಾನಿ ಆಕೆ ಆಗದ್. ಸೈನ್ಯಂತ ಹೇಳ್ದ ಮೇಲೆ ನಮ್ಮೆಲ್ಲರ ಪ್ರಾಣಕ್ಕೆಸ ಒಂದೇ ಬೆಲೆ.

"ಹೌದು ಸ್ವಾಮಿಯವೆ"

"ಹಂಗಾರೆ ಸುಳ್ಯನೇ ನಮ್ಮ ಸುರುನ ಜಾಗೆ"

"ಹೌದು. ಕೊಡಗ್‌ಲಿ ಹುಟ್ಟಿದ ಈ ಒರ್ತೆ ಬೆಳ್ದ್‌ಕಂಡ್ ಹೋದು ಸುಳ್ಯಲಿ. ನದಿನ ಅಗಲ ಎಷ್ಟ್, ಗುಂಡಿ ಎಷ್ಟ್ ಅಂತ ಈಗನೇ ಕೇಳ್ಬೇಡಿ. ನೀವೆ ನೋಡಿಗಡ. ಮುಂದೆ ಹೋದಹಂಗೆ ಹಳ್ಳ ದೊಡ್ಡದಾದೆ. ಅದಿಕ್ಕೆ ಉಪನದಿಗ ಸೇರ್ವೆ. ಮಂಗಳೂರು ಮುಟ್ಟುವ ಹೊತ್ತಿಗೆ ನದಿ ಸಮುದ್ರನೇ ಆಗಿದ್ದದೆ".

ಪುಟ್ಟಬಸವ ಮನಪೂರ್ವಕವಾಗಿ ಹೇಳ್ತ್.

"ಬೇಷ್ ರಾಮಗೌಡರೇ! ನೀವು ಕಲಿಸ ಹೌದು, ಕವಿಸ ಹೌದು. ಪ್ರತಿಯೊಂದುಸ ನಿಮ್ಮ ಕಲ್ಪನೆಯ ಪ್ರಕಾರನೆ ನಡ್ದದೆ. ಯಾವ ಸಂಶಯಸ ಇಲ್ಲೆ."

ನಂಜಯ್ಯ ತನ್ನ ಜಾಗಂದ ಎದ್ದ್, ಮೆಲ್ಲ ನಡ್ಕಂಡ್ ರಾಮಗೌಡನ ಹತ್ರ ಹೋತ್. ಗೌಡನ ಹತ್ರನೆ ಕುದ್ದ್, ಅವನ ತೊಡೆ ಮೇಲೆ ಕೈ ಇಸಿತ್. ವಿಶ್ವಾಸದ ನೋಟಲಿ ರಾಮಗೌಡನ ಕಣ್ಣ್‌ಗಳ ಸರ್ತ ನೋಡಿಕಂಡ್ ಹೇಳ್ತ್.

"ಅಣ್ಣ, ನೀವುಗೆ ಸಂಪೂರ್ಣ ತೃಪ್ತಿ ಆತಲಾ?" ಅಂತ ತೃಪ್ತಿನೆ ಆಗಿತ್ತ್ ರಾಮಗೌಡಂಗೆ. ಸಮಾಧಾನ ಆಗುವಂಗೆ ತಬ್ಬಿಕಂಡ್ ಇಬ್ಬರಿಗೆ ಮೈ ಪುಳಕ

ಆಗಿತ್ತ್. ಸಮಾಧಾನ ಸ್ವರಲಿ ಅವ ಹೇಳ್ತ್.

"ಏನೆಲ್ಲ ಆಸೆ ಇಸಿಕಂಡ್ ಘಟ್ಟ ಹತ್ತಿ ಬಂದಳೆನ ಅದೆಲ್ಲಾ ನೆರವೇರ್ತ್ ನಂಜಯ್ಯನವೇ."

"ನಿಮ್ಮ ಬಾಯಿಂದಲೇ ಈ ಮಾತ್ ಕೇಳಿ ಖುಷಿ ಆತ್."

"ಗುರ್ತನೆ ಇಲ್ಲದ ಜನಗ. ಹೊಸಬರ್ ಬೇರೆ. ಆದರಸು ಒಟ್ಟಿಗೇ ಹುಟ್ಟಿ ಬೆಳ್ದವುಂತ ನೆನ್ಸಿಕಂಡ್ ಇಲ್ಲಿಗೆ ಬಂದದ್. ನನ್ನ ನಂಬಿಕೆ ಸುಳ್ಳಾತ್ಲೆ. ನಿಮ್ಮ ಎಲ್ಲಾ ನೋಡಿದ ಮೇಲೆ, ನಿನುತ್ರ ಮಾತಾಡ್ದ ಮೇಲೆ ನಾವೆಲ್ಲಾ ಅಣ್ಣ-ತಮ್ಮಂದಿರ್ ಅಂತ ಸ್ಪಷ್ಟ ಆತ್ ನಂಗೆ."

ನಂಜಯ್ಯ ಹೇಳ್ತ್.

"ಗೌಡರೇ, ನಿಜ ಹೇಳಕುಂತಾದರೆ ಈ ವಯಸ್ಸ್‌ಲಿ ನಮ್ಮಂಥವು ಪುಳ್ಳಿಕಳ ತೊಡೆ ಮೇಲೆ ಕುದ್ರಿಸಿಕಂಡ್ ಆಟ ಆಡ್ಸಿಕಂಡ್ ಮನೆಲಿ ಇರೊಕು. ಆದರೆ ನಾವೆಲ್ಲಿ ಒಳ ಈಗ? ನಾನ್ ನನ್ನ ಮನೆಯವು ಮೋರೆ ನೋಡದೆ ಎಷ್ಟ್ ಕಾಲ ಆತಾ – ಎಷ್ಟ್ ದಿನಾಂತ್ಲೆ ಮರ್ತು ಹೋವುಟು!"

"ನಂಗೆ ನಾಕ್ ಮಕ್ಕ ಒಳ ನಂಜಯ್ಯನವೇ. ದೊಡ್ಡವ ಪ್ರಾಯಕೆ ಬಂದುಟ್ಟು. ಈ ವರ್ಷ ಮನೆಗೆ ಸೊಸೆ ತರಕು ಅಂತಿದ್ದೆ. ಈಗ ಆ ಯೋಚನೆನೆ ಇಲ್ಲೆ. ಒಮ್ಮಿಂದೊಮ್ಮೆಗೆ ಈ ಇಬ್ಬರ್ಲಿ ಸುರು ಆದ ಮಾತ್‌ಕತೆನ ಕೇಳಿ ಉಳ್ದವ್ಕೆ ಆಶ್ಚರ್ಯ ಆತ್. ವಯಸ್ಸ್‌ಲಿ ಇಬ್ಬಂರ್ದ್ ದೊಡ್ಡವ ಆದ ಸೋಮಯ್ಯ ಹೇಳ್ತ್.

"ನನ್ನ ಯಾಕೆ ಮರ್ತರಿ? ನಾನ್ಯಾವ ತಪ್ಪು ಮಾಡ್ಯೊಳೆಂತ? ಪುಟ್ಟಬಸವ ನಗಾಡ್ತ್.

"ಕ್ಷಮಿಸಿಯಪ್ಪ. ಒಂದು ಗುಡ್ಡೆಗೆ ಇನ್ನೊಂದು ಗುಡ್ಡೆ ಅಡ್ಡ ಆಗಿದ್ದಂತೆ ಅಂತ ಮರ್ತ್ ಹೋಗಿತ್ತ್!"

ಸೋಮಯ್ಯ ನೆಗಾಡಿ ಸುಮ್ಮನಾತ್.

ತಪ್ಪು ಮಾಡ್ದವರಂಗೆ ಗೌಡ ಹೇಳ್ತ್.

"ಮಾತ್ ಎಲ್ಲಿಗೋ ಹೋತ್. ಆದರುಸ ಮಕ್ಕಳ ಮರಿಯದೆ ಈ ಕೆಲ್ಸ ಮಾಡ್ದು ಒಳ್ಳೆದು. ನಮಿಗೆ ಬಿದ್ದ ಸಂಕಲೆನ ಮುರ್ಕಂಡ್ರೆ ಮುಂದೆ ಸ್ವತಂತ್ರ ದೇಶಲಿ ನಮ್ಮ ಸಂತಾನ ಬೆಳಿಯದು. ಅವ್ಕೆ ಬೇಕಾಗಿಯೇ ನಾವ್ ಇದರೆಲ್ಲಾ ಮಾಡ್ದುಂತ ಹೇಳ್ರೆ ತಪ್ಪೆಂತ?

ಪುಟ್ಟಬಸವ ಹೇಳ್ತ್ : "ಏನ್‌ಸ ತಪ್ಪಿಲ್ಲೆ. ನಿಜಸ್ಥಿತಿ ಇರ್‍ದೊ ಹಿಂಗೆ. ಈಗ

ನಾನ್ ಸುಮ್ಮನೆ ಕುದ್ದರೆ ಮುಂದೆನ ತಲೆಮಾರ್‌ನವು ನಾವುಗೆ ಶಾಪ ಕೊಡ್ದು ಖಂಡಿತ..."

ಎಲ್ಲವುಕೆಸ ಹೃದಯ ಭಾರ ಆಗಿತ್ತ್. ಯಾವ ಕಾರಣಸ ಇಲ್ಲದೆ ಯಾಕೆ ಹಿಂಗೆಂತ ಪ್ರತಿಯೊಬ್ಬಂಗೆಸ ಯೋಚನೆ ಆತ್.

ಅನಿವಾರ್ಯಲಿ ಬಂದ ಮೌನನ ಬದಿಗೆ ದೂಡಿ ರಾಮಗೌಡ ಹೇಳ್ತ್. "ಸ್ವಾಮಿಯವೇ ನಾಳೆ ನಾವು ಹೊರ್ಡುದು ಗ್ಯಾರಂಟಿ ಅಲಾ? ಹೌದುಂತ ಪುಟ್ಟಬಸವ ತಲೆ ಆಡ್ಸಿತ್ತ್.

"ಇರ್ಲ್ಲ್ ಇಲ್ಲಿನೆ ಮಲ್ಗಿ ಬೊಳ್ಪಿಗೆ ಹೊರ್ಡಿ." ಚೆಟ್ಟಿ ಹೇಳ್ತ್.

"ಕರ್ತುದು, ನನ್ನದು ಕುದುರೆಗ ಉಟ್ಟಲ. ಗೌಡ್ರುನು, ಮಾಚಯ್ಯನವು ಅದ್ರ ತಕಂಡ್ ಹೋಗಲಿ.

"ಆದು. ಬೇರೆ ಇನ್ನ್ ಮೂರ್ ನಾಕ್ ನಾಳೆ ಮಾಡಿಕೊಟ್ನೆ ಅಂತೇಳ್ತ್ ಸೋಮಯ್ಯ.

ರಾಮಗೌಡ ಆದುಂತ ಹೇಳ್ತ್. ಒಟ್ಟಿಗೆ "ಆದಷ್ಟು ಹೆಚ್ಚಿಗೆ ಕುದುರೆಗಳ ನಾವು ಉಪಯೋಗ್ಸಕು. ಇರ್ದರೆಲ್ಲಾ ತಕಂಡ್ ಬನ್ನಿ. ಸುಳ್ಯಲಿ ಅವ್ಕೆ ಜೋಡಿಯಾಗಿ ನಾಲ್ಕೈದು ಸಿಕ್ಕುವ."

## ೧೨

ಬೊಳ್ಪಿಗೆ ಹೊರ್ಟ್‌ನಿಂತ ರಾಮಗೌಡ ಮತ್ತೆ ಮಾಚಯ್ಯಂಗೆ ಬುತ್ತಿಗಳ ಜೋಡ್ಸಿ ಆಗ್ಸಿತ್. ಸವಾರಿ ಮಾಡುವವ ಬೇರೆ ಜನಗಂತ ಗೊತ್ತಿದ್ದರುಸ ಕುದುರೆಗ ತಯಾರಾಗಿ ನಿಂತೊ. ಎರ್ಡ್ ಜನಂಗ ಹೊರ್ಡುದುಂತ ಗೊತ್ತಾಕಾನ ಆ ಕುದುರೆಗ ಉಳ್ದ ಎರಡರೊಟ್ಟಿಗೆ ಹೋಗುವ ಸುದ್ಧಿ ಮಾತಾಡ್ದೊ.

"ಗಂಗವ್ವ ರಾಮಗೌಡಂಗೆ ಹೇಳ್ತ್." ಅಂಬೆರ್ಪುಲಿ ಬಂದ್ ಅಂಬೆರ್ಪುಲಿ ಹೊರ್ಟರಿ.

ನಾಕ್ ದಿನ ಇತ್ಲೆ

ರಾಮಗೌಡ ಹೇಳ್ತ್.

"ಇನ್ನೊಮ್ಮೆ ಪುರುಸೊತ್ತು ಮಾಡಿಕಂಡ್ ಬಂದವೆ ತಾಯಿ. ನೀವು ಕಟ್ಟಿಕೊಟ್ಟ ಬುತ್ತಿ ಮುಗ್ದರುಸ ನಿಮ್ಮ ನೆಂಪುನ ಬುತ್ತಿ ಸಾಯುವರೆಗೆ ಇದ್ದದೆ."

"ಶಿವ ನಿಮ್ಮ ಲಾಯ್ಕಲಿ ಇಸಲಿಯಪ್ಪ" ಈ ವಾರಲಿ ನಿಮ್ಮ ಮಂಜನ

ನಮ್ಮೂರಿಗೆ ಕಳ್ಸಿಬುಡಿ ತಾಯಿ"

"ನನ್ನ ಕೈಲಿ ಎಂತಪ್ಪ ಉಟ್ಟು? ನಾನೇನ್ ಕುಮ್ಮಲಿ ವಾಪಾಸು ಅಡ್ಗಿಸಿಕಂಡ್ ಇಸಿಕೆ ಆದೆನ ಮಂಜನ? ಹೊರ್ಟತ್‌ಂತ ಹೇಳ್ರೆ ಹೊರ್ಟ್ಂಗೆ!"

ಮಾಚಯ್ಯನು ಹೇಳಿದ.

"ಹೋಗಿ ಬಂದವೆ ತಾಯಿ"

"ಆದಪ್ಪ"

ಗಿರಿಜಾ ಹಿಂದೆ ನೆರ್ಲ್ಲಲಿ ನಿಂತತ್. ಅವಳ ದೃಷ್ಟಿಲಿ ಮಾಚಯ್ಯ ರಾಮಗೌಡರು ಬರಿ ಪರಿಚಯದವಲ್ಲ. ಗೌಡ ಅಂತು ದಂಡನಾಯಕ. ನಾಳೆ ದಿನ ನನ್ನ ಗಂಡನೊಟ್ಟಿಗೆ ಹೆಗ್‌ಲಿಗೆ ಹೆಗ್‌ಲ್ ಕೊಟ್ಟು ಕಾದಾಡುವ ವೀರ..

ಗಿರಿಜಾ ಇಬ್ಬರಸ ನೋಡ್ತ್. ಅಕೇರಿಗೆ ಅವಳ ನೋಟ ತನ್ನ ಗಂಡನ ಮೇಲೆ ನೆಟ್ಟತ್.

"ಶುಕ್ರವಾರದೊಳಗೆ ನಾವು ಅಲ್ಲಿದ್ದವೆ ಗೌಡ್ರೆ" ನಂಜಯ್ಯ ಹೇಳ್ತ್.

"ಹೌದು" ಕಾದ್‌ಕಂಡಿದ್ದವೆ.

ರಾಮಗೌಡ ಪುಟ್ಟಬಸವನೆದುರು ಬಗ್ಗಿ ನಮಸ್ಕಾರ ಮಾಡ್ತ್.

"ನೀವು ಹಿಂಗೆ ಮಾಡಿಕಾಗದ್ ಗೌಡ್ರೆ. ವಯ್ಸಲಿ ನೀವು ನಂಗಿಂತ ದೊಡ್ಡವು" ಪುಟ್ಟಬಸವ ಹೇಳ್ತ್.

"ಸ್ವಾಮಿಯವು ನಂಗೆ ನಾಯಕರ್!"

ಗೌಡ್ರ ಭುಜಗಳ ಹಿಡ್ಕಣ್ತ್ ಪುಟ್ಟಬಸವ.

"ಇನ್ನ್ ಬೇಗ ತಿರ್ಗಿ ನಾವೆಲ್ಲ ಸೇರೊಕು. ಬುಟ್ಟು ಹೋಗ್ವ ಈ ಸಂಕಟನ ಬೇಗ ಮುರಿಯಕು.

"ಬಾಯಿಲಿ ಮಾತೆ ಬಾತ್ಲೆ ರಾಮಗೌಡಂಗೆ"

"ನಂಗೆ ಏನು ಹೇಳಕುಂತ ಗೊತ್ತಾದ್ಲೆ. ನೀವು ಒಪ್ಪಿರೆ ನಾವು ಹೊರ್ಟವೆ.

ಆದು ಗೌಡ್ರೆ, ಆದು ಮಾಚಯ್ಯ, ಜಾಗ್ರತೆಲಿ ಹೋಗಿ ತಲ್ಪಿ. ನಿಮ್ಮ ಹಿಂದೆದಲೆ ನಾವು ಬಂದ್‌ಬುಟ್ಟವೆ.

"ಹೊರ್ಟು ನಿಂತ ಅಶ್ವಗ ಉಳ್ದ ಕುದ್ರೆಗಳಿಗೆ ಮತ್ತೊಮ್ಮೆ ಹೋಗಿ ಬಂದವೆಂತ ಹೇಳಿಕಂಡೊ."

ಚೆಟ್ಟಿ ಮತ್ತೆ ಕರ್ತು ಕಾಲ್ದಾರಿ ತಲ್ಪುವ ಮುಟ್ಟ ಕುದುರೆಗಳೊಟ್ಟಿಗೆ ಹೋದೋ.

* * * * *

ಆ ಹಗ್‌ಲ್ ಬಂಡಾಯ ಏಳುವಂಗೆ ಹೇಳಿ ಕಳ್ಸುವ ಕಾಗದ ತಯಾರಾತ್. ಪುಟ್ಟಬಸವನು ನಂಜಯ್ಯನು ಅದರ ಪ್ರತಿಗಳ ಮಾಡ್ದೊ. ಒಕ್ಕಣೆಗೆ ಇಬ್ಬರು ದಸ್ಕತ್ ಹಾಕಿದ್ದೊ.

ಕೊಡಗ್‌ನ ನಾಕ್ ಮೂಲೆಗಳಿಗೆ ಹೋಗಿ ಬಾಕೆ ಇಬ್ಬರ್ ಕುದ್ರೆ ಬುಡುವವರ ಸೋಮಯ್ಯ ಗೊತ್ತು ಮಾಡ್ತ್.

ಬಂಡಾಯದ ಪತ್ರನ ಹೊತ್ತ ಒಕ್ಕಣೆ ತಾವುನಾಡು–ಬೇಂಗುನಾಡು–ನಾಲ್ಕುನಾಡು–ಮಡಿಕೇರಿ ನಾಡು– ಉಮ್ಮತ್ತುನಾಡು– ಶ್ರೀಮಂಗಲ ನಾಡುಗಳ ಅಭಿಮುಖವಾಗಿ ಹೋತ್.

ಆ ಒಕ್ಕಣೆಲಿ ಹಿಂಗಿತ್ತ್:

"ಇಂಗ್ಲೀಷರ ವಿರುದ್ಧ ಯುದ್ಧ ಸಾರ್‍ಯೊಳಂತ ತಿಳ್ಕಣಿ. ಕೊಡಗ್ ಇನ್ನ್ ಸ್ವತಂತ್ರ ಅಂತನೆ ಭಾವಿಸಿಕಣಿ. ಪರಕೀಯರ್ ಆಳ್ದರ ನಿರಾಕರಿಸಿಕೆ ಜನ ಒಪ್ಪಿಕಣಕು. ಹೋರಾಡಿಕೆ ಎಲ್ಲವು ಸಿದ್ಧ ಆಕು. ನಮ್ಮ ಸೈನ್ಯ ಸದ್ಯಲಿಯೆ ಬಂದದೆ."

ಇದರೊಟ್ಟಿಗೆ, ಈ ದೊಡ್ಡ ಯತ್ನಕ್ಕೆ ನಡ್ದ ವಿವರಗಳಸ ತಿಳ್ಸೊಕುಂತ ಓಲೆ ತಕಂಡ್ ಹೊರ್‍ಟವ್ಕೆ ಪುಟ್ಟಬಸವ ಹೇಳಿತ್ತ್.

ಇದಾದ ಮೇಲೆ ದಿನಗ ಬಾರಿ ಬೇಗ ಉರ್‌ಳ್‌ತ್ತಿತ್ತ್. ಸಾಕಷ್ಟ್ ಸಂಖ್ಯೆಲಿ ಗಂಡ್‌ಸ್‌ಗ ಹೊರ್‍ಡಿಕೆ ತಯಾರಿದ್ದೋ.

ಹಂಗೆ ಆ ಹಳ್ಳಿಂದಲೂ, ಹತ್ರದ ಹಳ್ಳಿಂದಲೂ ಹೊರ್‍ಟವ್ರ ಸಂಖ್ಯೆ ಇಪ್ಪತ್ತು ದಾಟಿತ್ತು.

"ನೀವು ನಮ್ಮೊಟ್ಟಿಗೆ ಇರಿ ಸೋಮಯ್ಯ. ಉಳ್ದವರ ಕರಿಯಪ್ಪ ಕರ್‍ಕಂಡ್ ಮುಂದೆ ಹೋಗಲಿ" ಪುಟ್ಟಬಸವ ಹೇಳ್ತ್. ಹಿಂಗೆ ಕಾಲ್ನಡಿಗೆನ ಪ್ರವಾಸ ಮುಂದೆನೇ ಹೊರ್‍ಟತ್.

* * * * *

ಇದ್ದಲ್ಲಿಯೆ ಇದ್ದ್ ಬೊಚ್ಚಿತ್‌ಂತ ಕುದುರೆಗ ಬೊಚ್ಚಿ ಮಾಡ್ದೊ. ಹತ್ತಾರ್ ಮೈಲ್ ಸುತ್ತಿ ಸೋಮಯ್ಯ ಬೇರೆ ಮೂರ್ ಕುದ್ರೆಗಳ ತಾತ್.

ಹೊರ್‍ಡುವ ದಿನ ಬಾತ್. ಹಿಂದ್‌ನ ದಿನ, ಆ ದಿನ, ಇರ್‍ಳ್ ಎಲ್ಲ ಎಲ್ಲವು ಎಚ್ಚರ ಆಗಿನೆ ಇದ್ದೊ. ಆ ಮೇಲೆ ಬೊಳ್ಪಾಗುವ ಮುಂದೆ ಹಂಞ ಮಾತ್ರ ನಿದ್ದೆ.

ಗಿರಿಜ ಮರ್‍ಟತ್ಲೆ. ಗಂಗವ್ವ ಒಬ್ಬಳೇ ಮಂಜನೊಟ್ಟಿಗೆ ಅವನೊಟ್ಟಿಗೆ ಇದ್ದ

ಜನಗಳೊಟ್ಟಿಗೆ ಬುಡದೆ ಮಾತಾಡ್ತ್.

ಗಂಗವ್ವ ಹೇಳ್ತ್ : "ನೀವೆಲ್ಲ ಒಟ್ಟಿಗೆ ಒಳರಿಂತ ನಂಗೆ ಸಮಾಧಾನ"

ನಾವು ಮಂಗ್ಳೂರುವರೆಗೆ ಹೋದವೆ. ನೀವುಗೆಂತ ಬೇಕು ಹೇಳಿ ತಾಯಿ ನಂಜಯ್ಯ ಕೇಳ್ತ್.

"ನಂಗೇನ್ ಬೇಡಪ್ಪ. ನನ್ನ ಪುಟ್ಟಬಸ್ಯನು, ನೀವು ವಾಪಾಸು ಬೇಗ ಬಂದರೆ ಆತ್ ಅಷ್ಟೇ ಸಾಕ್."

"ನಿಮ್ಮಂಥ ತಾಯಿನ ಕೈಲಿ ಒಳ್ಳೆ ಮಂಜ ಅಂತ ಹೇಳಿಕಣಿಕೆ ಬಾಳ ಸುಲ್ಬ"

ಆ ಹೊಗಳ್ದರ ಕೇಳಿ ಗಂಗವ್ವಂಗೆ ನಾಚಿಕೆ ಆತ್.

...ನಿದ್ದೆಗೆಂತ ಮಲ್ಗಿದ್ದ ಆ ಇರ್‍ಲ್ ಗಿರಿಜವ್ವಂಗೆ ಹಂಞಸ ಎವೆ ಮುಚ್ಚಿಕೆ ಆತ್ಲೆ.

ಆಡಕು ಅಂತಿದ್ದ ಮಾತ್‌ಗೆಲ್ಲಾ ಅವು ಆ ಮುಂದೆನೆ ಮಾತಾಡಿ ಮುಗ್ಸಿದೋ. ಏನೋ ತಿಳ್ಸುವ ಆಸೆಲಿ

"ಗಿರಿಜಾ..."

"ಹೂಂ?"

"ಏನಿಲ್ಲೆ"

ಮರ್‍ಡಿಕೆ ಬಾತಿತ್ತ್. ಮರ್‍ಡುದರ ದಮ್ಮುಕಟ್ಟಿ ಹಿಡ್ಕಣ್ತ್.

"ಹೊರ್‍ಡುವ ಗಂಡ ಏನ್ ಹೇಳದೆ ಹೋದುಂತ ಹೇಳ್ರೆ ಎಂತ?

"ಅವ್ವನ ಲಾಯ್ಕ ನೋಡಿಕ ಗಿರಿಜ. ಕಣ್ಣ್ ಎಲ್ಲಾ ಕಾಣದಂಗೆ ಆದರೆ ಬಾಳ ಕಷ್ಟ."

"ನೋಡಿಕಣೆ"

ಮತ್ತೆ ಸಣ್ಣ ಪುಟ್ಟ ವಿಷಯಗ.

"ನನ್ನ ಅಂಗಿ – ಕಂಬಯಿ – ಬೈರಾಸು"

"ಒಗ್ದ್ ಒಣಗಿಸಿ ಮಡ್ಚಿ ಇಸ್ಯೊಳೆ."

"ಒಟ್ಟಿಗೆ ಇಂದ್ ಹಾಕಿದ್ದ್ ಇರ್‍ಲಿ"

"ಹೂಂ"

ಗಂಡನ ಆರೋಗ್ಯದ ನೆಂಪು ಆತ್ ಅವ್ಳಿಗೆ ಹೋಕನ

"ದಾರಿಲಿ ತಣ್ಣೀರ್ ಕುಡಿಬಡಿ"

"ಇಲ್ಲೆ"

"ಗೊಣ್ಣೆ ಆಗಿ, ಜ್ವರ ಬಂದರೆ ನೋಡಿಕಂಬದು ಯಾರ್?

"ಹೆದರ್‌ಬೇಡ ಮಾರಾಯ್ತಿ. ಖಾಯಿಲೆ ಬರ್‍ಸಿಕಂಬಕೆ ಪುರುಸೊತ್ತು ಎಲ್ಲಿಟ್ಟು ನಂಗೆ?

"ನೀವೊಬ್ಬ"

ಮಾತ್ ಮುಗ್ದ್ ಮೌನ ನೆಲ್ಸಿತ್. ಒಟ್ಟಿಗೆ ಗೊರ್ಕೆಯ ಸದ್ದುನು ಜೊತೆ ಆತ್. ಗಿರಿಜಾ ಮೆಲ್ಲ ಕಣ್ಣ್ ಬುಟ್ಟು ಅವಂಗೆ ನಿದ್ರೆ ಬಂದದರೆ ನೋಡಿ ಗಂಡನ ಕೂಸುನಂಗಿದ್ದ ಮೋರೆನನ್ನೆ ಆ ಇರ್‍ಲ್‌ಲಿ ಕಣ್ಣ್ ಮುಚ್ಚದೆ ನೋಡಿಕಂಡ್ ಕುದ್ದತ್.

ನಿದ್ದೆಲಿ ಗಟ್ಟಿಯಾಗಿ ಉಸ್ರು ಬುಟ್ಟು ಕಣ್ಣ್‌ಬುಟ್ಟು ನೋಡ್ತ್ ಪುಟ್ಟಬಸವ.

"ನಿದ್ದೆ ಬಾತ್ಲೆನಾ ಗಿರಿಜಾ"

"ಇಲ್ಲೆ"

ಎಷ್ಟ್ ಹೊತ್ತಾತಾ ಏನೋ?

"ಇನ್ನೆಂತ ಸುರುನ ಹುಂಜ ಕೂಗಿಕೆ ಆತ್"

"ಹೌದಾ?"

"ಹೂಂ"

ಒಳಗೆಂದ ಗಂಗವ್ವನ ಸ್ವರ ಕೇಳ್ತ್.

"ಗಿರಿಜಾ, ಏಳ್ ಕೂಸು, ಬಿಸಿಬಿಸಿ ಎರ್ಡೆರ್ಡು ರೊಟ್ಟಿ ತಟ್ಟಮ.

...... ರೊಟ್ಟಿ ತಿಂದ್, ಬಟ್ಟೆ ಹಾಕಿ ಖಡ್ಗನ ಸೊಂಟಕ್ಕೆ ಸಿಕ್ಸಿ ಕೋವಿನ ಹೆಗ್‌ಲಿಗೆ ಏರ್‍ಸಿ ಪುಟ್ಟಬಸವನು ಅವನ ಕೂಟುಗಳ್ ಹೊರ್‍ಟೊ. ಹುಲ್ಲ್, ನೀರ್ ಇನ್ನ್ ಬೇಡಾಂತ ಕುದುರೆಗಳ್ ಹೊರ್‍ಟದರ ಸೂಚಿಸಿದೋ.

ಗಿರಿಜ ಸೆರ್‍ಗ್‌ನ ಸೊಂಟಕ್ಕೆ ಸಿಕ್ಕಿಸಿ, ಕಂಚ್‌ನ ತಟ್ಟೆಲಿ ಆರತಿ ತಾತ್. ಸೂರ್ಯ ಹುಟ್ಟಿದ ಬೊಳ್ಪುಲಿ ಬತ್ತಿನ ಬೆಳ್ಕ್ ಸ್ಪರ್ಧೆಗೆ ನಿಂತಂಗೆ ಕಾಣ್ತಿತ್ತ್. ಆ ಐದ್ ಜನನು ಅಲ್ಲಾಡದೆ ನಿಂತಿದ್ದೊ. ಗಂಭೀರತೆ ಜಾಸ್ತಿಯಾಗಿ ನಿಶ್ಯಬ್ದ ಆಗಿತ್ತ್ ಅಲ್ಲಿ. ಗಿರಿಜ ಗಂಡಂಗೆ ಆರತಿ ಬೆಳ್ಗಿತ್, ಒಟ್ಟಿಗೆ ಉಳ್ದವ್ಕೆ. ಅವರೆಲ್ಲರ ಹಣೆಗೆ ಕುಂಕುಮನನ್ನು ಹಾಕಿತ್ತ್.

ಅದೆಲ್ಲ ಆದ ಮೇಲೆ ಪುಟ್ಟಬಸವ ತಾಯಿನ ಕಾಲಿಗೆ ಬೀತ್.

"ಆಶೀರ್ವಾದ ಮಾಡ್ ಅವ್ವಾ"

ಗಂಗವ್ವ ಮಂಜನ ತಲೆಕೂದ್ಲ್ ಮುಟ್ಟಿತ್.

"ಗೆದ್ದ್ ಬಾ ಮಂಜ"

ಎದ್ದ್ ನಿಂತ್ ಪುಟ್ಟಬಸವ ಪ್ರೀತಿಂದ ಹೆಣ್ಣ್‌ನ ನೋಡ್ತ್.

ಅವ್ಳಿಗೆ ಎನ್ನುವಂಗೆ ಅವ ಹೇಳ್ತ್

"ಬನ್ನೆ"

ಮತ್ತೆ–

"ಬನ್ನೆ ಅವ್ವಾ"

ವೀರ ಆಗಿದ್ರುಸ ಪುಟ್ಟಬಸವನ ಸ್ವರ ನಡ್ಗಿತ್.

ಅಳ್ಗಿಲ್ ಬಂದ್‌ಕಂಡ್ ಗಂಗವ್ವ ಹೇಳ್.

"ಹೂನಪ್ಪಾ, ಜಾಗ್ರತೆ, ಎಲ್ಲವು ಒಟ್ಟಿಗೆ ಇರಿ"

ನೆಲಕ್ಕೆ ಅಂಟಿಕಂಡಿದ್ದ ಪಾದಗಳ ಅಲ್ಲಾಡ್ಸಿ ನಂಜಯ್ಯ ಹೇಳ್ತ್.

"ಬನ್ನೆ ತಾಯಿ"

ಕುದುರೆಗಳತ್ರ ಹೋಗಿ ಉಳ್ದವು ಹೇಳ್ದೊ.

"ಹೋಗಿ ಬಂದವೆ."

ಆಧಾರಕ್ಕೆಂತ ಗೋಡೆನ ಹಿಡ್ಕಂಡ್ ತಾಯಿ ಹೇಳ್ತ್.

"ಹೋಗಿ ಬನ್ನಿಪ್ಪಾ'

.... ಹೊಲಗಳ ದಾಟಿ ಅವೆಲ್ಲ ನಡ್ದು ಬಂದ್ ಕಾಡ್‌ನ ತುದಿನ ತಲ್ಪಿ ಕಾಲ್‌ಹಾದಿಗೆ ಬಂದೊ.

ಅಗಲ ಹಂಞ ಇದ್ದ ದಾರಿಲಿ ಹೋಗ್ವ ರೀತಿನ ವಿವರಿಸಿಕಂಡ್ ನಂಜಯ್ಯ ಹೇಳ್ತ್.

"ಚೆಟ್ಟಿ ಮುಂದ್‌ಗಡೆ, ಎರಡ್ನೆದಾಗಿ ಸೋಮ್ಯ, ಹಿಂದೆ ಕರ್ತು. ಅವನ ಎದ್ರುಗೆ ನಾನ್. ನೊಡುಲಿ ಸ್ವಾಮಿಯವು – ಕಲ್ಯಾಣಸ್ವಾಮಿಯವು, ಆದೋ?"

"ಆದು" ಎಂದೊ ಚೆಟ್ಟಿನು ಸೋಮಯ್ಯನು ಒಟ್ಟಿಗೆ ಎಲ್ಲವು ಕುದುರೆಗಳ ಹತ್ತಿದೋ.

ಪುಟ್ಟಬಸವ ಕಲ್ಯಾಣಸ್ವಾಮಿಯಾಗಿತ್. ಪುಟ್ಟಬಸವ ಎಡದ ಪುಡೆಗೆ ತಿರ್ಗಿ ಮನೆ ಕಡೆಗೊಮ್ಮೆ ನೋಡ್ತ್. ಬಿಳಿ, ಕರಿ ಮೋಡದಂಗೆ ಎಲ್ಲಾ ಮಸ್ಕಕಾಗಿತ್ತ್. ಮೋಡ ಚೆಲ್ಲಾಪಿಲ್ಲಿ ಆದ ಹಂಗೆ ಮನೆ ಲಾಯ್ಕ ಕಂಡತ್. ಚಿಂಟೆನ ಗೋಡೆ ಹಿಡ್ಕಂಡ್ ಗಂಗವ್ವ ಇನ್ನು ಅಲ್ಲಿಯೆ ನಿಂತಿತ್ತ್. ಅವ್ಳ ಹಕ್ಕಲೆನೆ ಗಿರಿಜ ಇತ್ತ್.

ಅಲ್ಲಿಂದ ದೃಷ್ಟಿನ ಕಷ್ಟಲಿ ಕಿತ್ತ್, ಕಲ್ಯಾಣಸ್ವಾಮಿ ಸರ್ತ ಮುಂದೆ ನಡ್ತ್.

೧೩

ಎರ್ಡ್ ದಿನಂದ ಬುಡದೆ ಪ್ರಯಾಣ ಮಾಡಿ ಕುದುರೆಗ ಬೊಚ್ಚಿದ್ದೊ.

"ಇಂದ್ ರಾತ್ರಿ ಎಲ್ಲಿ ಉಳಿಯದು ಸೋಮಯ್ಯನವೇ?" ಕಲ್ಯಾಣಸ್ವಾಮಿ ಕೇಳ್ತ್.

ಆ ದಾರಿಲಿ ಹಿಂದೆ ಬಂದಿದ್ದ ಸೋಮಯ್ಯ ಹೇಳ್ತ್.

"ಸುಳ್ಯಲಿ!"

"ಹತ್ರ ಬಾತಾ ಸುಳ್ಯ"

"ಹೋ ಇನ್ನ್ ಮೂರೇ ಫರ್ಲಾಂಗು ದಾರಿ"

ಸೋಮಯ್ಯನ ಮಾತ್ ಕೇಳಿ ಉಳ್ದವ್ಕೆ ಖುಷಿ ಆತ್. ಕುದುರೆಗಸ ಅರ್ಥ ಆತ್‌ಂತ ತೋರ್ಸಿದೋ.

ಸೂರ್ಯ ಆಗಲೇ ಪಡ್ವಣ ದಿಕ್ಕಿಗೆ ಇಳ್ದಿತ್ತ್. ಮಾರ್ಗ ಹೋಕಂಡ್ ಇದ್ದ ಹಂಗೆ ಅಗಲ ಆಗಿತ್ತ್. ಬಿಸಿಲೆಘಾಟಿ ದಾರಿಲೇ ಅವು ಬಂದದ್. ಒಂದೆರಡ್ ಕಡೆ ಉಪಹಾರ ತಿಂಬಕೆ ನಿಂತಳೊ ಅಷ್ಟೆ. ಉಳ್ದ ಊರ್‌ಗಳಲ್ಲಿ ಯಾರ ಕಣ್ಣಿಗೆ ಕಾಣಿಕೆ ಆಗದ್ ಅಂತ ಸುತ್ತಿ ಬಳಸಿಯೇ ಬಂದಿದ್ದೋ.

ಎತ್ತರ ತಗ್ಗ್‌ನ ದಾರಿ. ಕೊಯ್ಲು ಮುಗ್ದ್, ಖಾಲಿಯಾಗಿ ಒಣ್ಗಿದ ಹೊಲಗ. ಕಾಡ್. ನೊಡುಲಿ ಬೆಂಕಿ ಬಿದ್ದ್ ಮುಳಿ ಹುಲ್ಲೆಲ್ಲ ಸುಟ್ಟ್ ಹೋದ ಬೋಳು ಗುಡ್ಡೆಗ. ಒಂದೊಂದು ಕಡೆ ದಾರಿ ಕರೆಲಿ ಹರಿವ ತೋಡು.

ಮುಂದೆ ಮುಂದೆ ಹೋದ ಹಂಗೆ ದಾರಿ ಸವೆದಂಗೆ ಇತ್ತ್. ಜನ ಹೆಚ್ಚ್ ಓಡ್ಯಾಡುವ ಜಾಗ ಎಂಬುದಕೆ ಸಾಕ್ಷಿ. ಸೂರ್ಯ ಪಶ್ಚಿಮಲಿ ಮುಳ್ಗಿ ಆಗಿತ್ತ್. ಮಳೆ ಮೋಡ ಮುಸ್ಕಿ ಒಮ್ಮೆಲೆ ಕತ್ತಲೆ ಆತ್.

"ಕತ್ತಲಾಕಂಡ್ ಬಾತಲ್ಲ" ನಂಜಯ್ಯ ಹೇಳ್ತ್.

"ಇನ್ನೇನ್ ಬಾತ್, ಅದೋ ಊರ್!"

ಆಲದ, ಸಾಗ್ವಾನಿ, ಹೊಂಗೆ ಮರಗಳೆಡೆಂದ, ಬಿದ್ರ್ ಮೆಳೆಗಳ ಆಚೆಂದ ಹಂಞಂಞ ಕೇಳ್ತಿತ್ತ್ ಊರ್ನ ಜನರ ಸದ್ದುಗ.

ಹತ್ತಾರ್ ಮಾರ್ ದೂರ ಮುಂದೆ ಹೋಗಿದ್ದ ಚೆಟ್ಟಿ ಕುದುರೆನ ಕಡಿವಾಣ ಜಗ್ಗಿ ನಿಲ್ಸಿ ಹಿಂದೆ ತಿರ್ಗಿ ದೊಡ್ಡದಾಗಿ ಹೇಳ್ತ್.

"ಜನರ ರಾಶಿ ಉಟ್ಟು! ಅವೆಲ್ಲ ದಾರಿಗಡ್ಡ ನಿಂತ ಹಂಗುಟ್ಟು" ಉಳ್ದವು ಅವನತ್ರ ಕುದುರೆ ನಿಲ್ಸಿದೊ.

ನಂಜಯ್ಯ ಹೇಳ್ತ್.

"ಉಕ್ಕಡದ ಕಾವಲ್‌ನವ್ರೋ ಏನೋ"

ಹಿಂದೆ ಈ ಊರ್ಲಿ ಉಕ್ಕಡದ ಕಾವಲ್ ಇತ್ಲೆಲ್ಲಾಂತ ಸೋಮಯ್ಯ ಹೇಳ್ತ್.

"ಏನ್ ಮಾಡ್ದು ಸ್ವಾಮಿಯವೇ? ನಾ ಒಬ್ಬನೆ ಮುಂದೆ ಹೋಗಿ ನೋಡಕ? ಚೆಟ್ಟಿ ಕೇಳ್ತ್.

"ಬೇಡ"ಂತ ಹೇಳ್ತ್ ಕಲ್ಯಾಣಸ್ವಾಮಿ.

"ಇದ್ ಸುಳ್ಯ ಅಲಾ?"

"ಹೌದು"

ನಡಿಯನಿ ಹಂಗಾರೆ, ಏನಾದ್ರು ಸರಿ, ಎಲ್ಲವು ಮುಂದೆ ಪೋಯಿ

ಕುದುರೆಗ ಮತ್ತೆ ಮುಂದೆ ಹೋದೋ. ಇನ್ನೂರರಷ್ಟು ಜನರ ಗುಂಪಿತ್ತ್. ಹಂಞ ಹೆಂಗಸ್ರ್, ಕತ್ತಿ ಹಿಡ್ದ ಜನಗ, ಢಾಲು, ಭರ್ಜಿಗ ಇತ್ತ್. ಕೋವಿ ಇದ್ದವು ಇದ್ದೊ.

ಇದೆಂತ ಆಗಿರ್ದುಂತ ನಂಜಯ್ಯ ಊಹಿಸಿಕಂಡ್ ಇರಿಕಾನ ಜನ ದಾರಿಗೆ ಅಡ್ಡ ನಿಂತೊ. ಯಾರೂ ಕತ್ತಿ ತೆಗ್ತ್‌ಲೆ, ಕೋವಿ ಎತ್ತಿತ್ಲೆ. ಅದ್ರ ಬದ್ಲ್ ಎರ್ಡ್ ಕೈಗಳ ಎತ್ತಿ ಕಿರ್ಚಿದೋ.

"ಹೋ ಹೋ, ಹೋ, ನಿಲ್ಲಿ! ನಿಲ್ಲಿ!

ಆ ಜನಕ್ಕೆ ಎದುರಾಗಿನೆ ಕುದುರೆಗ ನಿಂತತ್.

'ಸೋಮಯ್ಯ ಸ್ವರ ಏರ್ಸಿ ಕೇಳ್ತ್'

ಯಾಕೆ ಅಡ್ಡ ನಿಂತೊಳರಿ? ಏನ್ ಕತೆ?

"ಈ ದಾರಿಲಿ ಬಂದವರ ಅಡ್ಡಕಟ್ಟಕುಂತ ಗೌಡರ ಅಪ್ಪಣೆ ಆಗಿಟು".

ಯಾವ ಗೌಡ್ರ್?

"ಒಬ್ಬ ಸಿಟ್ಟ್‌ಲಿ ಹೇಳ್ತ್"

"ರಾಮಗೌಡ್ರ್! ಕೇಳ್ತ್‌ಲೆನಾ?"

ಕಲ್ಯಾಣಸ್ವಾಮಿ ನಗಾಡ್ತ್. ಅವನ ಸಂಗಡಿಕರಿಗೆ ಧೈರ್ಯ ಬಾತ್. ಸೋಮಯ್ಯಂಗೆ ನಗೆ ಬಾತ್. ಆದರುಸ ದರ್ಪಲಿ ಹೇಳ್ತ್.

"ನಿಮ್ಮ ಗೌಡ್ರ ಕರ್ಕಂಡ್ ಬನ್ನಿ."

"ನೀವು ಯಾರ್‌ಂತ ಹೇಳಿ"

"ನಂಜಯ್ಯ ಆ ಮೊನುಷ್ಯನ ಉದ್ದೇಶಿಸಿ ಹೇಳ್ತ್.

"ಯಾರ್ ಬಂದವೆಂತ ಕಾಯೊದು ನೀವು"

ಕೊಡಗ್ಂದ ಸ್ವಾಮಿಯವು ಬಾವ, ಇಲ್ಲರೆ ಅವರ ಕಡೆಯವು ಬಾವ ಅಂತ ಗೌಡ್ರು ಹೇಳ್ಯೊಳ.

ಹೊತ್ತಾರೆಂದ ನಾವ್ ಕಾಯ್ತಾ ಒಳ.

ಬೇಷ್! ನಾವು ಸ್ವಾಮಿ ಕಡೆಯವೇ. ಆ ಮನುಷ್ಯ ಹಲ್ಲ್ ಬುಟ್ಟತ್.

ಖುಷಿ ಆತ್. ಹಂಗಾರೆ ಇಳಿಯನಿ. ಗೌಡ್ರು ಈಗ ಬಂದವೆ. ಅವ ಗುಂಪ್‌ಲಿದ್ದವಂಗೆ ಹೇಳ್ತ್.

ತನಿಯಪ್ಪ ಗೌಡ್ರ ಕರ್ಕಂಡ್ ಬಾ. ಸ್ವಾಮಿ ಕಡೆಯವು ಐದ್ ಜನ ಸವಾರರ್ ಬಂದೊಳ ತಿಳ್ಸ್!

ತನಿಯಪ್ಪ ಹೋಕನ ಗುಂಪು ದಾರಿ ಮಾಡಿ ಕೊಟ್ಟತ್. ಕುದುರೆ ಧೂಳೂ ಏಳ್ಸಿಕಂಡ್ ನಾಗಾಲೋಟಲಿ ಊರ್‌ಕಡೆ ಹೋತ್.

"ಇಳಿಯಮ ಇನ್ನ್. ಗೌಡರ ಶಿಸ್ತು ಜೋರಾಗಿಯೆ ಉಟ್ಟು" ಸೋಮಯ್ಯ ಹೇಳ್ತ್.

ಎಲ್ಲರು ಕುದುರೆಂದ ಇಳ್ದೊ.

ನಾವು ಕಾಯ್ತಿದ್ದ ಸ್ವಾಮಿ ಬಾರದೆ ಇದ್ದರು ಅವ ಕಡೆವಾದ್ರು ಬಂದಳೊಂತ ಜನಕ್ಕೆ ಹಂಞ ಸಮಾಧಾನ ಆತ್. ಅವಾಗಿಯೇ ಸವಾರರೊಟ್ಟಿಗೆ ಮಾತಾಡಿಕೆ ಯಾರ್ ಇಷ್ಟ ಪಟ್ಟತ್ಲೆ. ಕಣ್ಣ್‌ಗ ತರತರಲಿ ಆ ಐದ್ ಜನಗಳ ನೋಡ್ದೊ. ರಾಮಗೌಡಂಗೆ ಬೇಕಾಗಿ ಎಲ್ಲವು ಕಾದು ನಿಂತೊ.

ನಿಮಿಷಗ ಉದ್ದ ಆತ್ಲೆ.

"ಬಂದೊ!"

"ದಾರಿ ಬುಡಿ"

ಗುಂಪು ಎರ್ಡ್ ಹೋಳಾಗಿ ನಿಂತತ್.

ಸುರುಗೆ ಬಂದದ್ ಗೌಡ, ಮತ್ತೆ ಮಾಚಯ್ಯ, ಮತ್ತೆ ಕರಿಯಕೆ ಹೋದ ತನಿಯಪ್ಪ.

ಕುದುರೆಂದ ಕೆಳಗೆ ಹಾರಿ, ಸೇಂಕಿಕಂಡ್ ರಾಮಗೌಡ ಹೇಳ್ತ್.

"ತಪ್ಪಾತ್ ಸ್ವಾಮಿ, ಕ್ಷಮಿಸಕು, ಇಷ್ಟೊತ್ತು ಇಲ್ಲೆ ಇದ್ದವ ತಯಾರಿ ಎಲ್ಲ ನೋಡಿಕಂಡ್ ಬರಮಂತ ಊರೊಳೊಗೆ ಹೋದೆ.

ಅವ ಐನ್ ಜನಕ್ಕೆಸ ದೂರಂದಲೇ ಬಗ್ಗಿ ನಮಸ್ಕಾರ ಮಾಡ್ತ್. ಮತ್ತೆ

ಅವರತ್ರ ಸೀದಾ ಹೋಗಿ ಒಬ್ಬನೆದುರಿಗೆ ನಡುವರೆಗೆ ಬಗ್ಗಿತ್. ತಲೆಯೆತ್ತಿ ನಿಂತ್, ಜನರ ನೋಡಿ ಬಲಕೈ ಬೀಸಿ ಹೇಳ್ತ್.

"ಹೇಳಿ! ಕಲ್ಯಾಣಸ್ವಾಮಿಯವ್ಕೆ ಜಯ ಆಗಲಿ!" ಜನಕ್ಕೆ ಆಶ್ಚರ್ಯ ಆತ್. ರಾಮಗೌಡನ ಹತ್ರ ನಿಂತ ಕಲ್ಯಾಣಸ್ವಾಮಿನ ನೋಡ್ದೊ.

ಎಲ್ಲವು ಜಯಘೋಷ ಮಾಡ್ದೊ.

"ಕಲ್ಯಾಣಸ್ವಾಮಿಗೆ ಜಯವಾಗಲಿ!"

ಗೌಡ ಮತ್ತೂ ಹೇಳ್ತ್.

"ಕೊಡಗ್‌ನ ಶ್ರೀ ವೀರರಾಜೇಂದ್ರ ಮಹಾಪ್ರಭುಗೆ ಜಯವಾಗಲಿ!" ಅರಸನ ಹೆಸ್ರ್ ಹೇಳಿಕೆ ಕೆಲವು ಜನ ಪುರ್ಡಿದಂಗೆ ಕಂಡತ್. ಹಿಂಗಾಗಿ 'ಜಯವಾಗಲಿ!' ಘೋಷ ಒಂದೇ ರೀತಿ ಇತ್ಲೆ.

ರಾಮಗೌಡ ಗಟ್ಟಿಯಾಗಿ ಹೇಳ್ತ್.

"ಎಲ್ಲಿ ಆರತಿ ಬಟ್ಲ್"

ನಾಚಿಕೆಂದ ಹಿಂದೆ ಮುಂದೆ ಬಂದ್‌ಕಂಡ್ ಇಬ್ಬರ್ ಮುತ್ತೈದೆಗ ಆರತಿ ಬೆಳಗಿದೊ.

ಮತ್ತೆ ಗೌಡ ಜನಗಳಿಗೆ ಹೇಳ್ತ್.

"ಇನ್ನ್ ಎಲ್ಲಾ ನಿಮ್ಮ ನಿಮ್ಮ ಮನೆಗಳಿಗೆ ಹೋಗಿ"

"ಗುಂಪು ಆಚೀಚೆ ಹೋತೇ ಹೊರ್ತು, ಜನ ಯಾರೂ ಹೊರ್ಡುವ ಲಕ್ಷಣ ಇತ್ಲೆ.

"ಕುದ್ರೆಗಳಿಗೆ ಬೊಚ್ಚಿರ್ದು' ನಂಜಯ್ಯ ಹೇಳ್ತ್.

"ಇಲ್ಲೆ, ಓ ಇಲ್ಲೆ  ಉಟ್ಟು ಮನೆ"

"ಹಂಗಾರೆ ಪೋಯಿ"

"ಸ್ವಾಮಿ ಒಬ್ಬರಾದ್ರ್ ನನ್ನ ಕುದ್ರೆ ಮೇಲೆ ಕುದ್ದಿರ್ಲಿ."

"ಒಂದೂ ಬೇಡ ಗೌಡ್ರೆ. ನಾನ್ ನಡಿಯಕೆ ಆಗದ್‌ಂತ ಉಟ್ಟೆ ರಾಮಗೌಡ ವಾದಿಸಿತ್ಲೆ.

ಅವನ ಕಡೆಯವನೊಬ್ಬ ಕೇಳ್ತ್.

"ಪೂರ ಕತ್ತಲಾತ್, ದೀಪ ತರಕ?"

ಆ ಪ್ರಶ್ನೆಗೆ ಸೀದ ಉತ್ತರ ಕೊಡದೆ ರಾಮಗೌಡ ಕಲ್ಯಾಣಸ್ವಾಮಿಯ ಮೋರೆ ನೋಡ್ತ್.

"ದೀವಟಿಗೆ ಎಂತಕೆ ಗೌಡ್ರೆ? ನಡ್ದೇ ಪೋಯಿ ಮನೆಗೆ. ಕುದುರೆಗಳ ಕರ್ಕಂಡ್ ಮೇಯ್ಸಿಕೆ. ಒಬ್ಬಂಗೆ ಹೇಳಿ ಗೌಡ, ಕುಡಿಯ ಸಹೋದರರ ಒಮ್ಮೆ ನೋಡಿ ನಗಾಡ್ತ್."

"ನಿಮ್ಮ ಕುದುರೆಗ ಲಾಯ್ಕ ಆರಾಮಲಿ ಉಟ್ಟು. ನೀವು ಬನ್ನಿ" ಗೌಡನು ಮಾಚಯ್ಯನು ಕುದುರೆ ಹತ್ತಿ ಬಾಕನ ಅದ್ ನಮ್ಮದಲ್ಲಂತ ನೋಡ್ದ ಕರ್ತು ಮತ್ತೆ ಚೆಟ್ಟಿ ಗೌಡನ ಮಾತ್ ಕೇಳಿ ನೆಗಾಡ್ಯೊ.

"ಕಾಳಪ್ಪ ಎಲ್ಲಿ ಮಾಚಯ್ಯ?" ಅಮರ ಸುಳ್ಯಕ್ಕೆ ಹಿಂದೆ ಕಳ್ಸಿದ್ದ ಇನ್ನೊಬ್ಬ ಧೂತನ ನೆಂಪಾಗಿ ಕಲ್ಯಾಣಸ್ವಾಮಿ ಕೇಳ್ತ್.

ಉತ್ತರ ಬಾಕೆ ಮುಂದೆನೆ ಅವ ಇನ್ನೊಂದು ಪ್ರಶ್ನೆ ಕೇಳ್ತ್.

"ನಮ್ಮ ತಂಡ ಬಂದ್ ಸೇರ್ತ ಗೌಡ್ರೆ?"

ಅವೆಲ್ಲ ಹೋಕಂಡ್ ಇದ್ದ ಹಂಗೆ ರಾಮಗೌಡ ಹೇಳ್ತ್.

ಓಹೋ? ಇಂದ್ ಬೊಳ್ಪಿಗೆ ಬಂದೊ. ಅವರ ನೋಡಿಕಣುವ ಜವಬ್ದಾರಿ ಕಾಳಪ್ಪನವ್ಕೆ ಕೊಟ್ಟಳೆ. ಉಂಡ್ದ್ದ್ ಮಲ್ಗಿದವು ಈಗ ಎದ್ದಿರುವ ಕಂಡದೆ.

"ಹಂಗಾರೆ ನಾವುಗೆಸ ಊಟ ಕೊಟ್ಟ್ ಮಲ್ಗಿಸಿರೆನಾ ಈಗ? ನಂಜಯ್ಯ ಕುಶಾಲಿಗೆ ಹೇಳ್ತ್."

"ಅಲ್ಲದೆ ಮತ್ತೆಂತ?" ರಾಮಗೌಡ ಹೇಳ್ತ್.

* * * * *

ಅದ್ ನಿಜ ಆಗಿತ್ಲೆ. ಉಂಡ ಮೇಲೆ ಅವ್ಕೆ ನಿದ್ದೆ ಬಾತ್ಲೆ. ರಾಮಗೌಡನ ಮನೆ ಮುಂದೆ ಅಂಗಳಲಿ ದೊಡ್ಡ ಚಪ್ಪರ ಹಾಕಿದ್ಯೊ. "ಇದ್ ಏಕೆ?" ಕಲ್ಯಾಣಸ್ವಾಮಿ ಕೇಳ್ತ್.

"ಸ್ವಾಮಿಯವು ಕೋಪ ಮಾಡಿಕೆ ಆಗದ್‌ಂತ ಸಣ್ಣ ಸ್ವರಲಿ ಹೇಳ್ತ್. ನನ್ನ ಮಂಜಂಗೆ ಮೊದುವೆಂತ ಪುಕಾರು ಹುಟ್ಟಿಸ್ಯೊಳೆ. ಇಷ್ಟ್ ಜನ ನೆಂಟ್ರ್‌ಗ, ನೀವೆಲ್ಲ ಬಾಕನ ಚಪ್ಪರ ಇಲ್ಲರೆ ಹೆಂಗೆ? ಮೆರವಣಿಗೆ ಹೊರ್ಡುವ ಜಾಗೆಗೆ ಇಷ್ಟಾದ್ರ್ ಶೋಭೆ ಬೇಡನಾ?"

ರಾಮಗೌಡನ ಪ್ರೀತಿನ ಮಾತ್‌ಕತೆ, ಒಳ್ಳೆ ಮನ್ಸ್, ದೊಡ್ಡ ಮಟ್ಟಲಿ ಯೋಜನೆಗಳ ಕಾರ್ಯಗತಗೊಳ್ಸುದು ಇದೆಲ್ಲದರ ಆಲೋಚಿಸಿ ಕಲ್ಯಾಣಸ್ವಾಮಿ ತಲೆದೂಗಿತ್.

ಮೂರು ದಿನಗಳ ಅಂತರಲಿ ಹೊರ್ಟುರುಸ ಎಷ್ಟೋ ವರ್ಷ ಆದವರಂಗೆ ಕರಿಯಪ್ಪನು ಅವನೊಟ್ಟಿಗೆ ಬಂದವು ಊರವರ ಮಾತಾಡ್ಸಿದೋ.

ಚೆಟ್ಟಿಯು, ಕರ್ತುವು ಕುದುರೆಗಳ ಕೊಂಡಾಟ ಮಾಡಿ ಬಂದೋ. ಮೀಯಕೆ ಬಿಸಿನೀರ್ ಆಗಿತ್ತ್. ಕೆಲ್ಸದವ್ ಪಿಜಿನ್‌ಗಳಂಗೆ ಬಾರಿ ಶಿಸ್ತ್‌ಲಿ ಕೆಲ್ಸ ಮಾಡ್ತಿದ್ದೊ.

ಕಲ್ಯಾಣಸ್ವಾಮಿನೊಟ್ಟಿಗೆ ಕಾಳಪ್ಪ ಮಾತಾಡ್ದುರ ನೋಡಿ ರಾಮಗೌಡ ಅತ್ತ ಹೋಗಿ ಹೇಳ್ತ್.

"ಕಾಳಪ್ಪನವೀಗ ಸುಳ್ಯದವೇ ಆಗ್ಯೊಳ ಅವ್ಕೆ ಗೂಡೆ ಕೊಡಿಕೆನು ತಯಾರೊಳ ನಮ್ಮ ಜನ!"

ಆ ಮಾತ್ ಸದ್ದ್ ಗದ್ಲ, ಜಂಬರ ಸಾಧಾರಣವಾಗಿ ಅದ್ ಮೊದುವೆ ಮನೆ ಅಲ್ಲಂತ ಹೇಳ್ದು ಹೆಂಗೆ?

ಆದರೂ ಎಲ್ಲರ ನಂಬಿಸಿಕೆ ಸಾಧ್ಯ ಇತ್ಲೆ. ಆ ಏರ್ಪಾಡ್ ಬಂದವ್ಕೆ ಮೀದ್ ಉಂಡೆಲ್ಲ ಆದಮೇಲೆ ರಾಮಗೌಡ ಪಿಸ್‌ಪಿಸ್ ಹೇಳ್ತ್.

"ಈಗಿಂದೀಗಲೇ ಸರಿಮಾಡಕಾದ ಒಂದು ಸಮಸ್ಯೆ ಉಟ್ಟು.

"ಅದು ಎಂತ ವಿಷ್ಯ?" ಕಲ್ಯಾಣಸ್ವಾಮಿ ಕೇಳ್ತ್.

ಬನ್ನಿ ಒಳಗೆ ಕೋಂಬ್ರೆಗೆ ಪೋಯಿ.

ಅಲ್ಲಿ ಮುಖ್ಯಪಟ್ಟವರ ಸಮಾಲೋಚನೆ ಆತ್. ಅದಿಕ್ಕೆ ಮುಂದೆನೆ ಪರಿಸ್ಥಿತಿನ ಪರಿಚಯ ರಾಮಗೌಡ ಮಾಡಿಕೊಡ್ತ್.

ಬಂಡಾಯ ಏಳಿಕೆ ನಿಗದಿ ಮಾಡ್ದ ಯುಗಾದಿಗೆ ಇನ್ನ್ ಎಂಟ್ ದಿನ ಬಾಕಿ ಇತ್ತ್. ಆದರೆ ಯೋಜನೆ ಮಾಡ್ದ ಗುಟ್ಟು ಹಂಞ ರಟ್ಟಾಗಿತ್ತ್. ಅದರ ಸುಳಿವು ಸಿಕ್ಕಿದ್ದ ರಾಮಪ್ಪಯ್ಯ ಓಲೆಕಾರರ ಮಂಗಳೂರಿಗು, ಮಡಿಕೇರಿಗು ಅಟ್ಟಿತ್ತ್. ಆದರೆ ಅಣ್ಣಿಗೌಡನ ಸಾಹಸಂದ ಇಬ್ಬರು ಓಲೆಕಾರರ್ ರಾಮಗೌಡನ ಜನರ ಕೈಗೆ ಸಿಕ್ಕಿ ಬಿದ್ದೊ. ಅದ್ರ ತಿಳ್ದ್ ಕಿಡಿಯಾದ ರಾಮಪಯ್ಯ ಕುದ್ರೆ ಏರಿ ಸುಳ್ಯಕ್ಕೆ ಬಂದ್ ಹೂಂಕರಿಸಿ ಗರ್ಜಿಸಿತ್. ನಂಗೆ ಎದ್ರಾಗಿ, ಇಲ್ಲರೆ ಕುಂಪಣಿ ಸರಕಾರಕ್ಕೆ ಎದ್ರಾಗಿ ಯಾರಾದ್ರ್ ಉಸಿರೆತ್ತಿರೆ ಅಲ್ಲಿಯೆ ಕತ್ರಿಸಿ ನಾಯಿನರಿಗಳಿಗೆ ಬಿಸಾಡ್ದಾಗಿ ಹೆದ್ರಿಸಿತ್. ರಾಮಗೌಡನ ಮನೆಗೆ ಬಾರದಿದ್ರುಸ ದೂರಲೆ ನಿಂತ್ 'ಮೊದುವೆಗೆ' ತಯಾರಾದ ಚಪ್ಪರನ ನೋಡ್ತ್ ಯೋಜನೆ ಕಾರ್ಯಕೆ ಬಾವ ಮುಂದೆನೆ ಪರಿಸ್ಥಿತಿ ವಿಕೋಪಕ್ಕೆ ಹೋದು ಬೇಡಾಂತ ರಾಮಗೌಡ ಅವನ ಕೆಣಕಿತ್ಲೆ. ಅಣ್ಣಿಗೌಡರ ಎದ್ರು ಬಾತ್ಲೆ. ರಾಮಪ್ಪಯ್ಯ ಯಾವುದರ ಬಗ್ಗೆಸ ಸರ್ಯಾಗೆ ಗೊತ್ತಾಗದೆ ಅಟ್ಲೂರಿಗೆ ಹೋತ್.

ಆದರುಸ ಅವ ಸುಮ್ಮನೆ ಕುದ್ರದೆ ಮಂಗ್ಳೂರ್ನ ಕಲೆಕ್ಟರ್‌ಗೆ ಮತ್ತೊಮ್ಮೆ ಸುದ್ದಿ ಕಳ್ಸಿದಕ್ಕೆ ಆಧಾರ ಸಿಕ್ಕಿತ್.

ಅದರ್ನೆಲ್ಲ ಕೇಳಿ, ಅಣ್ಣಿಗೌಡನ ಮಾತ್‌ಗಳಿಗೆಸ ಕಿವಿಗೊಟ್ಟು ಕಲ್ಯಾಣಸ್ವಾಮಿ ಹೇಳ್ತ್.

"ಇದ್ ದೊಡ್ಡ ವಿಷ್ಯ ಅಲ್ಲ ರಾಮಗೌಡರೇ. ಯುಗಾದಿಂದ ಮುಂದೆನೆ ನಾವು ಕಣಕ್ಕೆ ಇಳಿಯಕು ಅಂತ ದೇವರಿಚ್ಛೆ ಆಗಿದ್ದರೆ ಹಂಗೆ ಆಗಲಿ".

"ಶುಭಸ್ಯ ಶೀಘ್ರಂ' ಅಂತ ಹೇಳುವೆಲಾ ಹಂಗೆ"

ನಮ್ಮ ತಯಾರಿ ಪೂರ್ಣ ಆಗಿಟಲಾ?"

"ಆಗಿಟು"

ಒಳ್ಳೆದ್‌ಂತ ಹೇಳಿ ನಂಜಯ್ಯನ ಮತ್ತೆ ಉಳ್ದವರ ಕಡೆ ನೋಡಿ ಕಲ್ಯಾಣಸ್ವಾಮಿ ಕೇಳ್ತ್.

"ಏನ್ ಹೇಳ್ರೆ?"

ತಡಮಾಡದೆ ದಂಡಯಾತ್ರೆ ಹೋಕುಂತ ಗೌಡ ಅಭಿಪ್ರಾಯನಾ?"

ನಂಜಯ್ಯ ಪ್ರಶ್ನೆ ಮಾಡ್ತ್.

ರಾಮಗೌಡ, ಹೇಳ್ತ್ : "ಹೌದು"

"ಆದು, ಆ ರಾಮಪ್ಪಯ್ಯನ–"

"ಆ ವಿಷ್ಯ ನಂಗೆ ಬುಡಿ. ನಾಳೆ ಸಾಯಂಕಾಲದೊಳಗೆ ಅವನ ಕತೆ ಮುಗ್ದದೆ." ಅಣ್ಣಿಗೌಡ ಉದ್ವೇಗಲಿ ಹೇಳ್ತ್.

"ನಿಮ್ಮ ವಿಷ್ಯ ರಾಮಗೌಡ್ರು ಆಗಲೆ ಹೇಳ್ದೊ ಅಣ್ಣಿಗೌಡ್ರೆ. ಇದ್ ನಿಮ್ಮ ಸ್ವಂತ ವಿಷಯ ಅಲ್ಲ. ತೊಂದರೆ ಇಡೀ ದೇಶಕ್ಕೆ ಬಂದುಟು. ಆದು ರಾಮಪ್ಪಯ್ಯನ ವಿಷ್ಯ ನೀವುಗೆ ಬುಟ್ಟವೆ. ಆದ್ರೆ ನೀವೊಬ್ಬನೆ ಈ ಕೆಲಸ ಮಾಡಿಕೆ ಆಗದ್. ನಮ್ಮ ಕೂಚುಲಿ ಇರ್ವ ಸರದಾರನಸ ಕರ್ಕಂಡ್ ಹೋಕು.

ಒಂದ್ ನರಭಕ್ಷಕ ಹುಲಿನ ಬೇಟೆಯಾಡ್ತೊಳ ಅಂತ ನೆನ್ಸಿಕಂಡ್ ಅವನ ಮುಗ್ಸಿ, ಸರಿನಾ?"

ಆ ಮಾತ್ ಸರಿ. ಎಲ್ಲವು ಒಪ್ಪಿದೊ.

ಕಲ್ಯಾಣಸ್ವಾಮಿ ಕೇಳ್ತ್.

"ಹಂಗಾರೆ ನಾಳೆ ಸಾಯಂಕಾಲನೆ ಅಮರಸುಳ್ಯಲಿ ಸ್ವಾತಂತ್ರ್ಯ ಘೋಷಣೆ ಅಲಾ?"

ಎಲ್ಲರ ಪರವಾಗಿ ಹೇಳುವಂಗೆ ರಾಮಗೌಡ "ಹೌದು" ಹೇಳ್ತ್.

## ೧೪

"ಏನ್ ಕೊಬ್ಬು! ಹಾಂಕಾರ! ಹುಂ"

ಬಲಪುಡೆನ ಗೋಡೆಗೊರಗಿ ಕುದ್ದ ರಾಮಪ್ಪಯ್ಯ ಎಡಪುಡೆಗೆ ತಿರ್ಗಿ ಹಲ್ಲ್‌ಕಚ್ಚಿತ್. ಮೀಸೆನ ಕುಣ್ಸಿತ್, ಮುಷ್ಠಿ ಹಿಡ್ದ್ ತಲೆದಿಂಬುನ ಗುದ್ದಿತ್.

ಕೈ ಮುಗ್ದ್ ಬಗ್ಗಿ ನಿಂತ ಕೆಲ್ಸದವ ಹೇಳ್ತ್.

"ರಾಮಗೌಡನ ಮನೆಲಿ ಅವರ್ದೆಲ್ಲ ತುಂಬು. ಎಲ್ಲವು ಕೊಡಗ್‌ನ ರಾಜನ ಕಡೆಯವು. ಕಾಶಿಂದ ರಾಜರ್ ವಾಪಾಸು ಬಂದವೆಗಡ. ಸುಳ್ಯಕ್ಕೆ ಬಂದವೆಗಡ."

"ಲೊಟ್ಟೆ! ಹಸಿಲೊಟ್ಟೆ! ಕಾಶಿಗೆ ಹೋದವ ಬಾದುಂತೇಳ್ರೆ ಏನ್? ನಂಗೆ ಗೊತ್ಲೆನಾ? ಇಷ್ಟೊತ್ತಿಗೆ ಇಂಗ್ಲೀಷ್‌ಗ ಅವನ ಕತೆ ಮುಗ್ಸಿದ್ದವೆ.

"ಅಣ್ಣಿಗೌಡ ಅಂತು ಎಂಥ ಮಾತ್ ಹೇಳ್ತ್!"

"ಏನ್ ಹೇಳ್ತ್ ಅವ?"

"ಹೇಳಿಕೆ ಹೆದ್ರಿಕೆ ಆದೆ"

"ಬೊಗ್ಳು! ಇದ್ದದ್ ಇದ್ದ ಹಂಗೆ ಬೊಗಳ್!

ಆ... ಆ ರಾಮಪ್ಪಯ್ಯಂಗೆ ಧೈರ್ಯ ಇದ್ದರೆ ಸುಳ್ಯಕ್ಕೊಮ್ಮೆ ಬಂದ್ ಹೋಗುಂತ ಹೇಳ್‌ಂತ ಹೇಳ್ತ್"

"ಹಂಗೆ ಹೇಳ್ತಾ?"

"ಇನ್ನ್ ಏನೇನೋ ಪೆದಂಬು ಮಾತಾಡ್ತ್"

"ಅವನ ನಾಲಿಗೆ ಸೀಳ್ನೆ! ಅಂದೇ ಅವನ ಯಮಪುರಿಗೆ ಕಳ್ಸಕಾಯ್ತ್"

ಮೊನ್ನೆ ಬಂದಿದ್ದರಿ ಅಲಾ, ಹಂಗೆ ಇಂದ್ ಕೂಡ ನೀವು ಸುಳ್ಯಕ್ಕೆ ಬಾರದೆ ಇದ್ದರೆ, ಜನ ಹೆದ್ರಿಕಂಡ್ ಓಡಿಹೋದ್‌ಂತ ಭಾವಿಸುವಂತ ಹೇಳ್ತ್."

"ಅಲ್ಲಿಗೆ ಹೋಗುವ ಧೈರ್ಯ ನೀವುಗೆ ಇಲ್ಲದರೆ ಅವನೇ ಇಲ್ಲಿಗೆ ಬಂದದೆ ಗಡ"

ಇಲ್ಲಿಗೆನಾ? ಇದೇನ್ ಹಟ್ಟಿಂತ ನೆನ್ಸಿಟಾ? ಇದ್ 'ಹತ್ತೂರ ದೊರೆನ ಅರಮನೆ'.

"ಅಣ್ಣಿಗೌಡ ಇದರಸ ಹೇಳ್ತ್. 'ಆ ಹತ್ತೂರ ದೊರೆನ ಮೋರೆ ಮೇಲೆ ಮೀಸೆ ಇದ್ದದ್ದೆ ಆದರೆ ಇಂದೇ ಸುಳ್ಯಕ್ಕೆ ಬರಲಿಂತ ಹೇಳ್ತ್.

ರಾಮಪ್ಪಯ್ಯ ಕುದ್ದ ಮಂಚಂದ ಹಾರಿ ಕಿರ್‍ಚಿ ಹೇಳ್ತ್.

"ಆ ಹುಳನ ಇಂದೇ ಮುಗ್ಸದಿದ್ದರೆ ನಾ ರಾಮಪ್ಪಯ್ಯನೆ ಅಲ್ಲ."

"ಕೆಲ್ಸದವ, ಹಿಂದೆ ಹಿಂದೆ ಹೋತ್."

"ಹೋಗಾಚೆ! ಅಷ್ಟ್ ಹೇಳ್ದ ನೀಚನ ಹಂಗೆ ಬುಟ್ಟು ಬಂದೊಳಲ! ಹೆದರ್‌ಪುಕ್ಕ!"

ಬದ್ಕಿರೆ ಸಾಕ್‌ಂತ ಬಿಡಾರಂದ ಹೊರಗೆ ಬಾತ್. ಏನಾತ್‌ಂತ ತಿಳ್ಕನಿಕೆ ನಿಂತ ಉಳ್ದವರತ್ರ ಅಂಬೆರ್ಪುಲಿ ಹೋತ್.

ಬಂಡಾಯದ ಸುದ್ದಿ ಅವ್ಕೆಲ್ಲ ಹಂಞಂಞ ಗೊತ್ತಾಗಿತ್ತ್. ತರತರದ ವಿಚಾರಗ ಅವ್ರ ಮನ್ಸ್‌ಲಿ ಮೂಡ್ದೊ. ಆದರೆ ಬಾಯಿಬುಟ್ಟು ಹೇಳ್ವ ಸಾಹಸ ಮಾತ್ರ ಯಾರ್ ಮಾಡ್ತ್‌ಲೆ.

ಅವಮಾನ ಆದ ರಾಮಪ್ಪಯ್ಯ, ಸುಬ್ಬಯ್ಯ ಮಡ್ಚಿ ತಂದ ಎಲೆಯಡಿಕೆನ ಆಚೆ ದೂಡ್ತ್.

ಹೆದ್ರಿ ಹೋದ ಹೆಣ್ಣ್ ಭಾಗೀರಥಿ ಹೆದ್ರಿ ಹೆದ್ರಿ ಗಂಡನತ್ರ ಬಾಕೆ ನೋಡ್ತ್.

ನಡಿ ಒಳಗೆ! ಹೆಂಗಸ್ರ ಜಾಗ ಅಡಿಗೆ ಮನೆಲಿ!" ಬೊಯ್ತ್ ಹೊರಗಿದ್ದ ಕೆಲ್ಸದವ್ಕೆ ಕುದುರೆ ತೆಗೆಯನಿಂತ ಹೇಳ್ತ್.

ಉದ್ದದ ಅಂಗಿ ಹಾಕಿ, ಜೋಡು ಮೆಟ್ಟಿ, ಕತ್ತಿನ ಸೊಂಟಕ್ಕೆ ಸಿಕ್ಸಿ ತಲೆ ಸರಿ ಇಲ್ಲದವರಂಗೆ ಮಾಡಿಕಂಡ್ ಮನೆಂದ ಹೊರ್‍ಟ್ ಸುಳ್ಯದ ಕಡೆಗೆ ಹೊರ್‍ಟತ್.

ಆ ದಾರಿಲಿ ಜನಂಗ ಸುಳ್ಯ ಕಡೆಂದ ಬರ್‍ತಿದ್ದೊ. ಅವರೊಟ್ಟಿಗೆ ಅಣ್ಣಿಗೌಡ ಮತ್ತೆ ಮೂವರಿದ್ದೊ. ಕುದುರೆ ಎದ್ರುಂದ ಬರ್‍ತಿದ್ದದ್ದ್ ಅವ್ಕೆ ಕಂಡತ್.

ಅಣ್ಣಿಗೌಡ ಅಂಬೆರ್ಪುಲಿ ಹೇಳ್ತ್.

"ಅರಬ್ಬಿ ಕುದ್ರೆ! ಅಂದರೆ ರಾಮಪಯ್ಯ"

"ತಡ್ದ್ ನಿಲ್ಸಮ" ಕರಿಯಪ್ಪ ಹೇಳ್ತ್.

"ಹೂಂ"

ಅಗಲ ಕಡಿಮೆ ಇದ್ದ ಆ ದಾರಿಗೆ ನಾಕ್ ಜನಾನು ಅಡ್ಡ ನಿಂತೊ ಕರಿಯಪ್ಪ ಕೇಳ್ತ್.

ಹಂಗೆ ನಿತ್ತದ್ ಯಾರ್‌ಂತ ಸುರುಗೆ ರಾಮಪ್ಪಯ್ಯಂಗೆ ಗೊತ್ತಾತ್ಲೆ. ಕುದುರೆನ ಓಡ್ಸಿಕಂಡೇ ಮುಂದೆ ಹೋಕುಂತ ಅವ ನೆನ್ಸಿತ್. ಗುರ್‍ತ ಇಲ್ಲದವೇ ಮುಂದೆ ರಾಮಪ್ಪಯ್ಯನ ಕಣ್ಣಿಗೆ ಬಿದ್ದೊ. ಮತ್ತೆ ಅಣ್ಣಿಗೌಡನ ಅವ ನೋಡ್ದ್. ಅಣ್ಣಿಗೌಡ!

ರಾಮಪ್ಯನ ಪಿತ್ತ ಕೆರಳಿತ್.

ಕಡಿವಾಣನ ಎಳ್ದ್, ಕುದ್ರೆಂದ ಹಾರ್ತ್. ಅಣ್ಣಿಗೌಡನ ಮೇಲೆ ಬೀಳುವಂಗೆ ಬಂದ್ ಕತ್ತಿ ತೆಗ್ತ್.

ಕಣ್ಣ್ ಮುಚ್ಚಿ ತೆಗಿಯಕಾಕನ ಅಣ್ಣಿಗೌಡನ ಖಡ್ಗ ಗಾಳಿನ ಸೀಳಿ ರಾಮಪಯ್ಯನ ಬಲಕೈ ಕತ್ರ್‌ಸಿತ್.

ಗಾಯ ಆದ ಸಿಂಹದ ರಣಗರ್ಜನೆನಂಗಿತ್ತ್ ರಾಮಪ್ಪಯ್ಯನ ಬೊಬ್ಬೆ.

ರಕ್ತ ಸುರ್ಕಂಡಿದ್ದ ಮೊಂಡು ಕೈನ ಕುಣ್ಸಿಕಂಡ್ ಅಣ್ಣಿ ಗೌಡನತ್ರ ನುಗ್ಗಿತ್ತ್ ರಾಮಪ್ಪಯ್ಯ.

ತುಟಿಕಚ್ಚಿಂಡ್ ಅಣ್ಣಿಗೌಡನೋ ಯಮಭಯಂಕರ ಆಗಿತ್ತ್. ಕುತ್ತಿಗೆಗೆಂತ ಬೀಸಿದ ಕತ್ತಿ ಅವನೆದೆಗೆ ತಾಗಿತ್.

'ಆಹ' ಹೇಳಿಕಂಡ್ ರಾಮಪ್ಪಯ್ಯ ಕೆಳಗೆ ಉರ್ಳಿತ್.

'ಹೇಡಿ'! ಧೈರ್ಯ ಇದ್ದಿದ್ದರೆ ಯುದ್ಧ ಮಾಡಿ ಸೋಲ್ಸಕಾಯ್ತ್. ಅಣ್ಣಿಗೌಡನ ಕತ್ತಿ ಅಂಗಾತ ಬಿದ್ದವನ ಎದೆಗುಂಡಿಗೆನ ಒಟ್ಟೆ ಮಾಡ್ತ್.

ಒಂದ್ ಮಾತ್ ಗೌಡ ಹೇಳ್ತ್ : "ಮನುಷ್ಯನೊಟ್ಟಿಗೆ ಆದರೆ ಯುದ್ಧ. ನೀ ಕಾಡ್ ಪ್ರಾಣಿ. ಕ್ರೂರ ಮೃಗನ ಕೊಲ್ಲುದು ಹಿಂಗೆನೆ–

ಕರಿಯಪ್ಪ ಹೇಳ್ತ್ : "ಕುದುರೆ ಹಿಡ್ಕಣಿ, ಕುದುರೇನ!"

ಹೆದರ್ದ ಕುದ್ರೆ ಪುನಃ ತಿರ್ಗಿ ಅಟ್ಲೂರಿನಕಡೆಗೆ ಓಡ್ತ್.

ಅಣ್ಣಿಗೌಡ ಬಿದ್ದವನ ದೇಹಂದ ಕತ್ತಿ ತೆಗ್ದಂಗೆ ರಾಮಪ್ಪಯ್ಯನ ಕತೆ ಮುಗ್ತ್.

ಕರಿಯಪ್ಪ ಕೇಳ್ತ್ – "ಎಲ್ಲಿಗೆ ಪೋಯಿ ಗೌಡ್ರೆ? ವಾಪಾಸು ಸುಳ್ಯಕ್ಕೆನಾ? ಅಲ್ಲ ಅಟ್ಲೂರಿಗಾ? ಪಾಪದ ಜನಗಳಿಗೆ ಕಂಟಕ ಆಗಿದ್ದ ಮೊನ್ಸ ಸತ್ತ್ ಹೋತ್. 'ನಡಿಯನಿ ಅಟ್ಲೂರ್‌ವರ್ಗೆ ಹೋಗಿ ವಾಪಾಸು ಬರಮ ಹೆಂಗು ಸೂಚನೆ ಕೊಟ್ಟವೆಂತ ಹೇಳ್ಯೊಳ ಅಲ?

... ಓಡಿ ಬಂದ ಕುದ್ರೆ ಆಗಲೇ ಭಾಗೀರಥಿನ ಗಾಬರಿಗೆ ಗುರಿಮಾಡ್ತ್.

ಅವ್ಳ್ ಜಾಲ್‌ಲಿ ನಿಂತ್ ಕೆಲ್ಸದವ್ರ ಮರ್ಲ್ ಕರ್ದ್ ಬೊಬ್ಬೆ ಹಾಕಿತ್ತ್. ಹೋಗಿಯ? ಹೋಗಿಯಪ್ಪಾ! ನಿಮ್ಮ ದನಿಗಳಿಗೆ ಏನಾತ್ ನೋಡಿ. ಸುಬ್ಬಯ್ಯನ? ಗುರುವನ? ಫಕೀರನ? ತುಕ್ರನ? ಮೊಸುಗುವೆನ ಒಬ್ಬ ಆದ್ರ್?

ಏನ್ ನಡ್ದಿರ್ದುಂತ ಅವು ಆಗಲೇ ಗ್ರಹಿಸಿದೊ. ಭಾಗೀರಥಿಯ ಮರ್ದ್ವಾಟ ಜಾಸ್ತಿ ಆದೆಂತ ಆ ಜನಗ ಅಲ್ಲಿಂದ ಜಾಗ ಖಾಲಿ ಮಾಡ್ದೊ ಅಷ್ಟೆ. ಆದ್ರೆ ಸುಳ್ಯದ ಕಡೆಗೆ ಮಾತ್ರ ಹೋತ್ಲೆ.

ಅಣ್ಣಿಗೌಡನ ಮುಂದೆ ನಿಂತ್ ಬಾಕನ ಅವರ ಸಂಸಯ ಗಟ್ಟಿ ಆತ್. ಸಮಸ್ಯೆನ ಎದ್ರ್‌ಸಿಕೆ ಕರಿಯಪ್ಪ ಸಿದ್ಧ ಆಗಿತ್ತ್. ಆದರೆ ಅಲ್ಲಿ ಸಿಕ್ಕಿದ್ ಉದ್ದಂಡ ನಮಸ್ಕಾರ. ಕೇಳ್ದ್ ಶರಣಾದ ಧ್ವನಿ.

ಏನಾತ್‌ಂತ ಸರಿಯಾಗಿ ಗೊತ್ತಾಗದಿದ್ರು ಗಂಡಂಗೆ ಅಪಾಯ ಆಗಿಟುಂತ ಭಾಗೀರಥಿಗೆ ಮನವರಿಕೆಯಾತ್.

ಅಯ್ಯೋ ಯಾರೂ ಇಲ್ಲೆನಾ? ಹಿಂಗಾದೆಂತ ನಂಗೆ ಗೊತ್ತಿತ್ತ್. ಹಿಂಗೆಲ್ಲಾ ಪರ್‌ಚಿಕಂಡ್ ಹೇಳ್ತ್.

ಅಣ್ಣಿಗೌಡ ಮೂವರ ಕರ್ದ್ ಹೇಳ್ತ್.

ಈ ಅಮ್ಮನ ಕರ್ಕಂಡ್ ಸುಳ್ಯ ಕಡೆ ಹೋಗಿ. ಇವರ ಗಂಡ ದಾರೀಲಿ ಬಿದ್ದುಟು.

ಅವ ಮತ್ತೂ ಒಂದು ಮಾತ್ ಹೇಳ್ತ್.

"ಅದಾದ್ಮೇಲೆ ನಿಮ್ಮ ಬಿಡುಗಡೆ! ಅಟ್ಲೂರ್‌ನ ಮೂಲದ ದಲಿತರೆಲ್ಲಾ ಇನ್ನು ಸ್ವತಂತ್ರರು. ಎಲ್ಲವುಕೆ ಹೇಳಿಕಳ್ಸಿ. ಅವರವರ ಜಾಗೆ ಇನ್ನ್ ಅವ್‌ಕೆನೆ. ರಾಮಪ್ಪಯ್ಯ ಬರ್ಸಿಕಂಡ ಪತ್ರಗಳಿಗೆಲ್ಲಾ ಇನ್ನ್ ಕಿಚ್ಚಿ ಕೊಟ್ನೆ!

ಹೆದ್ರಿಕಂಡ್ ಮನೆಂದ ಹೊರ್ಟ ಭಾಗೀರಥಿನ ಹಿಂದೆಂದ ಮೂರ್ ಜನ ಹೋದ್ ಅಣ್ಣಿಗೌಡ ಹೇಳ್ತ್‌ಂತ ಹೊರ್ತು ರಾಮಪ್ಪಯ್ಯಂಗೆ ಬೇಕಾಗಿ ಅಲ್ಲ.

ರಾಮಪ್ಪ್ಯ ಸತ್ತ ಸುದ್ದಿ ಹಂಞ ಹೊತ್ತ್‌ಲಿ ದೂರ ದೂರದ ಮನೆಗಳಿಗೆಲ್ಲ ಹಬ್ಬಿತ್. ಹೊಟ್ಟು ಹಾರ್ಸಿಕಂಡಿದ್ದವು. ಭತ್ತ ಕುಟ್ಟವು, ದನ ಕಡ್ಸ್ ಮೇಯ್ಸವು, ಸುಳ್ಯಂದ ಬಂದ್ ಯುದ್ಧ ಸಿದ್ಧತೆಯಲ್ಲಿರುವವು ಈ ವದಂತಿನ ಬಗ್ಗೆ ಮಾತಾಡ್ತಿದ್ದೊ. ಎಲ್ಲ ಕಡೆ ಇದ್ದವು ಉಟ್ಟ ಬಟ್ಟೆಲಿ ಅಟ್ಲೂರ್‌ನ ಅರಮನೆಗೆ ಬರ್ತಿದ್ದೋ. ಆದರೆ ಆ ಸತ್ತವಂಗೆ ಯಾರೂ ಮರ್ಗ್‌ತಿತ್ಲೆ. ಅಸಮಾಧಾನದ ಉಸ್ರು ಬುಡುವವೆ ಆಗಿದ್ದೋ ಎಲ್ಲ. ರಾಮಪ್ಪಯ್ಯ ಬದ್ಕಿರಿಕಾಕನ ಅವನ ಕೆಟ್ಟ ಕೆಲ್ಸಗಳಿಗೆ ಭಾಗಿಯಾಗ್ತಿದ್ದ ಒಂದಿಬ್ಬರ್ ಕೆಟ್ಟವ್ ಮಾತ್ರ ಕಾಣೆಯಾಗಿದ್ದೊ. ಇನ್ನ್ ಕೆಲವು ಹೊಗಳ್ ಭಟರ್ ಸತ್ತವನ ದೂರಿಕಂಡ್ ತಮಿಗೆ ಬಂದಿದ್ದ ಕಳಂಕನ ಮುಚ್ಚಿಕೆ ನೋಡ್ತಿದ್ದೊ.

ಆ ಮನೆಂದ ಕರಾರ್ ಪತ್ರಗಳ, ಓಲೆಗಳ ಹೊರಗೆ ತಂದಾತ್. ಸೂರ್ಯಾಸ್ತ ಆಗ್ತಿದ್ದಂಗೆ ಆ ದಾಖಲೆಗಳಿಗೆ ಕಿಚ್ಚಿ ಕೊಟ್ಟಾತ್. ಆ ಕಿಚ್ಚಿನ ಬೊಳ್ಪುಲಿ ರೈತರ ಮೋರೆರ ಅರ್ಳಿತ್. ಯಾರೋ ಹೇಳ್ದೊ.

ಈ ಮನೆನ ಸುಡೊಕು.

ಮನೆ? ಅದರೊಳಗೆ ಭತ್ತದ ಪತಾಯಗಳಿದ್ದೊ. ಸಂಪತ್ತು ಎಲ್ಲಾ ಇತ್ತ್ ಅಣ್ಣಿಗೌಡ ಹೇಳ್ತ್.

"ಮನೆನ ಸುಡ್ದು ಬೇಡ. ನಿಮ್ಮಲ್ಲಿಯೇ ನಾಯಂಕಾಂತ ಒಬ್ಬನ ಮಾಡಿ ಯಾರ್‍ಯಾರಿಗೆ ಏನೇನು ಸಿಕ್ಕುಕೋ ಅವರ ತಕಣಿ!"

ಒಬ್ಬ ಹೇಳ್ತ್ – ನಿಮ್ಮ ಗದ್ದೆಗೆ ನೀವೆ ಬನ್ನಿ ಅಣ್ಣಿಗೌಡ್ರೆ.

"ನಾನೀಗ ಬಾದ್ಲೆ! ಆದರೆ ಹೆಣ್ಣ್‌ನ ಮಕ್ಕಳ ಕಳ್ಸಿನೆ"

ತೋಟದ ಮೂಲೆಲಿ ಮುಳಿ ಹುಲ್ಲ್‌ನ ಬಣವೆ ಇತ್ತ್. ಕುದುರೆ ಆಗಲೇ ಹಿಡ್ಕಂಡ್ ಇದ್ದ ಕರಿಯಪ್ಪನ ನೋಡಿ ಬಣವೆನ ಕಡೆ ಬೊಟ್ಟು ಮಾಡಿ ಅಣ್ಣಿಗೌಡ ಹೇಳ್ತ್.

"ಭಾವುಟ ಹಾರ್‍ಸಮನಾ? ಹತ್ತೂರ ದೊರೆ ಇನ್ನಿಲ್ಲೆ ಅಂತ ಹತ್ತೂರ ಜನಕ್ಕೆಸ ಗೊತ್ತಾಗಲಿ! ಸುಳ್ಯಕ್ಕೆ ಸುದ್ದಿ ಮುಟ್ಟಲಿ!"

"ಆದು!"

ಬಣವೆ ಉರ್‍ದ್ ಬೆಂಕಿ ಆಕಾಶ ಮುಟ್ಟ ಏರ್ತ್.

* * * * *

ಅಣ್ಣಿಗೌಡನು ಅವನ ಕೂಚುಗಳು ಒಳದಾರಿಲಿ ನಡ್ದ್ ತಲ್ಪಿಕಾನ ಇರ್ಲ್ ಆಗಿ ಆಗಲೇ ನಾಕ್ ಘಳಿಗೆ ಆಗಿತ್ತ್. ಮನೆಗಳ್ಲಿ ಜನರೇ ಇಲ್ಲದಂಗೆ ಇತ್ತ್. ಆದರೆ ಹಂಞ ದೂರಲಿ 'ಮದುವೆ'ಗೆಂತ ರಾಮಗೌಡ ಹಾಕ್ಸಿದ್ದ ಚಪ್ಪರಲಿ ಜನಜಾತ್ರೆನಂಗೆ ಸೇರಿದ್ದೊ.

ಸೂಟೆಗ ಸಾಲಾಗಿ ಉರ್‍ಕಂಡ್ ಇತ್ತ್. ಒಬ್ಬೊಬ್ಬರದ್ದ್ ಒಂದೊಂದು ಬಗೆನ ಬಟ್ಟೆಗ. ಅಡ್ಡಪಂಚೆ, ಕಂಬಯಿ ಹಾಕಿದವು, ದೊಗಳೆ ಅಂಗಿ, ಮುಂಡಾಸು, ಹೆಗ್‌ಲ್‌ಗೆ ಬೈರಾಸ್, ಕೆಲವು ಜನ ಬರಿಮೈಲಿ ಖುಷಿನ ಮಾತ್‌ಕತೆ ಅಲ್ಲಿತ್ತೆ. ಚಪ್ಪರದಡಿಲಿ ಒಂದು ಮೂಲೆಲಿ ಮಂಚ ಇಸಿ ಅದರ ಮೇಲೆ ಕೆಂಪು ರೇಷ್ಮೆ ಬಟ್ಟೆ ಹಾಕಿದ್ದೊ. ಒರಗುವ ದಿಂಬುಗ ಇತ್ತ್. ನೊಡುಲಿ ಉದ್ದಕ್ಕೆ ದಾರಿಬುಟ್ಟು ಎರಡ್ ಕಡೆ ಜನಗ ಒತ್ತಿಕಂಡ್ ನಿಂತಿದ್ದೊ. ಎಲ್ಲವು ಮಂಚದ ಕಡೆಗೆ, ಒಂದರ ಹಿಂದೆ ಇದ್ದ ರಾಮಗೌಡನ ಮನೆ ಬಾಗ್ಲ್ ಕಡೆ ನೋಡ್ತಿದ್ದೊ.

ಅಣ್ಣಿಗೌಡ ಬಂದ ಸುದ್ದಿನ ಒಬ್ಬ ಒಳಗೆ ತಕಂಡ್ ಹೋತ್. ಸೇರ್‍ದ ಜನಂಗೆಲ್ಲ ಕುತ್ತಿಗೆ ಎತ್ತಿ ಮಹಾದ್ವಾರನ ನೋಡ್ತಿದ್ದೊ.

ಗುಸುಗುಸುಂತ ಎಲ್ಲವು ಮಾತಾಡಿಕಣ್ತಿದ್ದೊ.

"ಅಣ್ಣಿಗೌಡ ಬಾತ್! ಅಣ್ಣಿಗೌಡ ಬಂದೋ!

ಧೈರ್ಯಲಿ ಹೆಜ್ಜೆ ಇಸಿಕಂಡ್, ಶಾಂತ ಮುಖಲಿ ಅಣ್ಣಿಗೌಡ ಮಂಚದವರೆಗೆ ನಡ್ದ್ ಬಾತ್. ಕೊಡಗರಂಗೆ ತಲೆಗೆ ಚೌಕ ಕಟ್ಟಿ, ಕೋವಿ, ಕತ್ತಿನ ಎರ್ಡರಸ ಸಿಕ್ಕಿಸಿಕಂಡ್ ಕರಿಯಪ್ಪ ಉಳ್ದವರೊಟ್ಟಿಗೆ ಅಣ್ಣಿಗೌಡನ ಹಿಂದೆ ಬಾತ್.

ಪಿಸ ಪಿಸ ಮಾತ್ ಒಮ್ಮೆಗೆ ನಿಂತತ್.

ಮನೆ ಬಾಗ್ಲಂದ ಹೊರಬಂದ್ ರಾಮಗೌಡ ಉಳ್ದವರ ಒಳಗಿಂದ ಕರ್ಕಣ್ತ್. ಗತ್ತ್‌ಲಿ ಚಪ್ಪರಕ್ಕೆ ಬಂದ ಕಲ್ಯಾಣಸ್ವಾಮಿ ಅವನೊಟ್ಟಿಗೆ ಕೊಡಗ್‌ನ ಪರಿವಾರ.

ಹೃದಂಗಳ ಕುತ್ತಿಗೆಂದ ಸ್ವರ ಕೇಳ್ತಿತ್ತ್.

"ಶ್ರೀ ಕಲ್ಯಾಣಸ್ವಾಮಿಯವ್ಕೆ ಜಯ ಆಗಲಿ!"

ಮತ್ತೆ ಮತ್ತೆ ಜನ ಹಂಗೆ ಹೇಳ್ತಿದ್ದೊ.

ಹಂಗೆಯೆ ಇನ್ನೊಂದು.

"ಕೊಡಗ್‌ನ ಮಹಾರಾಜಂಗೆ ಜಯ ಆಗಲಿ!"

ರಾಮಗೌಡನೊಬ್ಬನ ಮುಂದೆ ಬಂದ್, ನಗಾಡಿಕಂಡ್ ಅಣ್ಣಿಗೌಡನ ಹೆಗಲಿಗೆ ಕೈ ಹಾಕಿ ಹೇಳ್ತ್.

"ಶಾಬ್ಬಾಸ್ ಅಣ್ಣಿಗೌಡ! ಒಳ್ಳೆ ಕೆಲ್ಸಕ್ಕೆ ಆರಂಭ ಲಾಯ್ಕಲಿ ಆತ್! ಬಾ" ಕಲ್ಯಾಣಸ್ವಾಮಿ ದೊಡ್ಡ ಸ್ವರಲಿ ಹೇಳ್ತ್.

ಬನ್ನಿ ಅಣ್ಣಿಗೌಡ್ರೆ! ಬೇಟೆ ಯಶಸ್ವಿ ಆದಕ್ಕೆ ಆಗನೆ ಬಾವುಟ ನೋಡ್ದೋ. ಅಣ್ಣಿಗೌಡ ಕಲ್ಯಾಣಸ್ವಾಮಿಗೆ ಬಗ್ಗಿ ನಮಸ್ಕಾರ ಮಾಡ್ತ್.

ಕಚ್ಚೆ ಪಂಚೆ, ನೇರಳೆ ಬಣ್ಣದ ದೊಗಳೆ ಅಂಗಿ, ಸೊಂಟಕ್ಕೆ ಪಟ್ಟಿನಂಗೆ ಕಟ್ಟಿದ ಕೆಂಪು ಶಾಲು, ಎಡಮಡೆಲಿ ಕತ್ತಿ, ಎಣ್ಣೆಗಪ್ಪು ಬಣ್ಣ, ಹಿಂದೆಗೆ ಬಾಚಿದ್ದ ತಲೆಕೂದ್ಲು... ಕಲ್ಯಾಣಸ್ವಾಮಿನ ಮುಖಲಿ ತೇಜಸ್ಸ್ ಇತ್ತ್. ಅಣ್ಣಿಗೌಡನ ವಂದನೆನ ತಕಂಡ್ ನಗಾಡಿಕಂಡ್ ಹೇಳ್ತ್. "ಕಾಡ್‌ಹಂದಿ ಸತ್ತತ್‌ಂತ ರೈತರಿಗೆಲ್ಲ ಖುಷಿ ಆಗಿರ್ದಲ್ಲ?" ಅವೆಲ್ಲ ಖುಷಿ ಆಗಿಟು ಸ್ವಾಮಿಯವೇ. ನಮ್ಮ ಸೇರಿಕಂಬಕೆ ಅಟ್ಲೂರ್‌ನ ಸುತ್ತಮುತ್ತಂದ ಇನ್ನೂರ್ ಜನ ಹೊರ್ಟಟ."

ಕೇಳ್ದರ್ರ ರಾಮಗೌಡರೆ, ಹೆಂಗೆ ಸೈನ್ಯ ಭರ್ತಿ ತುಂಬಿಟುಂತ? ರಾಮಗೌಡ ತೃಪ್ತಿಲಿ ನುಡ್ತ್.

ಇನ್ನ್ ಸುರು ಮಾಡಿ.

ನೀವು ಕುದ್ರಿ.

ಕಲ್ಯಾಣ ಸ್ವಾಮಿ ಮಂಚಲಿ ಕುದ್ದಂಗೆ ಕೊಂಬು ಊದಿ, ವಾದ್ಯ ಮೊಳ್ಗಿತ್.

ಎಲ್ಲರು ಕುದ್ರಿಂತ ರಾಮಗೌಡ ಕೈಲಿ ತೋರ್‍ಸಿತ್. ಮಂಚದ ಹಿಂದೆ ನಾಕ್ ಜನ ಯೋಧರ ಹೊರ್ತುಪಡ್ಸಿ ಉಳ್ದವೆಲ್ಲ ಚಪ್ಪರಲಿ ಕುದ್ರೊ. ಮತ್ತೂ ಜನ ಬಂದ್‌ಕಂಡೇ ಇದ್ದವು ಚಪ್ಪರದ ಕರೆ ಕರೆಲಿ ನಿಂತೋ.

ಕಲ್ಯಾಣಸ್ವಾಮಿಯ ಕಡೆಗೊಮ್ಮೆ ನೋಡಿ ವಂದಿಸಿ ರಾಮಗೌಡ ಸುರು ಮಾಡ್ತ್.

"ಅಮರಸುಳ್ಯ ಮಾಗಣೆಯ ಹತ್ತೂರ ಜನರೇ! ವೀರರೆ! ಕಲ್ಯಾಣಸ್ವಾಮಿ ಹಿಂದೊಮ್ಮೆ ರಾಮಗೌಡಂಗೆ ಕಲಿಯು ಹೌದು, ಕವಿಯು ಹೌದು ಎಂದಿತ್ತ್. ಅವ ಮಾತಾಡಿಕಂಡಿರಿಕಾನ ಆ ಮಾತ್‌ನ ಸತ್ಯ ವಾಪಾಸು ಗೊತ್ತಾತ್. ಅನ್ಯಾಯನ ಎದ್ರಿಸಿದ ಬಂಡಾಯಗಾರ, ಪಾರತಂತ್ರ್ಯನ ಒಪ್ಪದ ದೇಶಪ್ರೇಮಿ, ಆತ್ಮವಿಶ್ವಾಸದ ಆಚಾರಿ, ಪ್ರವಾದಿ, ಸೇನಾನಿ. ಎಷ್ಟ್ ಶಬ್ದಗಳ ಮಿಶ್ರಣ ಆಗಿತ್ತ್ ಆ ಭಾಷಣ. ಆದರೆ ಶಬ್ದ ಭಂಡಾರ ಇಲ್ಲೆ. ಅಲ್ಲಿ! ಕಪಟ ಇತ್ಲೆ. ಉಳ್ದವರ ಕಡಮೆ ಕಾಂಬೊ ಪ್ರವೃತ್ತಿ ಇತ್ಲೆ.

"... ಮಳೆ ಬಾಕನ ಗದ್ದೆ ಕೆಲ್ಸಕ್ಕೆ ನಾವು ವಾಪಾಸಾಕು. ಏನ್ ಹೇಳ್ರೆ? ಗುಡುಗುನ ಹಂಗೆ ಸೈನ್ಯ ನಡಿಯಕು, ಸಿಡ್ಲಿನ ಹಂಗೆ ವೇಗ ಇಂಗ್ಲೀಷರ ಪಾಲಿಗೆ ಕುಂಭದ್ರೋಣ ಮಳೆ. ಬೇಸಿಗೆ ಮುಗಿಯಕೆ ಮುಂದೆ ನಮ್ಮ ಕೆಲ್ಸ ಮುಗ್ಸೊಕು. ಸಾಧ್ಯನಾ ಹೇಳಿ?

ಅಲ್ಲಿದ್ದವೆಲ್ಲಾ ಹೇಳ್ಡೊ.

ಸಾಧ್ಯ.

"ಈ ಪವಿತ್ರ ಯುದ್ಧಲಿ ನಾವೆಲ್ಲ ಭಾಗವಹಿಸ್ಯೊಳ ಅಂತ ನಮ್ಮ ಮಕ್ಕ, ಪುಳ್ಳಿಕ್ಕ, ಮರಿಮಕ್ಕ ಅವರ ಮುಂದೆನ ಸಂತಾನಸ ಯಾಗೊಳು ಹೆಮ್ಮೆ ಪಡೊಕು"

"ಹೌದೌದು"

"ನಮ್ಮ ರಾಜಂಗೆ ಜಯ ಆದ ಮೇಲೆ ಸೈನಿಕರೆಲ್ಲವುಕೆ ಸನ್ಮಾನ ಅಷ್ಟ್ರವರೆಗೆ ಕಷ್ಟ ನಷ್ಟ ಮಾತ್ರ."

ಒಂದೆರಡು ಜನ ಹೇಳ್ಡೊ.

"ನಾವುಗೆ ಯಾವ ಪ್ರತಿಫಲಸಾ ಬೇಡ"

ರಾಮಗೌಡ ಕೇಳ್ತ್, ಉಳ್ದವೆ?

ಯಾರಿಗುಸ ಬೇಡ ರಾಮಣ್ಣ. ಎಲ್ಲವು ಹೇಳ್ದೊ.

"ಖುಷಿ ಆತ್. ನಿಮ್ಮೆಲ್ಲರ ಎದುರ್‍ಲಿ ಸುಳ್ಯ ಸ್ವತಂತ್ರ ಆತ್‌ಂತ ಘೋಷಣೆ ಮಾಡಕಲಾ."

"ಆದು"

"ಹಂಗಾರೆ ಅಂತ ಘೋಷಣೆ ಆಗಲಿಂತ ರಾಜ್ಯಪಾಲರ್ ಕಲ್ಯಾಣಸ್ವಾಮಿಗೆ ಕೈ ಮುಗಿಯಮ"

... ಮತ್ತೆ ಎದ್ದವ ಕೊಡಗ್‌ನ ನಾಯಕ ನಂಜಯ್ಯ ಷರಾಯಿ, ದೊಗಳೆ ಅಂಗಿ, ತಲೆಗೆ ಚೌಕ, ದೊಡ್ಡ ಮೀಸೆ...

ಅವ ಕನ್ನಡ ಜಿಲ್ಲೆಯ ಜನಕ್ಕೆ, ತುಳುನಾಡ್‌ನವ್ಕೆ, ಅಲ್ಲಿ ಸೇರ್‍ದ ವೀರರಿಗೆ ನಮಿಸಿತ್.

"ನಮ್ಮ ಸ್ವಾತಂತ್ರ್ಯನಾಶವಾದ ಕಣ್ಣಾರೆ ಕಂಡ ಪಾಪಿ ನಾನ್. ಆ ಸ್ವಾತಂತ್ರ್ಯನ ವಾಪಾಸು ತಕಂಬುದೇ ಪಾಪಕ್ಕೆ ಪ್ರಾಯಶ್ಚಿತ.

ಕೊಡವರ್, ಅರೆಭಾಷೆನವು, ತುಳುವರ್ ಒಟ್ಟಿಗೆ ಸೇರ್‍ದ ಈ ಗಳಿಗೆ ಪವಿತ್ರನೇ ಸರಿ. ಒಟ್ಟಾಗಿದ್ದ್ ಯುದ್ಧ ಮಾಡಕ್. ಬಾಸೆ ಕೂಡ ಬಾರದ ಯಾರೋ ಕೆಲವು ಜನ ಸಮುದ್ರ ದಾಟಿ ಈ ದೇಶಕ್ಕೆ ಬಂದ್ ನಮ್ಮ ಆಳುದುಮತ ಹೇಳ್ರೆ ಎಂತ? ನಮ್ಮ ಪಾಲಿಗೆ ಎಷ್ಟ್ ಅವಮಾನ ಇದ್? ಮರಾಠರು, ರಜಪೂತರ್, ಕೇರಳೀಯರ್, ತಮಿಳರ್, ಎಲ್ಲರ ಇರ್‍ದೊಂರ್‍ದ ಈ ಗತಿ ಬಾತ್ ನಾವುಗೆ! ಇಗ ಆ ತಪ್ಪ್‌ನ ನಾವೆ ಸರಿಮಾಡೊಕು.

.... ನಮ್ಮಲ್ಲಿ ಏನ್ ಕಡಿಮೆ ಆಗಿಟುಂತ? ಗಂಡಸ್‌ತನ ಇಲ್ಲೆನಾ? ಬುದ್ಧಿ ಇಲ್ಲೆನಾ? ಜನಬಲ ಇಲ್ಲೆನಾ? ಯಾವದರ ಕೊರ್‍ತೆ ಉಟ್ಟು? ಇಷ್ಟೆಲ್ಲಾ ಇದ್ದ್ ನಮ್ಮ ದೇಶದ ರಕ್ಷಣೆ ನಾವ್ ಮಾಡಿಕಣದಿದ್ರೆ ಹೆಂಗೇ?

"ನಂಗೆ ಈ ಸೈನಿಕ ಜಿವನ ಸಾಕಾಗಿಟು. ಹಳ್ಳಿಲ್ಲಿದ್ದು ಗದ್ದೆ ಊಳಕೂಂತ ಆಸೆ. ಆದರೆ ಇದೊಂದ್ ಧರ್ಮಯುದ್ಧನ ನಾ ಮಾಡಿಯೇ ಮಾಡೊಕು. ಸ್ವಾತಂತ್ರ್ಯನ ಪುನಃ ಗಳ್ಸಕು. ಸಿಂಹಾಸನದ ಮೇಲೆ ರಾಜರ ಕೂಡ್ರಿಸಿ ನಾ ಕತ್ತಿ ಕೆಳಗಿಳ್ಸಿನೆ. ಅಷ್ಟರವರೆಗೆ ರಣಭೂಮಿಲಿ ನಿಮ್ಮ ಒಟ್ಟಿಗೆ ಇದ್ದನೆ. ನಾನೆಲ್ಲಿಯಾದ್ರ್ ಯುದ್ಧರಂಗಲಿ ಸತ್ತರೆ ಅಂದ್ ನಂಗೆ ವೀರಸ್ವರ್ಗ!

"ಹುಲಿಕೊಂದ ನಂಜಯ್ಯ ಯಾವತ್ತ್ ಹೇಡಿಯಾಗಿತ್ಲೆ, ದ್ರೋಹಿ ಆಗಿತ್ಲೆ, ಅವ ವೀರನಾಗಿಯೇ ಸತ್ತದ್‌ಂತ ನನ್ನ ಪೀಳಿಗೆಯವ್ ಹೇಳಿಕಂಡವೆಲ!"

ದೊಡ್ಡ ಚಪ್ಪಾಳೆನೆ ಸಿಕ್ಕಿತ್ ನಂಜಯ್ಯನ ಮಾತಿಗೆ.. ಕಲ್ಯಾಣಸ್ವಾಮಿ ಎದ್ದ್ ನಿಲ್ಲಿಕಾನ ಸದ್ದೆಲ್ಲ ಅಡ್ಗಿ ಮೌನ ತುಂಬಿತ್ ಅಲ್ಲಿ. ನ್ಯಾಯಕೆ ನಮ್ಮೆಲ್ಲ ಆಸೆಗಳಿಗೆ, ರಾಜ ಎನ್ನುವಂಗೆ ಜನ ಅವನ ಮೋರೆನೆ ನೋಡ್ತಾ ಇದ್ದೊ.

'ಸ್ವಾತಂತ್ರ್ಯ ಸಮರದ ಸಹಯೋಧರ್‌ಂತ ಉದ್ದೇಶಿಸಿ ಕರ್ದ್ ಕಲ್ಯಾಣಸ್ವಾಮಿ ಮಾತಾಡ್ತ್.'

ಒಳಗೆಂದ ಬರ್ತಿದ್ದ ಸ್ವರ ಸುರುಗೆ ಮೆಲ್ಲ ಮೆಲ್ಲ ಮತ್ತೆ ಜೋರುಂದ ಕೊನೆಲಿ ಜಲಪಾತದಂಗೆ ಹರ್ಕಂಡ್ ಬಾತ್.

ಅವರೆಲ್ಲರ ಸ್ವಾತಂತ್ರ್ಯ ಪ್ರಶ್ನೆಗೆ ಉತ್ತರನ ವಿವರಿಸಿ ಹೇಳ್ತ್. ಸತ್ಯಕ್ಕೆ ಸಾವಿಲ್ಲೆ. ನ್ಯಾಯಲಿ ನಡಿವವ ಒಳ್ಳೆ ಮೊನುಷ್ಯ. ಅನ್ಯಾಯ ಅಸತ್ಯಗಳ ವಿರುದ್ಧ ಹೋರಾಡವ ವೀರ. ರಾಮಾಯಣ ಮಹಾಭಾರತದ ಕಥೆ ನಾವುಗೆ ಏನ್ ಹೇಳಿ? ದುಷ್ಟಂಗಳಿಗೆ ಯಾಗೊಳು ಸೋಲು ಕಟ್ಟಿಟ್ಟದೆ. ಇಂದ್ ರಾಮಪ್ಪಯ್ಯ ಸತ್ತದ್ ಅದೇ ನಿಯಮದ ಮೇಲೆ ನಾಳೆ ಇಂಗ್ಲೀಷರ್ ಸೋತ್ ಓಡಿ ಹೋದುಸ ಇದೇ ನಿಯಮದ ಮೇಲೆ..

"ಅವು ಸಾಧಿಸಿದಾದ್ರ್ ಎಂಥಾ ಒಗ್ಗಟ್ಟ್!"

"ಸುಮಾರ್ ಭಾಷೆಗ. ಸುಮಾರ್ ಜಾತಿಗ. ಗೌಡ್ರ್, ಲಿಂಗಾಯತರ್, ಕೊಡಗರ್, ಮಾಪಿಳ್ಳೆಯರ್, ಕೊಂಕಣಿಗ, ಭಟ್ರ್‌ಗ ಹಿಂಗೆ ಎಲ್ಲರ್ ಒಗ್ಗಟ್ಟಾಗಿದ್ದೊ. ಇಂಥ ಪವಿತ್ರ ಒಗ್ಗಟ್ಟಿದ್ದರೆ ಯಾವ ಕಾಲಕ್ಕು ಸಮಸ್ಯೆ ಇಲ್ಲೆ. ನಮ್ಮದೆಲ್ಲರ್ದ್ ಸತ್ಯದ ಜಾತಿ, ಪಕ್ಷ. ಆದ್ದಂರ್ದ ನಾವು ಸೋಲಿಲ್ಲೆ."

ತಯಾರಾದ ಬಾವುಟ ಬಾತ್. ಕರಿಯಪ್ಪ ಎತ್ತಿಕಂಡ್ ಬಾತ್. ವಾದ್ಯ ಮೊಳಗಿದಂಗೆ ಅರಸೊತ್ತಿಗೆನ ಆ ಧ್ವಜನ ಅರ್ಪಿಸಿ ಕಲ್ಯಾಣಸ್ವಾಮಿ ಹೇಳ್ತ್.

ಇಂದನಿ, ನಮ್ಮ ಸ್ವಾತಂತ್ರ್ಯದ ಚಿಹ್ನೆನ ಬಾವುಟ. ಈ ಘಳಿಗೆಂದ ಸುಳ್ಯ ಮಾಗಣೆ ಸ್ವತಂತ್ರ್ಯ ಆತ್! ಸೂರ್ಯ ಚಂದ್ರ ಇರ್ವವರೆಗೆ ಈ ಸ್ವಾತಂತ್ರ್ಯ ಇರುವಂಗೆ ಹೋರಾಡಮ! ಇಂಗ್ಲೀಷರ ಓಡ್ಸಿ ನಾವುಗೆ ತಟ್ಟಿದ ಕಳಂಕನ ಅಳ್ಸಿ ಹಾಕನು. ಹೇಳಿ! ಜಯಘೋಷ ಮಾಡಿ.

ಸಾವಿರ ಗಂಟ್ಲ್‌ಂದ ಹೊರ್ಟ ಘೋಷ ಪ್ರತಿಧ್ವನಿಸ್‌ತ್ತಿತ್.

"ಸ್ವಾತಂತ್ರ್ಯ ಅಮರವಾಗಿರ್ಲಿ"!

ಮತ್ತೆ ಯಾರ್ ಮಾತಾಡದೆ ಮೌನ ಆಕನ ಕಲ್ಯಾಣಸ್ವಾಮಿ ಹೇಳ್ತ್,

ನಾಳೆಂದ ನಮ್ಮ ಸೈನ್ಯದ ದಂಡಯಾತ್ರೆ ಸುರು! ಇಂಗ್ಲೀಷರ ಹುಟ್ಟಡಗಿಸಿದ

ಮೇಲೆನೆ ನಾವುಗೆ ವಿಶ್ರಾಂತಿ. ಇಡೀ ಗೆಲ್ಲುವವರೆಗೆ ನಾವು ಹೋರಾಡಿಕಂಡೇ ಇರೊಕುಂತ ವೀರಕತ್ತಿ ಹಿಡ್ದ್ ಪ್ರತಿಜ್ಞೆ ಮಾಡಮ. ಯೊಧರೆಲ್ಲ ಬನ್ನಿ ಮುಂದೆ! ಸಮರ ದೀಕ್ಷೆ ತಕಣಮ!.

ಕುದ್ದವೆಲ್ಲಾ ಆಗಲೇ ಎದ್ದ್ ನಿಂತೊ. ಮಹಾನಾಯಕ ಕಲ್ಯಾಣಸ್ವಾಮಿ ನಿತ್ತ ಕಡೆಗೆ ಜನ ನಾ ಮುಂದೆಂತ ಪ್ರತಿಜ್ಞೆ ಮಾಡಿಕೆ ನುಗ್ಗಿ ಬಂದೊ. ಜಯಕಾರಗ ಯಾರೂ ಹೇಳದೆನೆ ಜನಗ ಹಾಕ್ತಿದ್ದೊ.

"ದೀವಟಿಗೆ ಕಂಬ!" ಅಣ್ಣಿಗೌಡ ಹೇಳ್ತ್.

ಬೆಳ್ಳೀ ಹಿಡಿಯಿದ್ದ್ ಪಂಜುನ ಒಬ್ಬ ಗಟ್ಟಿಮುಟ್ಟುನವ ತಕಂಡ್ ಬಾತ್. ಅದರ ತುದಿಲಿ ಪೊರ್ಲುನ ಬಿಳಿ ಬಟ್ಟೆ ಇತ್ತ್. ಅದರ ಅಲ್ಲಿಯೇ ಎಣ್ಣೆಗೆ ಮುಳುಗಿಸಿದೋ. ಕಲ್ಯಾಣಸ್ವಾಮಿ ಆ ಪಂಜಿಗೆ ಬೆಂಕಿ ಮುಟ್ಟಿಸಿತ್.

ಅದ್ ಲಾಯ್ಕ ಉರ್ಕಂಡ್ ಹೋಗ್ತಿದ್ದಂಗೆ ಅವ ಹೇಳ್ತ್,

"ಇದ್ ಸ್ವಾತಂತ್ರ್ಯ ದೀವಟಿಗೆ. ನಮ್ಮ ಗುರಿ ಮುಟ್ಟುವವರೆಗೆ ಇದ್ ಉರ್ಕಂಡೆ ಇರೊಕು."

## ೧೫

ಮೊದುವೆನ ಚಪ್ಪರ ಸೈನ್ಯದ ಶಿಬಿರ ಆಗಿತ್ತ್. ಹೊರಗೆ ಹಾರಿಕಂಡಿದ್ದ ಬಾವುಟ, ಉರಿವ ಪಂಜು, ಸುತ್ತಮುತ್ತೆಲ್ಲ ಕಾವಲ್‌ಗಾರರ್. ಹುಂಜ ಸುರು ಕೂಂಗಿಕಾಕನ ಕೊಂಬು ಮೊಳ್ಗಿತ್. ನಿಲ್ಗಿದ್ದವೆಲ್ಲ ಎದ್ದ್ ಕುದ್ದೊ. ಮನೆಗಳಿಗೆ ಹೋಗಿದ್ದವುನು ಎದ್ದು ಬಂದೊ. ಬೊಳ್ಪಿಗೆ ಮಾಡುವ ಕಾರ್ಯಗಳನ್ನೆಲ್ಲ ಮುಗ್ಸಿಕಂಡೊ.

ದೀಪದ ಬೊಳ್ಪುಲಿ, ವರಿಸ್ಸ್‌ನ ಮೋರೆ ಹಾಕಿ ಕುದ್ದ ರಾಮಗೌಡನ ಕಲ್ಯಾಣಸ್ವಾಮಿ ಕೇಳ್ತ್.

"ಗೌಡ್ರೆ ಏನ್ ವಿಷ್ಯ"

ಉತ್ತರ ತಡ ಆತ್ಲೆ.

ನನ್ನ ಮಂಜನು ನಮ್ಮೊಟ್ಟಿಗೆ ಬಂದದೆಗಡ

ಯಾರ್? ಮೊದುವೆ ಹೈದನಾ?

ಅವನೇ

ನಿಮಗಿಷ್ಟ ಇಲ್ಲೆನಾ?

ನಂಗೆ ಉಟ್ಟು. ಆದರೆ ಅವನ ಅವ್ವನು ಮತ್ತೆ ಅಮ್ಮ–

"ಆದು! ನಿನ್ನೆನೆ ಒಂದು ಮಾತ್ ಹೇಳಿಕೆ ಮರ್ತೆ, ಎಲ್ಲಿ ನಿಮ್ಮ ಮಂಜನ ಕರೀನಿ."

ಹದ್‌ನಾರ್ ಹದ್ನೇಳರ ಕೃಷ್ಣಗೌಡ ಕಲ್ಯಾಣಸ್ವಾಮಿನ ಮುಂದೆ ಬಂದ್ ನಿಂತತ್. ನಮಸ್ಕಾರನು ಮಾಡ್ತ್. ಅಪ್ಪನಂಗೆ ಇದ್ದ ಎಳೆ ಜೀವ. ಸಿಂಹದ ಮೊರಿನೆ.

ಕಲ್ಯಾಣ ಸ್ವಾಮಿ ನಗಾಡಿಕಂಡ್ ಹೇಳ್ತ್. "ತಮ್ಮಾ, ನಿನ್ನ ಮನ್ಸ್‌ಲಿದ್ದದ್ದರ ಕೇಳಿ ಖುಷಿ ಆತ್." ಕೃಷ್ಣಗೌಡನ ಮೋರೆ ಅರ್ಳಿತ್. ಕೃತಜ್ಞತೆ ಹೇಳಿಕೆ ತುಟಿಗಳ ಅಲ್ಗಿಸಿತ್. ಅಷ್ಟೊತ್ತಿಗೆ ಬೆರಳ್ ತೋರ್ಸಿ ಮಾತಾಡ್‌ಬೇಡಾಂತ ಕಲ್ಯಾಣಸ್ವಾಮಿ ಹೇಳ್ತ್.

"ಆದರೆ ನಮ್ಮ ಸೈನ್ಯದ ನಿಯಮದ ಪ್ರಕಾರ ಇದಿಕ್ಕೆ ಅವಕಾಶ ಇಲ್ಲೆ. ಒಂದು ಕುಟುಂಬದ ಒಬ್ಬ ಮಾತ್ರ ನಮ್ಮೊಟ್ಟಿಗೆ ಬರಕ್.

ಕೃಷ್ಣಗೌಡನ ಮೋರೆ ಕಪ್ಪಾತ್. ಅವನ ಅಪ್ಪನ ಕಣ್ಣ್‌ಗ ಮಾತ್ರ ಮಿನ್ಕಿತ್.

ಇದ್ ಎಲ್ಲವುಕೆ ಸೇರ್ವ ಆಜ್ಞೆ, ಹೊಸ್ತಾಗಿ ಸೇರ್ವವ್ಕೆ ಈ ವಿಷ್ಯನ ತಿಳ್ಸಿ.

"ಆದು ಸ್ವಾಮಿಯವೆ" ರಾಮಗೌಡ ಹೇಳ್ತ್. ಕಲ್ಯಾಣಸ್ವಾಮಿ ಎದ್ದ್ ಬಂದ್ ಕೃಷ್ಣಗೌಡನ ಹೆಗಲ್ ತಟ್ಟಿ ಹೇಳ್ತ್. "ಅಪ್ಪನಂಗೆ ಮಂಜ! ತಮ್ಮ ಬೇಜಾರ ಮಾಡ್‌ಬಡ. ನಮ್ಮೊಟ್ಟಿಗೆ ನೀ ಬಾರದೆ ಇದ್ದರುಸ ನಿನ್ನ ಮನೆನ ನೋಡಿಕಂಬದರೊಟ್ಟಿಗೆ ಸುಳ್ಯದ ಸ್ವಾತಂತ್ರ್ಯನಸ ಕಾಪಾಡ್ವ ಭಾರ ನಿನ್ನ ಮೇಲೆ ಉಟ್ಟು. ನಿನ್ನ ಓರಗೆಯ ಎಲ್ಲರ ಮೇಲು ಉಟ್ಟು."

ಕೃಷ್ಣಗೌಡ ನಮಸ್ಕಾರ ಮಾಡಿ ಒಳಗೆ ಹೋತ್.

"ಚಿಂತೆ ದೂರ ಆತಾ ರಾಮಗೌಡರೆ? ಕೇಳ್ತ್ ಕಲ್ಯಾಣಸ್ವಾಮಿ

"ಬಾಯಿಯೆ ಬಾದ್ಲೆ" ಸ್ವಾಮಿಯವರೆ"

"ನಿಮ್ಮ ಮನೆಗೆ ಅನ್ವಯ ಆದ್ ಎಲ್ಲ ಸಂಸಾರಗಳಿಗೆ ಆಗಲಿ ಅಷ್ಟೆ"

ಕಲ್ಯಾಣಸ್ವಾಮಿಯ ತೀರ್ಪು ಕೇಳಿ ಚೆಟ್ಟಿ ಮತ್ತೆ ಕರ್ತು ಕುಡಿಯ ಒಬ್ಬರನೊಬ್ಬ ನೋಡಿ ನೆಗಾಡಿಕಂಡೊ.

ಈ ನಿಯಮಂದ ನೀವುಗೇನ್ ಸಮಸ್ಯೆ ಇಲ್ಲೆ. ಇದ್ ಹೊಸ್ಬರಿಗೆ ಮಾತ್ರ!"

... ಕಲ್ಯಾಣಸ್ವಾಮಿನು ಉಳ್ದ ಸೇನಾನಿಗಳ್ ಮೀದ್ ದೇವಸ್ಥಾನಕ್ಕೆ ಹೋದೊ. ಜನಜಂಗುಳಿ ಅವರ ಹಿಂದೆ ಇತ್ತ್. ಚೆನ್ನಕೇಶವ ದೇವ್ರಿಗೆ ಅಡ್ಡ ಬಿದ್ದ್ ನಮಸ್ಕಾರ

ಮಾಡ್ದೊ. ವಿಶೇಷ ಪೂಜೆ ಮಾಡ್ಸಿದೊ. ಹಿಡ್ದ ಕೆಲಸ ಆಗಲಿಂತ ಎಲ್ಲರ ಪರವಾಗಿ ಕಲ್ಯಾಣಸ್ವಾಮಿ ದೇವ್ರಿಗೆ ಕೈ ಮುಗ್ತ್.

ಸೈನ್ಯದ ಶಿಬಿರಲಿ ದೊಡ್ಡ ಕಡಾಯಿಗಳ್ಲಿ ಬ್ರಾಹ್ಮಣರ್ ಮಾಡ್ದ ಹಬ್ಬದಡಿಗೆನ ಎಲ್ಲವು ಉಂಡೊ. ಉಂಡಾದ ಮೇಲೆ ಹಂಞ ಹೊತ್ತ್ ಮಾತ್ರ ಕುದ್ರಿಕೆ. ಸುಳ್ಯಲಿ ಸಿಕ್ಕಿದ ನಾಕಾರ್ ಕುದುರೆಗಳ್ಲಿ ರಾಮಪ್ಪಯ್ಯನ ಅರಬ್ಬಿ ಕುದ್ರೆ ಭಾರಿ ಲಾಯ್ಕದ್ ಆಗಿತ್ತ್. ಆ ಕುದುರೆ ಸ್ವಾಮಿಯವ್ಕೆ ಇರ್ಲಿ ಹಾಗೆಂತ ನಂಜಯ್ಯ ರಾಮಗೌಡನ ಕೇಳ್ತ್.

ಅವು ಒಪ್ಪುದು ಕಷ್ಟ ಎಂದ ನಂಜಯ್ಯ.

ಆ ಮಾತ್ ನಿಜ ಆಗಿತ್ತ್.

"ನಾ ಸಾಕಿ ಬೆಳ್ಸಿದರ ಬುಟ್ಟು ಇನ್ನೊಂದರ ಮೇಲೆ? ಊಹುಂ ಅದರ ಅಣ್ಣಿಗೌಡರಿಗೆ ಕೊಡಿ.

ಅವಸ ಒಪ್ಪಿತ್ಲೆ.

ಆ ಕುದುರೆನ ಮೇಲೆ ಕಣ್ಣಿಟ್ಟಿದ್ದ್ ಕರಿಯಪ್ಪಣ, ಅಣ್ಣಿಗೌಡ ಹೇಳ್ತ್.

ಕರಿಯಪ್ಪ, "ಇನ್ನ್ ಆ ರಾಮಪ್ಪಯ್ಯನ ಮರ್ತ್‌ಬುಡು. ಯುದ್ಧ ಮುಗ್ದ ಮೇಲೆ ನಿನ್ನ ಕೊಡಗಿಗೆ ಕರ್ಕಂಡ್ ಹೋಗಿ ಸಾಂಕಿನೆಂತ ಕುದುರೆನ ಪೂಜಿಕಂಡ್ ಹೇಳ್ತ್.

ಸೈನ್ಯದ ಉಸ್ತುವಾರಿಯ ವಿವರಗ, ಯೋಧರಿಗೆ ಹೇಳಕಾದ ವಿಷಯಗಳ ಹೇಳಿಕೆ ಸಿದ್ಧ ಆಗಿತ್ತ್.

ಇನ್ನೊಂದು ಗಳಿಗೆಲಿ ಸೈನ್ಯ ಹೊರ್ಟ್ದೆಂತ ರಾಮಗೌಡ ಆಜ್ಞೆ ಮಾಡ್ತ್.

ಆಯುಧಗ? ಸುಳ್ಯಲಿ ಎಲ್ಲಿತ್ತ್ ಶಸ್ತ್ರಗ?

ಆ ವಿಷಯನಸ ರಾಮಗೌಡ ಹೇಳ್ತ್. ಏನುಟ್ಟೊ ಅದರ್ನೆಲ್ಲ ತನ್ನಿ. ಇರುವ ಕೋವಿಗ ಹಂಞ ಮಾತ್ರ. ಅದರ ಹೊಡಿಯಕೆನು ಎಲ್ಲವುಕೆ ಗೊತ್ಲೆ. ಕತ್ತಿ. ಭರ್ಜಿ, ಈಟಿ ಏನೂ ಇಲ್ಲದವು ದೊಣ್ಣೆ, ಬಡಿಗೆ ತನ್ನಿ, ಯಾರೋ ಒಬ್ಬ ಹೇಳ್ತ್.

"ಕೊತ್ತಳಿಕೆ?"

'ಮರಕ್ಕೆ ಹತ್ತಿ ಕಾಯಿ ತೆಗಿವ ಆಸೆನಾ?'

ಛೆ! ಛೆ! ಒಂದು ಕಾಯಿಸ ಬೀಳದಂಗೆ ಕೊತ್ತಳಿಕೆ ಕಡ್ದವೆ. ಸರಿ ಹಂಗಾರೆ ತಡ ಮಾಡ್ದು ಬೇಡ. ಇನ್ನೊಂದೆ ಘಳಿಗೆ ಪುರುಸೊತ್ತು.

ಕೊಡಗ್‌ಂದ ಬಂದ ವೀರಂಗಳಿಗೆ, ದೂರದ ಹಳ್ಳಿಂದ ಬಂದವ್ಕೆ ಮನೆವರ ಬುಟ್ಟು ಹೋಗುವ ನೋವಿತ್ಲೆ. ಆ ಊರ್‌ನವ್ಕೆ ಹಂಗಲ್ಲ. ಪೊಪ್ಪನ, ಅಮ್ಮನ, ಹೆಣ್ಣ್‌ನ, ಮಕ್ಕಳ ಹಿಂಗೆ ಎಲ್ಲವ್ಕೆ ಹೇಳಿಕಂಡ್, ಮರ್ಸ್ಟಿಕಂಡ್ ಒಬ್ಬಂದ ಒಬ್ಬ ಬುಟ್ಟು ಹೋದ.

ರಾಮಗೌಡನ ಮನೆ ಮುಂದೆ ಬಯಲ್‌ಲಿ ಸೈನ್ಯದ ಕೂಡು ನಡ್ತ್. ಏಳುನೂರ್ ಜನಂರ್ದ ಜಾಸ್ತಿ ಇದ್ದೊ. ಒಬ್ಬೊಬ್ಬ ಒಂದೊಂದು ರೀತಿಲಿ ಕವಾಯತ್ ಮಾಡ್ತಿದ್ದೊ.

"ನಾಕ್ ಹೊಡೆದ್ ಬಿದ್ದ ಮೇಲೆನೆ ಈ ಕಬ್ಬಿಣ ಉಕ್ಕಾದು" ನಂಜಯ್ಯ ಹೇಳ್ತ್.

ರಾಜ್ಯಪಾಲ ಕಲ್ಯಾಣಸ್ವಾಮಿ ಸೈನ್ಯನ ಕುರ್ತ್ ಮಾತಾಡ್ತ್. ನಿಯಮಗಳೆಲ್ಲ ಹೇಳ್ತ್ ಎಲ್ಲವ್ಕು.

"ಸುಳ್ಯದ ರಾಮಗೌಡರು, ಕೊಡಗ್‌ನ ಹುಲಿಕೊಂದ ನಂಜಯ್ಯ, ನಮ್ಮ ದಂಡನಾಯಕ್. ಅಣ್ಣಿಗೌಡರ್ ಕೋಶಾಧಿಕಾರಿ. ಚೆಟ್ಟಿ ಮತ್ತೆ ಕರ್ತು ಕುಡಿಯರು ದಳಪತಿಗ. ಇವರ ಮಾತ್ ಮೀರಿ ಯಾರ್ ನಡಿಯಕೆ ಆಗದ್.

ನಮ್ಮ ಯುದ್ಧ ಇಂಗ್ಲೀಷರ ವಿರುದ್ಧ ಅಂತ ಯಾರ್ ಮರಿಯಕಾಗದ್. ನಮ್ಮ ನಾಡ್‌ನವು ಯಾರುಸ ನಾವುಗೆ ವೈರಿಗಲ್ಲ. ರಾಮಪ್ಪಯ್ಯನಂತ ವಿಷಜಂತು ಇದ್ದರೆ ಮಾತ್ರ, ಅಂಥವರ ಮೇಲೆಸ ಕತ್ತಿ ಹಾಕುವೆ. ಶರಣಾದವ್ಕೆ ರಕ್ಷಣೆ ಕೊಡಕು, ಹೆಂಗಸರ ಮುಟ್ಟಿಕೆ ಆಗದ್. ಅನ್ಯಾಯಲಿ ಲೂಟಿ ಮಾಡಿಕೆ ಆಗದ್, ಹೆಂಡ ಕುಡಿಯಕ್ಕಿಲ್ಲೆ. ಈ ಎಲ್ಲ ಸೂತ್ರಗಳಿಗೆ ಸೈನಿಕರ್ ತಪ್ಪಿರೆ ಅವ್ಕೆ ಅಲ್ಲಿಯೆ ಶಿಕ್ಷೆ ಕೊಟ್ಟವೆ.

ರಾಮಗೌಡ ಸೈನಿಕರ ಕೇಳ್ತ್.

"ಅರ್ಥ ಆತ"?

"ಆತ್" ಎಲ್ಲವು ಒಟ್ಟಿಗೆ ಹೇಳ್ದೊ.

ನಂಜಯ್ಯ ರಾಜ್ಯಪಾಲರ ಇಸ್ತಿಹಾರನ ಓದಿತ್.

ಆ ಇಸ್ತಿಹಾರ ಎಲ್ಲ ಜನಕ್ಕೆ ವಿಶ್ವಾಸ ಕೊಟ್ಟತ್.

"ಗೆದ್ದ ಮೇಲೆ ಮೂರು ವರ್ಷದವರೆಗೆ ಭೂ ಕಂದಾಯ ಎತ್ತುದ್ಲೆ. ಮತ್ತೆ ಧಾನ್ಯರೂಪಲಿ ಕಂದಾಯ ಕೊಡಕು. ಕನ್ನಡ ಜಿಲ್ಲೆಲಿ ಇನ್ನ್ ಮುಂದೆ ಉಪ್ಪು ಮತ್ತೆ ಹೊಗೆಸೊಪ್ಪು ಮಾರಿಕೆ ಗುತ್ತಿಗೆ ಇರ್ದುಲೆ. ಯಾರ್ ಬೇಕಾರುಸ ಉಪ್ಪು ಮಾಡಕ್. ಹೊಗೆಸೊಪ್ಪು ಬೆಳ್ಸಿ ಮಾರಕ್.

ಓದಿ ಆದ ಕೂಡ್ಲೆ ಸೈನಿಕರೆಲ್ಲ ಖುಷಿಲಿ ಬೊಬ್ಬೆ ಹಾಕಿದೊ. ಸ್ವಾತಂತ್ರ್ಯದ ಅರ್ಥ ಲಾಯ್ಕ ತಿಳ್ದಂಗೆ ಆತ್‌ಂತ ಎಲ್ಲವು ಜಯಕಾರ ಮಾಡ್ದೊ.

ಸುಳ್ಯ ಮಾಗಣೆಗೆ ಸುಬೇದಾರನೊಬ್ಬನ ಮಾಡ್ವ ಕೆಲಸ ಬಾಕಿ ಉಳ್ದಿತ್ತ್. ವಯಸ್ಸಾದ ತಾತನ ರಾಮಗೌಡ ಕರ್ಕಂಡ್ ಬಾತ್.

"ಇವು ತಿಮ್ಮಪ್ಪಯ್ಯನವು", ಸ್ವಾಮಿಯವೇ ಇಂದ್‌ಂದ ಯುದ್ಧ ಮುಗ್ಸಿ ನಾವು ಬರುವರ್ಗೆ ಸುಳ್ಯ ಮಾಗಣೆಗೆ ಸುಭೇದಾರರಾಗಿ ನಾವು ತಿಮ್ಮಪ್ಪಯ್ಯನವ್ರ ಮಾಡ್ಯೊಳ. ಎಲ್ಲವು ಒಪ್ಪಿದೋ.

ರಾಮಗೌಡ ಜೋಯಿಸರತ್ರ ಹೋತ್. ಘಳಿಗೆ ಗುಣ್ಸಿದ ಜೋಯಿಸ ಹೇಳ್ತ್.

"ಇನ್ನ್ ಹೊರ್ಡಕ್"

ಕಲ್ಯಾಣಸ್ವಾಮಿಗೆ ರಾಮಗೌಡ ಹೇಳ್ತ್.

"ಎಲ್ಲ ತಯಾರಿ ಆಗಿಟು"

ಆದು, ಮುಂದೆನ ಕಾರ್ಯನ ಎಲ್ಲವುಕೆ ಹೇಳಿ. ಊದಿಕೆ ಕೊಂಬೊಂದು ಇದ್ದರೆ ಆತ್. ಉಳ್ದದರ ಇಲ್ಲೆ ಬುಟ್ಟು ಬುಡಿ.

"ಆದು"

ರಾಮಗೌಡನ ಕುದ್ರೆ ಸೈನಿಕಂಗ ನಿಂತ ಕಡೆಗೆಲ್ಲ ಹೋಗಿ ಬಾತ್.

ರಾಮಗೌಡ ಹೇಳ್ತ್.

ಇನ್ನ್ ಸೇನೆ ಮುಂದೆಗೆ ಹೊರ್ಟದೆ. ರಾತ್ರೆ ಬೆಳ್ಕಾರೆ ಕೋಟೆಲಿ ನಾವ್ಗೆ ಮಲ್ಗಿಕೆ! ವಾದ್ಯದವು ಎಲ್ಲಿ?

ಕೊಂಬು ಕೂ.. ಅಂತ ಹೇಳ್ತ್. ವಾದ್ಯ ಮೊಳ್ಗಿತ್. ಉರ್ಕಂಡ್ ಇದ್ದ ಸೂಟೆನ ಹಿಡ್ಕಂಡ್ ಸುಳ್ಯದ ಗಟ್ಟಿಮುಟ್ಟುನವ ಒಬ್ಬ ಮುಂದೆ ನಿಂತತ್. ಅರಬ್ಬಿ ಕುದ್ರೆ ಹತ್ತಿ ಕರಿಯಪ್ಪ, ಕೈಲಿ ಬಾವುಟ ಹಿಡ್ದ್ ಆ ಮೊನುಷ ಹಿಂದೆ ನಿಂತತ್. ಅವನ ಹಿಂದೆ ಖಡ್ಗ ಹಿಡ್ಕಂಡ್ ಕೊಡವರ್, ಗೌಡ್ರ್‌ಗ, ಬಂಟ್ರ್‌ಗ, ಸೇರ್ವೆಗಾರರ್, ಬಲ್ಲಾಳರ್ ಕೊತ್ತುಳಿಗೆನ ಸಾಲ್ ಹಿಡ್ಕಂಡ್ ನಿಂತಿದ್ದೊ. ನೊಡುಲಿ ನಾಯಕ ನಂಜಯ್ಯ. ಅವನ ಬದಿಲಿ ಕಂದು ಕುದ್ರೆ ಹತ್ತಿ ಕಲ್ಯಾಣಸ್ವಾಮಿ ಹಿಂದೆ ಅಣ್ಣಿಗೌಡ, ಮತ್ತೆ ಸೋಮಯ್ಯ, ಪುನಃ ಸಾಲ್‌ಲಿ ಸೈನಿಕರ್ ಸೈನ್ಯದ ಹಿಂದೆ ಬೊದಿಲಿ ಕುದ್ರೆ ಹತ್ತಿ ಕುದ್ದ ಕುಡಿಯ ಅಣ್ಣ ತಮ್ಮಂದಿರ್. ರಾಮಗೌಡ ಆಚೀಚೆ ಹೋಕಂಡ್ ಇತ್ತ್.

ಎಲ್ಲಸ ಸರ್ಯಾಗಿ ನೋಡಿ ದಂಡನಾಯಕ, ತನ್ನ ಮನೆ ಕಡೆ ಒಮ್ಮೆ ನೋಡಿ,

ಜನಕ್ಕೆ ಕೈ ಬೀಸಿ ಹೇಳ್ತ್.

"ಸೈನ್ಯ ಚಲ್ಸಲಿ"

"ಜಯಕಾರ ಜೋರಾಗಿತ್ತ್. ಹೆಂಗಸರಿಗೆ ಮಕ್ಕಳಿಗೆ ಮರ್ತ್ಡುದು ಬಂದರುಸ ಲೆಕ್ಕಕೆ ತಕಣದೆ ಜೈಕಾರ ಹಾಕ್ತಿದ್ದೊ."

ಸೈನ್ಯದ ಸಾಲ್‌ಲಿ ಕೊನೆಗೆ ಇದ್ದ ಕುಡಿಯ ಸೋದರರ್ ಆಕಾಶದಡೆಗೆ ಒಟ್ಟಿಗೆ ಗುಂಡು ಹಾರ್ಸಿದೊ.

ಸ್ವಾತಂತ್ರ್ಯ ಸೇನೆ ಮುಂದೆ ಮುಂದೆ ಹೆಜ್ಜೆ ಹಾಕಿತ್.

## ೧೬

ಊರ್ ದಾಟಿ ಒಂದ್ ಮೈಲ್ ಮಾರ್ಗ ಹೋದ ಮೇಲೆ ಶಿಸ್ತ್ ಇತ್ಲೆ. ಕಾಲ್ದಾರಿನ ಮೇಲೆ ಅಡ್ಡಾದಿಡ್ಡಿ ಬೆಳ್ದ ಮರಂಗ ಜಾಸ್ತಿ ಇದ್ದೊರ್ದ ಬಿಸ್ಲ್ ಕಡಿಮೆ ಇತ್ತ್. ಆದರುಸ ಎಲ್ಲವ್ಕೆ ಮೈ ಬೆವರ್ತಿತ್ತ್. ಬೇಜಾರ ಹೋಕೆಂತ ಮಾತಾಡಿಕಂಡೆ ನಡ್ಕಂಡ್ ಹೋಗ್ತಿದ್ದೊ. ನೂರು ವಿಷಯಗಳ ಮೇಲೆ ನೂರಾರ್ ಅಭಿಪ್ರಾಯಗ ಹಂಚಿಕಂಡೊ.

ಅಲ್ಲೊಮ್ಮೆ ಇಲ್ಲೊಮ್ಮೆ ದಾರಿಗಡ್ಡ ಆಗಿ ಸಿಗ್ತಿದ್ದ ಹಳ್ಳಿ ಜನಗ ದೂರ ನಿಂತ್ ಹೋಗ್ವ ಜನರ ಆಶ್ಚರ್ಯಲಿ ನೋಡ್ತಿದ್ದೊ. ಹೆದ್ರಿಕಂಡ್ ಓಡಿ ಹೋಗ್ತಿದ್ದವು ಇದ್ದ. ಹಂಞ ಜನ ಧೈರ್ಯ ಮಾಡಿ ಸೈನಿಕರ ಕೇಳ್ತಿದ್ದೊ.

"ಎಲ್ಲಿಗೆ ಹೋದೆ ದಂಡ್?"

"ಕುಂಪಣಿ ಸರಕಾರನ ಓಡ್ಸಿಕೆ"

ಕುಂಪಣಿ ಸರಕಾರ ಎಂತಾಂತ ಕೆಲವ್ಕೆ ಅವರ್ಲಿ ಗೊತ್ತಿತ್ಲೆ. ಕೆಲವು ಜನ ಪ್ರಶ್ನೆ ಹಿಂಗಿತ್ತ್.

"ಇದ್ ಯಾರದಪ್ಪ ದಂಡ್"?

"ಕಲ್ಯಾಣಸ್ವಾಮಿಯವರ್ದ್‌ಪ್ಪ – ಕಲ್ಯಾಣಪ್ಪಂದ್.."

ಅವೇ ಕಲ್ಯಾಣಪ್ಪನವು ಅಂತ ನೊಡುಲಿ ಇದ್ದ ಕಂದು ಕುದುರೆನ ಬೊಟ್ಟು ಮಾಡಿ ತೋರಿಸ್ತಿದ್ದೊ ಸೈನಿಕರ್.

ಸುಳ್ಳು ಸ್ವತಂತ್ರ ಆತ್‌ಂತ ಸುದ್ದಿ ಹಳ್ಳಿ ರೈತಂಗೆಲ್ಲಿ ಗೊತ್ತಾತ್. ಇನ್ನ್ ಧಾನ್ಯ ಮಾರಿ ಕಂದಾಯ ಕೊಡಿಕಿಲ್ಲೆ. ಭೂಮಿ ಕಂದಾಯಸ ಮೂರ್ವರ್ಷ ಇಲ್ಲೆ. ಜಾಸ್ತಿ ಜನ ಇದ್ದ ಕಡೆ ಸ್ವತಃ ರಾಮಗೌಡನೆ, ಕಲ್ಯಾಣಸ್ವಾಮಿಯವರ ಇಸ್ತಿಹಾರನ

ಬುಡ್ಸಿ ಹೇಳ್ತಿತ್. ಕಂದಾಯದ ವಿಷ್ಯ ಅರ್ಥ ಆದ ಕೂಡ್ಲೆ ಜನಕ್ಕೆ ಖುಷಿ ಆಗಿತ್. ಹರಸ್ತಿದ್ದೊ.

"ನಿಮ್ಮ ಹೊಟ್ಟೆ ತಣ್ಣಂಗಿರ್ಲಿ. ದೇವ್ರೆ ನೀವುಗೆ ಒಳ್ಳೆದು ಮಾಡ್ಲಿ."

ನಂಜಯ್ಯ ಸೂಚಿಸಿತ್.

"ಇನ್ನ್ ಬೇಹ್‌ಗಾರರ ಮುಂದೆ ಕಳ್ಸುದು ವಾಸಿ" ಬೆಳ್ಳಾರೆನ ಊರ್‍ನ, ಕೋಟೆನ ಬಗ್ಗೆ ಗೊತ್ತಿದ್ದ ಇಬ್ಬರ ರಾಮಗೌಡ ಆರಿಸಿತ್.

"ಮುಂದೆ ಹೋಗಿ, ಕುದುರೆಗಳ ಬುಟ್ಟು ಹೋಗಿ ನೀವು ಊರ್ ಸೇರಕು. ಇರ್ಲಾಕನ ನಮ್ಮ ಸೈನ್ಯ ಬೆಳ್ಳಾರೆ ತಲ್ಪಿದೆ. ಆಗ ನೀವ್ ವಾಪಾಸು ನಮ್ಮತ್ರ ಬಂದ್ ಅಲ್ಲಿನ ಪರಿಸ್ಥಿತಿ ಹೆಂಗುಟ್ಟುಂತ ನಾವುಗೆ ಹೇಳೊಕು. ಆಯುಧನ ಇಲ್ಲಿಯೆ ಇಸಿ ಸಾಮಾನ್ಯ ಜನರಂಗೆ ಮುಂದೆ ಹೋಗಿ" ಹಿಂಗೆತ ರಾಮಗೌಡ ಅವ್ಕೆ ಹೇಳ್ತ್.

ತೋಡು ಸಿಕ್ಕಿದ ಕಡೆ, ಬಿಸ್ಲ್ ಕಡಿಮೆ ಆಗುವರ್ಗೆ ದಂಡ್ ವಿಶ್ರಾಂತಿ ತಕಣ್ತ್. ಕಾಲಿಗೆ ಮುಳ್ಳ್ ಚುಚ್ಚಿತ್‌ಂತ ಕೆಲವು ಪಾದಂದ ಅದರ ತೆಕ್ಕಂಡೊ. ನೀರ್ ಕುಡಿಯಕೆ ಆದೆಂತ ನೀರ್ ಕುಡ್ಕಂಡ. ಕಾಡ್ ಮಾವಿನ ಮರಂದ ಹಣ್ಣ್ ಕೊಯ್ಕಂಡ್ ತಿಂದೊ. ಒಳ್ಳೊಳ್ಳೆ ಲಾಯ್ಕಾದ ಹಣ್ಣ್‌ಗಳ ರಾಜ್ಯಪಾಲಂಗೆ, ದಳಪತಿಗಳಿಗೆ, ದಂಡನಾಯಕಂಗೆ ಕೊಟ್ಟುಕಣ್ತಿದ್ದೊ.

ಎಣ್ಣೆ ಹೊತ್ತ್‌ಕಂಡ್ ಬಂದವ ದೀವಟಿಗೆನ ಮುಳ್ಗಿಸಿತ್. ಪಂಜು ಈಗ ಸೂರ್ಯನಂಗೆ ಉರಿತ್ತಿತ್!.

ಆ ವಿಶ್ರಾಂತಿ ಆದ ಮೇಲೆ ದಂಡ್ ಮತ್ತೆ ಹೊರ್ಟತ್. ಎಣ್ಸಿದಂಗೆ, ಸೂರ್ಯ ಮುಣುಂಗುವ ಹೊತ್ತಿಗೆ ಅವು ಬೆಳ್ಳಾರೆನ ಹೊರವಲಯಕೆ ಬಂದೊ. ಬೇಹ್‌ಗಾರರ್ ಕಾಲ್‌ಹಾದಿನ ಹಂಞ ದೂರಲಿ ಕಟ್ಟಿ ಹಾಕಿದ ಕುದುರೆಗ ಕೆನ್ದ್ ನಾವಿಲ್ಲಿ ಒಳಂತ ಹೇಳ್ದೊ. ಅವ್ಕೆ ಆಗಿ ಏನ್ ಕಾದಿತ್ತೊ ಬೆಳ್ಳಾರೆಲಿ? ಕತ್ತಲಾತ್. ಬೇಹುಗಾರರ್ ಇನ್ನ್ ಯಾಕೆ ಬಾತ್ಲೆಂತ ಕಲ್ಯಾಣಸ್ವಾಮಿ ಹೆದರ್ತ್. ರಾಮಗೌಡ, ನಂಜಯ್ಯಂಗು ಅಷ್ಟೆ. ಬೇಹುಗಾರರವ್ಕೆ ಏನಾರ್ ಅಪಾಯ ಆತ್‌ಂತ ಕೋಟೆ ಒಳಗೆ ಕುಂಪಣಿ ಸರ್ಕಾರದ ತುಕಡಿ ಉಟ್ಟುಂತ ಸಂದೇಹಲಿ ಚಡಪಡಿಸಿದೊ.

ಚೆಟ್ಟಿ, ಕಲ್ಯಾಣಸ್ವಾಮಿನತ್ರ ಬಂದ್ ಹೇಳ್ತ್.

"ಎಷ್ಟುಂತ ಕಾಯೊದು? ಒಳಗೆ ನುಗ್ಗಮನ"?

"ಇನ್ನ್ ಹಂಞ ಹೊತ್ತು ಕಾಯೊಮ, ಮತ್ತೆ ನೋಡ್ಣ" ಕಲ್ಯಾಣಸ್ವಾಮಿ ಹೇಳ್ತ್.

ಹಂಗೆ ಹೇಳ್ದ ಎರ್ಡ್ ನಿಮಿಷಲಿ ಬೇಹ್‌ಗಾರರ್ ಬಂದೊ. ಖುಷಿಲಿ ಅವಿಬ್ಬರ್ ನಾಯಕರತ್ರ ಬಂದೊ. ಪ್ರಶ್ನೆ ಮಾಡ್ವ ಅಗತ್ಯನೆ ಇತ್ಲೆ. ಅವರ ನೋಡಿಕಣಲೆ ಪರಿಸ್ಥಿತಿ ಅರ್ಥ ಆದೆ. ಅವರ್‌ಲ್ಲಿ ಒಬ್ಬ ಹೇಳ್ತ್.

"ಕೋಟೆಲಿ ಸೈನ್ಯ ಇಲ್ಲೆ. ಕಾವಲ್‌ಲಿ ಮೂರ್‌ನಾಲ್ಕ ಜನ ಇದ್ದೊ. ಖಜಾನೆ ನೋಡಿಕಂಡ್ ಅಮಲ್ದಾರ ಮತ್ತೆ ಗುಮಾಸ್ತರ್ ಮಾತ್ರ. ಕೆಳಗೆ ನಿಂತ್ ಹೇಳಿಕಳ್ಸಿರೆ ಸಾಕ್ ಅವು ಬಂದು ಬುಡುವ".

"ಸರಿ! ನಡಿಯನಿ ಮುಂದೆ ಪೋಯಿ!" ಕಲ್ಯಾಣಸ್ವಾಮಿ ಹೇಳ್ವೆ.

ರಾಮಗೌಡನ ಕುದ್ರೆ ದೀವಟಿಗೆ ಇರುವರ್‌ಗೆ ಹೋತ್. ಮುಂದುವರಿಯಕೆ ಕೈಲಿ ತೋರ್‌ಸಿತ್. ಎಲ್ಲ ಸೈನಿಕರ್ ಇಬ್ಬಿಬ್ಬರಂಗೆ ಸಾಲ್‌ಕಟ್ಟಿ ನಿಂತೊ.

ಬೆಳ್ಳಾರೆನ ಮನೆಗಳ್ಳಿ ಆಗಸ್ಟೆ ದೀಪ ಹೊತ್ತ್‌ಸ್ತಿದ್ದ ಹೆಂಗಸ್‌ಗ ದಂಡ್ ಬಾವ ಸುದ್ದಿ ಕೇಳ್ದ. ಪೇಟೆಲಿ ವ್ಯಾಪಾರಿಗ ಅಂಬೆರ್ಪುಲಿ ಬಾಗ್ಲ್ ಹಾಕಿದೊ. ಯಾರ್‌ದ್ದೊ ಸೈನ್ಯ ಬಾತ್‌ಂತ ಗಜಿ ಬಿಜಿ ಆಗಿತ್ತ್ ಎಲ್ಲವುಕೆ. ಯಾರಿಗೆ ಏನುಸ ಗೊತ್ತಿಲ್ಲದೆ ನದಿಲಿ ನೆರೆ ಬಂದ ಹಂಗೆ ಜನ ಬಾಕನ ಬೆಳ್ಳಾರೆ ಜನಂಗ ಹೆದರ್‌ಯೊಳ.

ಆದ್ರೆ ಆ ಹೆದ್ರಿಕೆ ತುಂಬಾ ಹೊತ್ತು ಇತ್ಲೆ. ಜಯಘೋಷಗ ಆ ಕೆಲ್ಸ ಮಾಡ್ತ್.

ಸೇನೆಂದಲೂ ರಭಸಲಿ ಸುದ್ದಿ ಓಡ್ತ್.

"ಕೊಡಗ್ ಸೈನ್ಯ ಬಾತ್! ಕಲ್ಯಾಣಪ್ಪನ ದಂಡ್ ಬಾತ್!."

ಕೋಟೆನ ದ್ವಾರದವರೆಗೆಸ ಸೇನೆ ಹೋತ್.

ರಾಮಗೌಡ ಊರ್‌ನ ಮುಖಂಡರ ಕರ್ತ್. ಕೈ ಜೋಡ್ಸಿ ನಡ್ಗಿಕಂಡ್ ನಿಂತವ್ಕೆ ಹೇಳ್ತ್.

ಹೆದ್ರ್‌ಬಡಿ! ನಾವ್ ಬಂದದ್ದ್ ನಿಮ್ಮ ರಕ್ಷಣೆಗೆನೆ. ನಮ್ಮ ಯುದ್ಧ ಕುಂಪಣಿ ಸರ್‌ಕಾರದ ವಿರುದ್ದನೆ. ಬನ್ನಿ ಎಲ್ಲವು. ರಾಜ್ಯಪಾಲ ಕಲ್ಯಾಣಸ್ವಾಮಿಯವ್ರ ಮಾತಾಡ್ಸಿ!"

ಕಲ್ಯಾಣಸ್ವಾಮಿ ಊರವ್ ತಂದ ಕುರ್ಚಿ ಮೇಲೆ ಕುದ್ದ್ ಪ್ರಮುಖ ಆಗಿದ್ದವ್ಕೆ. ಉಳ್ದ ಜನಕ್ಕೆ ಧೈರ್ಯ ಹೇಳ್ತ್. ಬೆಳ್ಳಾರೆಯವ್ ಅಂಜಲೀ ಬದ್ದಲಿ ನಿಂತ್ ಹೇಳ್ದೊ.

"ನಮ್ಮಿಂದ ಏನಾಕು, ಅಪ್ಪಣೆ ಕೊಡಿ"

ಕಲ್ಯಾಣಸ್ವಾಮಿ ಕೇಳ್ತ್.

"ನಮ್ಮ ಸೈನಿಕರಿಗೆಲ್ಲ ಊಟದ ಏರ್ಪಾಡ್ ಮಾಡಿಕೆ ಆದೋ? ಖರ್ಚಾಗ್ವ

ದುಡ್ಡು ನಾವ್ ಕೊಟ್ಟವೆ."

"ಖಂಡಿತ ಮಾಡ್ವೆ" ಆ ಜವಬ್ದಾರಿ ನಮ್ಮದ್. ನೀವು ಏನುಸ ಕೊಡ್ದು ಬೇಡ.

ರಾಮಗೌಡನನ್ನು, ದಂಡನಾಯಕನನ್ನು ಕರ್ದ್ ಕಲ್ಯಾಣಸ್ವಾಮಿ ಹೇಳ್ತ್.

ದಂಡನಾಯಕರೆ! ನಮ್ಮ ಸೈನಿಕರಂದ ಯಾವ ಜನಗಳಿಗುಸ ತೊಂದರೆ ಆಕೆ ಆಗದ್. ಅಡಿಗೆ ಗೊತ್ತಿರ್ವ ಸೈನಿಕರ್ ಊಟ ತಯಾರ್ಸಿಕೆ ಊರ್ನನವರೊಟ್ಟಿಗೆ ಸೇರಿಕಣಲಿ".

ಅಣ್ಣಿಗೌಡನ ಕರ್ದ್ ಅವ ಹೇಳ್ತ್:

"ಕೋಶಾಧಿಕಾರಿಗಳಿಗೆ, ಬೇಕಾದಷ್ಟ್ ಸೈನಿಕರ ಕರ್ಕಂಡ್ ನೀವು ಕೋಟೆನ ಮೇಲೆ ಹೋಗಿ, ಬೊಕ್ಕಸನ ತಕಣಿ. ಅಮಲ್ದಾರ ಅಡ್ಡಿ ಮಾಡ್ರೆ ಅದ್ನ ಕಟ್ಟಿಹಾಕಿ! ಕಾವಲ್‌ನವು ಕತ್ತಿ ಹಿಡ್ದರೆ ಅವ್ಕೆ ಬಡಿಯನಿ!"

ಬಡಪಾಯಿ ಕಾವಲ್‌ಗಾರಂಗ ಕೈ ಮುಗ್ದ್ ಹೆಬ್ಬಾಗಿಲ್ ತೆಗ್ದೊ.

ಅಮಲ್ದಾರ ಬದ್ಕಿರೆ ಸಾಕ್‌ಂತ, ನಡ್‌ಗ್‌ತ್ತಿದ್ದ ಕೈಂಗಳ್ದ ಬೊಕ್ಕಸದ ಬೀಗದ ಕೈ ಒಪ್ಪಿಸಿತ್.

ಸಾವಿರ ವರಹ ಇದ್ದ ಖಜಾನೆ ಈಗ ದಂಡ್‌ನ ಕೈಗೆ ಸಿಕ್ಕಿತ್.

ಕೋಟೆಲಿ ಮಲ್ಗಿಕೆ ಅನ್ಕೂಲ ಉಟ್ಟುಂತ, ಉಂಡ ಮೇಲೆ ಸೈನಿಕರ್ ಅಲ್ಲಿಗೆ ಹೋದೊ. ಕೊಡಗ್‌ನ ರಾಜರ ಬಾವುಟ ಕೋಟೆನ ಮೇಲೆ ಹಾರಾಡ್ತ್. ಪಂಜುನು ಉರಿತ್ತಿತ್ತ್.

ಮಹಾದ್ವಾರಲಿ ಆಯುಧ ಹಿಡ್ದ ಸೈನಿಕಂಗ ಕಾವಲ್ ನಿಂತೊ. ಉಳ್ದವೆಲ್ಲ ನಿದ್ದೆ ಮಾಡ್ದ ಮೇಲುಸ ಕಲ್ಯಾಣಸ್ವಾಮಿ ಬಾಳ ಹೊತ್ತುನವರ್ಗೆಸ ದಂಡನಾಯಕರೊಟ್ಟಿಗೆ ಮುಂದೆನ ಹೆಜ್ಜೆನ ಕುರ್ತ್ ಮಾತ್‌ಕತೆ ನಡ್ಸಿದೊ.

ನೊಡು ಇರ್ಲ್ ದಾಟಿ ಒಂದ್ ಘಳಿಗೆ ಆಗಿತ್ತ್. ಅವ ಮಲ್ಗಿಕಂಡ್ ಆಕಾಶ ನೋಡ್ತಿತ್ತ್. ಬೇಕಾದಷ್ಟ್ ಚುಕ್ಕಿಗ ಆಕಾಶಲಿದ್ದೊ. ಹಕ್ಕಿನಂಗೆ ಹಾರಿ ನಕ್ಷತ್ರಗಳ ಹಿಡ್ದ್ ಎಲ್ಲಿಗಾದರ್ ಹೋಗಿಬರೊಕು ಅಂತ ಮನ್ಸಾತ್ ಕಲ್ಯಾಣಸ್ವಾಮಿಗೆ. ದೂರಲಿ ಕಾಣ್ತಿದ್ದ ಗುಡ್ಡೆಗಳಂದ ಆಚೆ ಕೊಡ್ಗ್ ಸೀಮೆನ ಪುಷ್ಪಗಿರಿ ಬೆಟ್ಟ ಇತ್ತ್. ಅವನ ಹಳ್ಳಿ, ಅಷ್ಟ್ ಹೊತ್ತಿಗೆಲ್ಲ ನಿದ್ದೆ ಮಾಡಿರ್ವ ನನ್ನ ಅಮ್ಮನು, ಹೆಣ್ಣ್‌ನು. ಎಷ್ಟೊಂದ್ ಕಾಲ ಆತ್ ನಾ ಮನೆಬುಟ್ಟುದು! ಐದೆ ದಿನಂಗ! ಛೆ ಹೆಂಗೆ ಸಾಧ್ಯ ಇದ್? ಒಂದೆರಡ್ ವರ್ಷ ಆಗ್‌ವಷ್ಟ್ ಕೆಲ್ಸ ಆತ್ಲೆನಾ ಈ ಎರ್ಡ್ ಇರ್ಲ್‌ಲಿ, ಎರ್ಡ್ ಹಗಲ್‌ಲಿ?

ನಾನು ನನ್ನ ಸೇನೆನು ಹಿಡ್ದ ಸುರುನ ದುರ್ಗ... ಯುದ್ಧ ಅಲ್ಲ ಇದ್ ವಿಹಾರ.. ಜಾತ್ರೆಗೆ ಜನ ಹೋದ ಹಂಗೆ ಈ ದಂಡಯಾತ್ರೆ. ನಾವುಗೆ ಸರಿ ಬಲಲಿ ಇದ್ದ ವೈರಿ ಬಾಕನಳೇ ಯುದ್ಧ... ಸ್ವಾತಂತ್ರ್ಯ ಸೇನೆನ ಪರೀಕ್ಷೆ ಆದು ಅದೇ ಹೊತ್ತ್‌ಲಿ!

ಅದೆಲ್ಲ ಮುಗ್ದ ಮೇಲೆ ಕೊನೆಗೆ ವಿಜಯನ ಘೋಷಿಸಿ ಮತ್ತೆ ಊರಿಗೆ...

... ಯೋಚ್ಸುದು ಅಲ್ಲಿಗೆ ನಿಂತ್ ಸೇಂಕುದು ಜಾಸ್ತಿ ಆತ್. ಅಮ್ಮ ಕರ್ದ್ ಕೇಳ್ದಂಗೆ ಆತ್ ಕಲ್ಯಾಣಸ್ವಾಮಿಗೆ.

'ಪುಟ್ಟ ಬಸ್ಯಾ ನಿದ್ದೆ ಬಾತಾ?'

'ಊಂ'ತ ಹೇಳ್ತ್ ಕಲ್ಯಾಣಸ್ವಾಮಿ ಗಾಢ ನಿದ್ರೆಗೆ ಹೋಕಂಡ್.

## ೧೭

ಹೊತ್ತಾರೆನ ಕೂಡು ಮಾಡ್ದ ಮೇಲೆ ನಂಜಯ್ಯ ಸೈನಿಕರಿಗೆ ಹೇಳ್ತ್. "ಬೇಕಾರೆ ಊರೊಳಗೆ ನೀವ್ ಓಡಾಡಿ ಬರಕ್. ಉಂಬಕ್ ಕೋಟೆಗೆ ಬನ್ನಿ. ರಾಜ್ಯಪಾಲರ ಇಸ್ತಿಹಾರನ ವಿವರನ ಊರ್‍ನವ್ಕೆ ಹೇಳಿಬುಡಿ. ನಮ್ಮೊಟ್ಟಿಗೆ ಸೇರಿಕೆ ಗಟ್ಟಿಮುಟ್ಟುನ ಜವ್ವನಿಗರ್‌ಗ ಇದ್ದರೆ ಕರ್ಕಂಡ್ ಬನ್ನಿ. ಪೇಟೆಲಿ ಶಿಸ್ತ್‌ಲಿ ಇರೊಕು. ಸೈನ್ಯದ ಸೂತ್ರಗಳ ಮರಿಬಡಿ!"

ಕವಾಯತು ಮುಗ್ದ ಮೇಲೆ ರಾಮಗೌಡ ಹೇಳ್ತ್: "ಪುತ್ತೂರಿಗೆ ಯಾರಾದರೊಬ್ಬರ ಮೊದ್ಲೆ ಕಳ್ಸುದು ವಾಸಿ ನಡ್ಕಂಡೆ ಹೋಗಲಿ"

"ಹಂಗೆ ಮಾಡಿ" ಕಲ್ಯಾಣಸ್ವಾಮಿ ಹೇಳ್ತ್.

ಪುತ್ತೂರ್‌ನ ಗುರ್ತ ಇದ್ದ ತನಿಯಪ್ಪನ ಆ ಕೆಲ್ಸಕೆ ರಾಮಗೌಡ ಆರ್ಸಿತ್. ದಂಡನಾಯಕ, ದಳಪತಿಗ ಸುತ್ತ ಬಂದ್ ನಿಲ್ಲಿಕಾನ ಕಲ್ಯಾಣಸ್ವಾಮಿ ನಂಜಯ್ಯನ ನೋಡಿ ಹೇಳ್ತ್. "ಕಾಶಿಗೆ ಧೂತರ ಇಲ್ಲಿಂದ್ಲೆ ಕಳ್ಸಮ, ಆಕಿಲೆನಾ?

ಪ್ರವಾಸಲಿಯೆ ಸುಮಾರ್ ದಿನ ಹೋದೆಲ?"

ನಂಜಯ್ಯ ಹೇಳ್ತ್ : "ಹೌದು ಈಗಳೆ ಕಳ್ಸೊಕು. ಯಾತ್ರೆ ಹೊರ್ಟವರಂಗೆ ಧೂತರು ಹೋಕು. ಕುದುರೆ ತಕಂಡ್ ಹೋಗುವಂಗೆನು ಇಲ್ಲೆ. ದಾರಿಲಿ ಇಂಗ್ಲೀಷರ ಕೈಗೆ ಸಿಕ್ಕಿ ಬೀಳಿಕೆ ಆಗದ್. ಅಲ್ಲಿಗೆ ಹೋಗುವವ ಬೇರೆವು ಇದ್ದೆ ಇದ್ದವೆ. ಅವರೊಟ್ಟಿಗೆ ಸೇರಿಕಂಡ್ ಹೋಕು."

"ಮಹಾರಾಜರ್ ಇನ್ನ್ ತಡಮಾಡ್ರೆ ಆಕಿಲ್ಲೆ,, ವೇಷ ಮರ್‍ಸಿ ಈ ಸೀಮೆಗೆ ಬಂದುಬುಡಿಂತ ತಿಳ್ಸಮ"

"ಆದು"

ಧೂತರ ನೀವೇ ಆರ್ಸಿ. ಇಬ್ಬರೆ ಸಾಕಲ? ಒಬ್ಬಂಗಾದ್ರ್ ಹಿಂದೂಸ್ಥಾನಿ ಬರೊಕು"

"ಆದು"

ಧೂತರ ನೀವೇ ಆರ್ಸಿ. ಇಬ್ಬರೆ ಸಾಕಲ? ಒಬ್ಬಂಗಾದ್ರ್ ಹಿಂದೂಸ್ತಾನ ಬರಕು"

"ಆದು, ಗೊತ್ಮಾಡ್ನೆನೆ"

"ಮಾಚಯ್ಯ ಹೆಂಗೆ?"

ಒಬ್ಬ ಅವನೆ. ಇನ್ನೊಬ್ಬನ ಸೋಮಯ್ಯನ ಕೇಳಿ ಹೇಳ್ನೆ"

"ಆದು"

.... ಆ ಆಯ್ಕೆ ಮುಗ್ತ್. ಮಧ್ಯಾಹ್ನ ಉಂಡಾದ ಮೇಲೆ ಕಾಶಿಲಿ ರಾಜಂಗೆ ತಲ್ಪಿಸಕಾದ ಪತ್ರ ತಕಂಡ್ ಮಾಚಯ್ಯ ಇನ್ನೊಬ್ಬನೊಟ್ಟಿಗೆ ಹೊರ್ಡಿಕೆ ತಯಾರಾತ್. ಕೋವಿ, ಕತ್ತಿ ಇತ್ಲೆ. ಕುದ್ರೆ ಇತ್ಲೆ. ಅವು ಬರಿ ಕಾಶಿಗೆ ಹೋಗುವವು ಮಾತ್ರ. ಅವು ಅಲ್ಲಿಂದ ಹೊರ್ಟದ್ಸ ಯಾರಿಗೆ ಗೊತ್ತಾಗದಂಗೆ ಸೈನಿಕರಿಗೆಸ ಗೊತ್ತಿತ್ಲೆ.

ಮಾಚಯ್ಯ ಎಲ್ಲಿಟ್ಟು? ಗುರ್ತದವ್ ಕೇಳಿಕಾನ ಸಿಕ್ಕಿದ ಉತ್ತರ ಇಷ್ಟೆ.

"ರಾಜ್ಯಪಾಲರ್ ಎಲ್ಲಿಗೋ ಕಳ್ಸಿಳೊ"

...ಬೇರೆಸ ಇಬ್ಬರ್ ಓಲೆಕಾರರ್ ಬೇಕಾಗಿತ್ತ್.

ಕಲ್ಯಾಣಸ್ವಾಮಿ ಕೇಳ್ತ್:

"ಕೊಡಗ್ ಸೀಮೆಗೆಸ ಇಲ್ಲಿಂದ ಕಾಗದ ಕಳ್ಸಮ, ಏನ್ ಹೇಳ್ರೆ? ನಂಜಯ್ಯ ಹೇಳ್ತ್.

ನಾನೂ ಅದರ್ನೆ ಹೇಳಕುಂತ ಇದ್ದೆ.

ಎಂತ ತಿಳ್ಸಮ?

ನೊಡುಲಿ ಬಾಯಿ ಹಾಕಿ ಚೆಟ್ಟಿ ಹೇಳ್ತ್: "ಇನ್ನೆಂತ ಹೇಳ್ದು? ಬೇಗ ಬನ್ನಿಂತ"

"ಬಂದ್ ನಮ್ಮ ಸೇರಿಕಣಿ ಅಂತ ಅಲಾ?"

"ಹೂಂ"

ಅದ್ ಇಸ್ತಿಹಾರದಂಗೆನೆ ಇದ್ದ ಕಾಗದ. ಎಲ್ಲಾ ದೇಶಪ್ರೇಮಿಗಳಿಗೆ ಕಳ್ಸಿದ್. ಅದ್ಸ ರಾಜರ ಹೆಸ್ರ್‌ಲಿ, ಪವಿತ್ರ ಸ್ವಾತಂತ್ರ್ಯದ ಹೆಸ್ರ್‌ಲಿ ಕೊಟ್ಟ ಕಾಗದ.

ರಾಜಭಕ್ತಿ ಇರ್ವ ಎಲ್ಲ ಪ್ರಜೆಗಸ ಆಯುಧ ಹಿಡ್ಕಂಡ್ ಬಂದ್ ನಮ್ಮೊಟ್ಟಿಗೆ

ಸೇರಕುಂತ ಕಲ್ಯಾಣಸ್ವಾಮಿ ಆ ಇಸ್ತಿಹಾರಲ್ಲಿ ಬರ್ದಿತ್ತ್. ಓಲೆಕಾರರ್ ಅದರ ತಕಂಡ್ ಹೊರ್ಟೊ.

ಸಾಯಂಕಾಲ ಊರ್ನ ಮುಖಂಡರ್ನೆಲ್ಲ ಕಲ್ಯಾಣಸ್ವಾಮಿ ಬಾಕೆ ಹೇಳ್ತ್. ಬಂದವರ ಚಾಪೆ ಹಾಕಿ ಕುದ್ರಿಕೆ ಹೇಳ್ತ್. "ನಾವು ಸುರು ಮಾಡ್ದ ಯುದ್ಧದ ಉದ್ದೇಶ ಅರ್ಥ ಆಗಿಟಲಾ?"

ದೊಡ್ಡವರಂಗೆ ಕಾಣ್ತಿದ್ದ ಒಬ್ಬ ಹೇಳ್ತ್ : "ನಿನ್ನೆ ಸರಿ ಗೊತ್ತಿತ್ಲೆ, ಈಗ ಲಾಯ್ಕ ಗೊತ್ತಾತ್"

"ನಮ್ಮ ಸೈನಿಕರಂದ ಏನಾದ್ರ್ ಉಪದ್ರ ಆತಾ?"

"ಇಲ್ಲೆ ಸ್ವಾಮಿಯವೇ"

"ನಿನ್ನೆ ಕತ್ತಲೆಗೆ ಸಂಶಯಲಿನೆ ನೀವು ಊಟ ಹಾಕಿದ್ದ್. ಇರ್ಲ್ ನಮ್ಮ ದಂಡ್ ಲೂಟಿ ಮಾಡ್ದೆಂತ ನೀವು ರಾತ್ರಿ ಪೂರಾ ನಿದ್ದೆ ಮಾಡ್ತ್‌ಲೆ ಕಂಡದೆ ಅಲಾ?"

ಆ ಮಾತ್‌ಲಿ ವಿಶ್ವಾಸ ಇದ್ದಹಂಗೆ ಕಂಡದ್ದಂರ್ದ ತಪ್ಪೊಪ್ಪಿಕಣುವಂಗೆ ಆ ಮುಖಂಡರ್ ನಗಾಡ್ದೊ.

ಕಲ್ಯಾಣಸ್ವಾಮಿನು ನಗಾಡಿಕಂಡ್ ಹೇಳ್ತ್. "ನಾಳೆ ಹೊತ್ತಾರೆ ನಮ್ಮ ದಂಡ್ ಪುತ್ತೂರಿಗೆ ಹೊರ್ಟದೆ. ಅಲ್ಲಿಂದ ಮುಂದೆ ಹೋಗಿ ಮಂಗಳೂರ್ನ ವಶಪಡ್ಸಿಕಂಡವೆ. ಕುಂಪಣಿ ಸರ್ಕಾರ ಸೋಲ್ದು ಖಂಡಿತಂತ ಜನ ಮಾತಾಡಿಕಂಡವೆ."

"ನಮ್ಮ ಇಸ್ತಿಹಾರದ ವಿಷ್ಯ ಅವ್ಕೆ ಗೊತ್ಲೆ ಕಂಡದೆ"

"ಇಲ್ಲೆ, ಅವ್ಕೆಲ್ಲಾ ಗೊತ್ತಾಕನ ಭಾರಿ ಖುಷಿ ಆದರ್ಲಿ ಸಂದೇಹನೆ ಇಲ್ಲೆ.

"ಬೇರೆಂತ ಸುದ್ದಿ"

"ಜಿಲ್ಲೆನ ಕಲೆಕ್ಟರ್ ನಿನ್ನೆ ಮಂಗಳೂರ್‌ಂದ ಪುತ್ತೂರಿಗೆ ಬಾತ್. ನಂಜಯ್ಯ ಹುಬ್ಬು ಕುಣ್ಸಿ ಹೇಳ್ತ್ : ಆಹಾ! ಅದೇ ಮುಖ್ಯ ವಿಷ್ಯ!"

"ಆದರೆ ಇಂದ್ ಕುದುರೆ ಹತ್ತಿ ವಾಪಾಸ್ ಹೊರ್ಟ್‌ಹೋತ್!"

"ಯಾಕೆ, ಏನಾತ್‌ಗಡ? ರಾಮಗೌಡ ಕೇಳ್ತ್."

"ಮಂಗಳೂರ್ಲಿ ಬಂದೋಬಸ್ತ್ ಮಾಡಿಕೆ ಹೋದಗಡ!"

"ಹಂಗೆನಾ"

ಕಲ್ಯಾಣಸ್ವಾಮಿ ಕೇಳ್ತ್ : "ಹಂಗಾರೆ ಸರ್ಕಾರದ ಕಡೆನವು ಪುತ್ತೂರ್ಲಿ ಯಾರೊಳ?

"ಶಿರಸ್ತೇದಾರ, ಕರಣಿಕ ದೇವಪ್ಪಯ್ಯ ಅಂತ"

"ಜೋರ್ನ ಆಸಾಮಿ! ರಾಮಗೌಡ ದೇವಪ್ಪಯ್ಯನ ಕುರ್ತ್ ಹೇಳ್ತ್. ಕಲ್ಯಾಣಸ್ವಾಮಿ ತನಿಯಪ್ಪನೊಟ್ಟಿಗೆ ಹೇಳ್ತ್.

"ಕಚೇರಿಲಿ ಸೇನೆ ಇಸಿಟಾ?"

"ಸೈನ್ಯ ಇಲ್ಲೆ. ಕಾವಲಿಗಿರ್ವ ಸಿಪಾಯಿಗ ಒಳ."

"ಹಂಗಾರೆ ಇಂದ್‌ಸ ಯುದ್ಧ ಇಲ್ಲೆ. ನಂಜಯ್ಯಂಗೆ ನಿರಾಶೆ ಆತ್.

ಕಲ್ಯಾಣಸ್ವಾಮಿ ರಾಮಗೌಡನ ಕೇಳ್ತ್.

"ಹೊರಡಮನಾ?"

"ಓಹೋ! ಹಗ್‌ಲ್ ಹೊತ್ತ್‌ಲಿ ನಮ್ಮ ದಂಡ್‌ನ ಜನಗ ನೋಡಲಿ". ಹಗ್‌ಲ್ ಹೊತ್ತ್‌ಲಿಯೆ ಪುತ್ತೂರ್‌ನ ಜನಂಗ ದಂಡ್‌ನ ನೋಡ್ದೊ. ಹೊತ್ತಿಕಂಡಿದ್ದ ಸೂಟೆಗ, ಬಾವುಟ, ಕುದುರೆ ಓಡ್ಸುವವು, ಸೈನಿಕರ್, ಕೋವಿಂದ ಹಿಡ್ದ್ ಕೊತ್ತಳಿಕೆವರ್‍ಗೆ ಆಯುಧಗ ಚಿತ್ರ ವಿಚಿತ್ರ ಸೈನಿಕರ್

ಸೇನೆ ದಾಟಿಕಂಡ್ ಇದ್ದಹಂಗೆ, ಬೀದಿನ ಮೂಲೆಗಳ್ಲಿ ರಾಜ್ಯಪಾಲ ಕಲ್ಯಾಣಸ್ವಾಮಿನ ಇಸ್ತಿಹಾರನ ರಾಮಗೌಡ ಓದಿಸ್ತ್. ಮನೆ ಬಾಗ್ಲ್ ಮುಚ್ಚಿಕಂಡಿದ್ದರು ಸಹ ಜನ ಇಸ್ತಿಹಾರನ ವಿವರಕ್ಕೆ ಕಿವಿಗೊಡ್ತಿದ್ದೊ. ಜಯಘೋಷನ ಅರ್ಥ ಮಾಡಿಕಂಡ್ ಅವ್ ಹೋಗ್ತಿದ್ದುದರ ಆಶ್ಚರ್ಯಲಿ ನೋಡ್ತಿದ್ದೊ.

ರಾಮಗೌಡ ಹೇಳ್ದಂಗೆ, ಕುದುರೆ ಹತ್ತಿದ ತನಿಯಪ್ಪನೊಟ್ಟಿಗೆ ಇನ್ನೈದ್ ಜನ ಕಚೇರಿಗೆ ಮುಂದೆನೆ ಓಡಿ ಬಂದೊ. ಅಲ್ಲಿಂದ ತಪ್ಪಿಸಿಕಣಿಕೆ ನೋಡ್ತಿದ್ದ ಕರಣಿಕ ದೇವಪ್ಪಯ್ಯನ ಕಟ್ಟಿ ಹಾಕಿದೊ. ಕೋವಿ ಬಿಸಾಡಿ ಓಡ್ತಿದ್ದ ಕಾವಲುಗಾರರ್ಲಿ ಕೈಗೆ ಸಿಕ್ಕಿದ ನೂರ್ ಜನನ ಹಿಡ್ಕಂಡೊ.

ಕಚೇರಿನ ಎದುರ್‍ಲಿ ಸೇನೆ ನೆರ್ದಂಗೆ, ಕಲ್ಯಾಣಸ್ವಾಮಿ ಕಟ್ಟಡದೊಳಗೆ ಹೋತ್. ಆ ಭವನಲಿ ಒಂದ್ ಕಡೆ ವಿಕ್ಟೋರಿಯ ರಾಣಿನ ಚಿತ್ರ ತೂಗುಹಾಕಿ ಕೆಳಗೆ ಈಸ್ಟ್ ಇಂಡಿಯಾ ಕಂಪೆನಿನ ಅಂಕಿತನ ಬರ್ದಿದ್ದೊ. ಅಲ್ಲೇ ನೆಲಲಿ ಭಾರಿ ಲಾಯ್ಕದ ಕುರ್ಚಿ ಕುದ್ರಿಕೆ ಇತ್.

ಕಲ್ಯಾಣಸ್ವಾಮಿ ಗಟ್ಟಿಲಿ ನಗಡಿಕಂಡ್ ಹೇಳ್ತ್.

"ಕುಂಪಣಿ ಸರ್ಕಾರ ಇತ್ತ್‌ಂತ ಹೇಳಿಕೆ ಇದೇ ಸಾಕ್ಷಿ".

ನಂಜಯ್ಯ ಕೇಳ್ತ್.

"ಕಲೆಕ್ಟರ್ ಸಾಹೇಬ ಕುದ್ರುವ ಪೀಠನ ಇದ್?"

"ಹೌದುಗಡ" ಯಾರೋ ಒಬ್ಬ ಹೇಳ್ತ್.

ಕಲ್ಯಾಣಸ್ವಾಮಿ ಆ ಆಸನದತ್ರ ಹೋಗಿ ಎಡಕೈಲಿ ಅದ್ರ ಹಿಡ್ದ್ ಆಚೀಚೆ ಅಲ್ಲಾಡ್ಸಿತ್.

"ರಾಜ್ಯಪಾಲರ್ ಕಚೇರಿ ನಡ್ಯೊಕು" ರಾಮಗೌಡ ಹೇಳ್ತ್. ಕಲ್ಯಾಣಸ್ವಾಮಿ ನಗಾಡಿ, ಆ ಪೀಠಲಿ ಮೇಲೆ ಕುದ್ದ್ ಹೇಳ್ತ್ : "ಎಲ್ಲಿ ಆ ಕರಣಿಕ? ಕರ್ಕಂಡ್ ಬನ್ನಿ"

ಕತ್ತಿ, ಕೋವಿ, ದೊಣ್ಣೆಗಳ ಹಿಡ್ಕಂಡವ್ ಆಸನದ ಸುತ್ತ ನಿಂತೊ. ಎರ್ಡ್ ಬದಿಗಳ್ಲಿ ಸೇನೆನ ಮುಖ್ಯಪಟ್ಟವು ಇದ್ದೊ.

ಹಗ್ಗಂದ ಎರ್ಡ್ ಕೈಗಳಸ ಬಿಗ್ದ್ ಕಟ್ಟಿದ್ದ ದೇವಪ್ಪಯ್ಯನ ಕಲ್ಯಾಣಸ್ವಾಮಿಯ ಎದ್ರ್ ತಂದ್ ನಿಲ್ಸಿದೋ.

"ನೀನೇನಾ?, ಕರಣಿಕ ದೇವಪ್ಪಯ್ಯ? ಕಲ್ಯಾಣಸ್ವಾಮಿನ ಮಾತಿಗೆ ದೇವಪ್ಪಯ್ಯ ಉತ್ತರ ಕೊಟ್ಟತ್ಲೆ. ನೊಡು ವಯಸ್ಸ್‌ನ ಮೊನ್ಸ. ದಪ್ಪದ ಕುಳ್ಳ ದೇಹ, ಎರ್ಡ್ ಕಡೆಗಳ್ಲಿಸ ಇಳ್ದ ಮೀಸೆ, ಅಗಲ ಕಣ್ಣ್‌ಗ. ಕಟ್ಟಿಹಾಕಿರುಸ ಹಾಂಕಾರ ಹಂಗೆ ಇತ್ತ್ ಅವನ ಮೋರೆಲಿ.

ಅವನ ಹಿಡ್ಕಂಡ್ ಇದ್ದ ಸೈನಿಕ ಅವನ ಅಂಗಿನ ಹಿಡ್ದ್ ತಿರ್ಗಿಸಿ ಹೆದ್ರಿಸಿತ್.

"ಬೊಗ್‌ಳು! ಬಾಯಿ ಬಾದ್ಲೆನಾ?"

"ಸುಮ್ಮನಿರ್, ಅವಮಾನ ಮಾಡ್ಬೇಡ ಅವಂಗೆ"– ಕಲ್ಯಾಣ ಸ್ವಾಮಿ ಹೇಳ್ತ್. ವಾಪಾಸ್ ಅವನ ಕಡೆ ತಿರ್ಗಿ.

"ಏನಿಯಾ, ಇನ್ನ್ ನೀನ್ ನಮ್ಮ ಕರಣಿಕ ಆದ್ಯನಾ?" ದೇವಪ್ಪಯ್ಯ ನುಂಗುವಂಗೆ ಕಲ್ಯಾಣಸ್ವಾಮಿನ ನೋಡಿಕಂಡ್ ಹೇಳ್ತ್.

"ನಾನ್ ನಿಮ್ಮಂಥ ದರೋಡೆಕೋರರ ಚಾಕರಿ ಮಾಡ್ದುಲ್ಲೆ!"

ಸೋಮಯ್ಯ ಸಿಟ್ಟ್ ತಡಿಯಕಾಗದೆ ಕಿರ್ಚಿತ್

"ಬಾಯಿ ಮುಚ್ಚು"

ದೇವಪ್ಪಯ್ಯನ ಉದ್ಧಟತನ ಕಂಡ್ ಕಲ್ಯಾಣಸ್ವಾಮಿಗೆ ಆಕ್ರೋಶ ಬಾತ್. ಎಂಥ ಧೈರ್ಯ ನಿಂಗೆ! ನೀನ್ ಯಾರೊಟ್ಟಿಗೆ ಮಾತಾಡ್ತ ಒಳಂತ ಗೊತ್ತುಟಾ? ಹಿಂಗೆ ಎದ್ರ್ ಮಾತಾಡ್ರೆ ನಿನ್ನ ತಲೆ ಕಡ್ದ್ ಬುಟ್ಟವೆ.

ಕಲ್ಯಾಣಸ್ವಾಮಿ ಇಷ್ಟ್ ಸಿಟ್ಟ್ ಮಾಡಿಕಂಡದರ ಸುರುನ ಸರ್ತಿ ಕಂಡ ಸುಮಾರ್ ಜನಕ್ಕೆ ರೋಮಾಂಚನ ಆಗಿತ್ತ್.

ದೇವಪ್ಪಯ್ಯನ ಅವಸ್ಥೆ ಮುಗ್ದಹಂಗೆ ಅಂತನೆ ಅಲ್ಲಿದ್ದವೆಲ್ಲ ನೆನ್ಸಿದೋ.

ಒಂದು ಘಳಿಗೆ ದೇವಪ್ಪಯ್ಯನ ಹಂಗೆ ಸಿಟ್ಟ್‌ಲಿ ನೋಡಿಕಂಡ್ ಸೈನಿಕರಿಗೆ ಹೇಳ್ತ್:

"ಇವನ ಕಟ್ಟಿಹಾಕಿಕಣಿ! ಒಟ್ಟಿಗೆ ಈ ಪ್ರಾಣಿನ ಕರ್ಕಂಡ್ ಪೋಯಿ. ಉಳ್ದವ್ಕೆ ಇದ್ ಪಾಠ ಆಗಲಿ.

... ಊರ್‍ನ ಮುಖಂಡರ್‌ಗ ರಾಜ್ಯಪಾಲರ ನೋಡಿಕೆ ಬಂದೊ. ವ್ಯಾಪಾರಿಗ ರಕ್ಷಣೆ ಬೇಕುಂತ ಕೇಳ್ದೊ. ಅವೆಲ್ಲವು ಹೇಳ್ದೊ ನಮ್ಮಿಂದ ಏನಾಕು ಅಪ್ಪಣೆ ಕೊಡಿ. ಸರ್ಕಾರದ ಬೊಕ್ಕಸನ ಆಗಲೇ ವಶಪಡ್ಸಿಕೊಂಡಿದ್ದ ಅಣ್ಣಿಗೌಡನ ನೋಡಿಕಂಡ್ ಕಲ್ಯಾಣಸ್ವಾಮಿ ಹೇಳ್ತ್,

ನಿಮ್ಮ ದುಡ್ಡು ನಾವುಗೆ ಬೇಡ. ಆದರೆ ಜನಬಲ ಶಸ್ತ್ರ ಸಾಮಾಗ್ರಿಗ ಎಷ್ಟಿದ್ದರು ಬೇಕು. ಇಸ್ತಿಹಾರ ಕೇಳ್ಯೊಳರಿ ಅಲ? ನಿಮ್ಮ ದೇಶಪ್ರೇಮದ ಬಗ್ಗೆ ತರಕಾರಿಲ್ಲೆ ನಾವುಗೆ. ಆದರೆ ಜನ ಅವಾಗಿಯೆ ನಮ್ಮ ಕಡೆ ಸೇರುವೆಂತ ನಂಬ್ಯೊಳ.

ಆದು ಸ್ವಾಮಿ, ನಮ್ಮ ಕೈ ಮೀರಿ ಪ್ರಯತ್ನ ಮಾಡ್ವೆ. ನಂಜಯ್ಯ ನೊಡುಲಿ ಪ್ರವೇಶಿಸಿ ಕಲ್ಯಾಣಸ್ವಾಮಿನ ಕಡೆ ನೋಡಿ ಹೇಳ್ತ್.

"ಇಲ್ಲಿ ನಮ್ಮ ಅಡಿಗೆ ನಾವೆ ಮಾಡಿಕಣಕ್. ದುಡ್ಡು ತಕಂಡ್ ಅಕ್ಕಿ ಬೇಳೆ ಕೊಡಲಿ. ಪಾತ್ರೆಗ ಸಿಕ್ಕುದೆನಾ?

ವ್ಯಾಪಾರಿಗ ಹೇಳ್ದೊ: "ದುಡ್ಡು ತಕಂಬುದುಂತ ಹೇಳ್ರೆ ಎಂತ? ಅಂಥ ವಿಷಯಾ ಮಾತಾಡ್‌ಬೇಡಿ ದಯವಿಟ್ಟು..."

ರಾಮಗೌಡ ಮತ್ತೆ ನಂಜಯ್ಯನೊಟ್ಟಿಗೆ ಮಾತಾಡ್ದ ಮೇಲೆ ಕಲ್ಯಾಣಸ್ವಾಮಿ, ಕಚೇರಿಂದ ಹೊರಗೆ ಬಾತ್. ಅವನೊಟ್ಟಿಗೆ ಇದ್ದ ದಂಡನಾಯಕ ನಂಜಯ್ಯ ಸೇನೆನ ಉದ್ದೇಶಿಸಿ ಹೇಳ್ತ್:

"ದೇವಸ್ಥಾನದ ಅಂಗಳಲಿ ನಮ್ಮ ಸೇನೆದ್ ಶಿಬಿರ. ಅಲ್ಲಿ ಡೇರೆ ಹೊಡಿಯಕೆ ಏರ್ಪಾಡ್ ಮಾಡ್ನೆ. ಶಿಸ್ತ್‌ಂದ ಸೈನ್ಯ ಅಲ್ಲಿಗೆ ಪೋಯಿ!"

## ೧೮

ಮಾರ್‍ನೆ ದಿನ ದಂಡ್ ಊರಿಡೀ ಸುತ್ತಿತ್ತ್. ಅದ್ ಸೇನೆನ ಶಕ್ತಿ ಪ್ರದರ್ಶನ. ಸಣ್ಣ ಹೈದಂಗ ದಂಡ್‌ನ ಹಿಂದೆನೆ ಹೋಗ್ತಿದ್ದೊ. ಇಂಗ್ಲಿಷರೊಟ್ಟಿಗೆ ಹೋರಾಡಿಕೆ ಇವರಂದ ಆದೊ ಅಂತ ಕೆಲವ್ಕೆ ಸಂಶಯ ಇದ್ದರೆ, ಇನ್ನ್ ಕೆಲವರ್ ಕುಂಪಣಿ ಸರಕಾರಕ್ಕೆ ಸೋಲು ಖಂಡಿತಂತ ನೆನ್ಸಿದೊ. ಇಂತ ಹೋರಾಟಂದ ಸ್ಫೂರ್ತಿ

ಪಡ್ಕಂಡ್ ಸೈನಿಕರಾಕೆ ತುಂಬಾ ಜನ ಮುಂದೆ ಬಂದೊ.

ಸುಳ್ಯಂದ ಹೊರ್ಡ್ತಿಕಾನ ಇದ್ದ ಸೈನಿಕರ ಸಂಖ್ಯೆ ಈಗ ಇಮ್ಮಡಿ ಆತ್.

ಸೇನೆಗೆ ಸೇರ್ವ ಪ್ರತಿಯೊಬ್ಬನ ಸ್ವಾತಂತ್ರ್ಯಕ್ಕೆ ಬೇಕಾಗಿ ಜೀವ ಕೊಡಿಕೆನ ತಯಾರಿದ್ದವು ಅಂತಲ್ಲ, ಹೂವುನೊಳಗೆ ನುಗ್ಗಿಕಂಡ ಹುಳಗಸ ಕೆಲವು ಇದ್ದೊ. ಸ್ವಾತಂತ್ರ್ಯ ಸಮರದ ಹೆಸ್ರ್ ಹೇಳಿಕಂಡ್ ಶ್ರೀಮಂತರಾಗ್ವ ಆಸೆ ಇತ್ತ್ ಅವ್ಕೆ.

ಮಹಾಲಿಂಗೇಶ್ವರ ದೇವಸ್ಥಾನ ಕೊಳಲಿ ಆ ದಂಡ್‌ನವು ಮೀದೋ. ದೇವ್ರಿಗೆ ಅಡ್ಡಬಿದ್ದೊ.

ಕಲ್ಯಾಣಸ್ವಾಮಿ ಆ ದಿನನ ಸಭೆ ನಡ್ಸಿತ್. ಊರವ್ರ ಕರ್ದ್ ಅವರ ಕಷ್ಟಗಳ ಕೇಳ್ತ್. ಕುಂಪಣಿ ಸರ್ಕಾರದ ರೀತಿ ನೀತಿ ವಿವರಗಳ ತಿಳ್ತ್. ಆಡಳಿತ ನೋಡಿಕಂಬಕೆ ಸ್ವಲ್ಪ ದಿನದ ಮಟ್ಟಿಗೆ ಅಧಿಕಾರಿಗಳ ನೇಮಿಸಿತ್.

ಖಡ್ಗದ ಮಾತ್ ಬಾಕನ ಊರ್ನ ಮುಖಂಡೊಬ್ಬ ಹೇಳ್ತ್: "ಕಮ್ಮಾರರ ಕರ್ಸಿ ಮಾಡ್ಸಮ"

ಕಲ್ಯಾಣಸ್ವಾಮಿಗೆ ನೆಗೆ ಬಾತ್. ಅವ ಹೇಳ್ತ್: "ಬೆಂಕಿ ಬಿದ್ದ ಮೇಲೆ ಬಾವಿ ತೋಡುವ ಲೆಕ್ಕಾಚಾರ ಆತಲ!" ನಮ್ಮ ಕಮ್ಮಾರಂಗ ಕತ್ತಿ ಮಾಡಿಕೊಡುವರ್ಗೆ ಇಂಗ್ಲೀಷರ ಸೈನ್ಯ ಕಾದದ್ದೆನಾ?

ಹಿಂಗೆ ಹೇಳ್ದ ಮುಖಂಡ ಹಲ್ಲ್‌ಕಿರ್ತ್.

ಕಲ್ಯಾಣಸ್ವಾಮಿ ಹೇಳ್ತ್.

"ಯಾರ್‍ಯಾರ್ ಕತ್ತಿ ಕೋವಿ ಇಸಿಕಂಡೊಳನ ಅವೆಲ್ಲಾ ಹತ್ಯಾರಗಳ ಕಚೇರಿಗೆ ತಂದ್ ಕೊಡ್ಲಿ. ಅದ್ ಪೋರ್ಚಿಗೆ ತಂದದ್‌ಂತ ನಾವ್ ನೆನ್ಸಿಕಂಡವೆ. ಯುದ್ಧ ಮುಗ್ದ ಮೇಲೆ ವಾಪಾಸ್ ಕೊಟ್ಟವೆ.

ಮುಂದಿನ ಊರ್‌ಗಳಿಗೆ ಬೇಹುಗಾರರ್ ಹೋದೊ. ವಿಟ್ಲದ ತುಂಡರಸಂಗೆ ಸಿಕ್ಕಿಕೆ ಬರಕುಂತ ಸವಾರನೊಬ್ಬನೊಟ್ಟಿಗೆ ಕಲ್ಯಾಣಸ್ವಾಮಿ ಹೇಳಿ ಕಳ್ಸಿತ್.

ಕಪ್ಪಕಾಣಿಕೆಗಳೊಟ್ಟಿಗೆ ಬಂದ ಆ ಅರಸನನೊಟ್ಟಿಗೆ ರಾಜ್ಯಪಾಲ ಹೇಳ್ತ್ : ನಾವ್ ಹೇಳಿ ಕಳ್ಸುವವರ್‍ಗೆ ಬಾಕೆ ಆಗದ್ ಅಂತ ಮಾಡ್ಯೊಳರಿಯ? ಮಾತಾಡಿಕೆ ತಡವರ್ಸಿತ್ ವಿಟ್ಲದ ಅರಸ.

"ನಿಮ್ಮ ಪರಿಚಯ ಇಲ್ಲದೆ ಬಾಕೆ ಸರಿ ಆತ್ಲೆ." ಈಗ ನಮ್ಮ ಪರಿಚಯ ಆತಲ? ನಮ್ಮ ಧ್ಯೇಯ ಎಂತಾಂತ ಅರ್ಥ ಆಗಿರ್ದಲಾ?

"ಆತ್"

ಕುಂಪಣಿಯವರ ಏನ್ ಮಾಡೊಮ?

ಯುದ್ಧನೆ ಸರಿ. ನಮ್ಮಲ್ಲಿ ಶಕ್ತಿ ಇಲ್ಲದೆ ಇಷ್ಟ್ ಮುಟ್ಟ ಸುಮ್ಮನಿದ್ದೊ.

"ನಮ್ಮೊಟ್ಟಿಗೆ ಬಂದರೆನಾ ಹಂಗಾರೆ?"

ಉತ್ತರ ನಿಧಾನ ಆಥ್.

"ನಂಗೆ ವಯಸ್ಸಾತ್..."

ಈ ಹೈದನ ನೋಡ್ತ್‌ಲೆನಾ? ಕಲ್ಯಾಣಸ್ವಾಮಿ ಸೋಮಯ್ಯಂಗೆ ಬೆರ್ಲ್ ಮಾಡಿ ತೋರ್ಸಿತ್.

ನನ್ನಂದಸ ದೊಡ್ಡವನಾದ ಸೋಮಯ್ಯನ ನೋಡಿ ವಿಟ್ಲದ ಅರಸನ ಮೋರೆ ಕಪ್ಪಾತ್. ಸುಮ್ಮನೆ ಮಾತಾಡ್ದುದರಲ್ಲಿ ಅರ್ಥ ಇಲ್ಲೆಂತ ಕಲ್ಯಾಣಸ್ವಾಮಿ ಹೇಳ್ತ್.

"ಹೋಗಲಿ ಬುಡಿ, ವಿಟ್ಲಂದ ಕತ್ತಿ, ಕೋವಿ ಸಮೇತ ಸೈನಿಕರ ಕಳ್ಸಿ ಕೊಡಿ".

ಬದ್ಕಿದೆಂತ ಸರಾಗಲಿ ಉಸ್ರು ಬುಟ್ಟು ಆ ತುಂಡರಸ ಹೇಳ್ತ್.

"ನಿಮ್ಮ ದಂಡ್‌ನ ಸೇರಕುಂತ ಜನಗ ಆಗಲೇ ಮಾತಾಡಿಕಣ್ತಿದ್ದೊ.

"ಹಂಗೆನ? ಒಳ್ಳೆದಾತ್. ನೀವ್ ಕೊಡಗ್ ರಾಜರ ಕೂಚು ಅಂತನೆ ಭಾವಿಸೆನೆ. ಕಡಿಮೆಂತಾದರ್ ನೂರ್ ಜನ ಸೈನಿಕರ್ ವಿಟ್ಲಂದ ಬರೊಕು."

"ನೂರೈವತ್ತ್ ಜನ್ರ ಕಳ್ಸಿನೆ"

ಸಾಯುವವ್ ಬೇರೆಯವ್ರ ಮಕ್ಕಳಾಕನ ನೂರೈವತ್ತಾದರೇನ್. ಇನ್ನೂರಾದರೇನ್ ಮನ್ಸ್‌ಲಿಯೆ ಹೇಳಿಕಂಡ್ ಕಲ್ಯಾಣಸ್ವಾಮಿ ಹೇಳ್ತ್.

"ಆದು" ಇಂದ್ ನಮ್ಮಲ್ಲಿಯೇ ಉಂಡ್‌ದ್ದ್ ಹೋಕು ನೀವು.

"ಕ್ಷಮಿಸಕು" ನಾವು–ನೀವು.

"ನೀವುಗೆ ತೊಂದರೆ ಆದರೆ ಬೇಡ ಬುಡಿ. ಬನ್ನಿ ಶಿಬಿರನ ನೋಡಿ ಊರಿಗೆ ಹೋಗಿ ಮತ್ತೆ"

ಹಗ್‌ಲ್ ಹುಡ್ಕಿ ತಂದ ಅರ್ಥದಾರಿಗಳೊಟ್ಟಿಗೆ ಇರ್ಲ್ ಶಿಬಿರಲಿ ಯಕ್ಷಗಾನ ಮಾಡ್ಸಿದೋ. ಯಕ್ಷಗಾನ ಪ್ರಿಯ ಆಗಿದ್ದ ರಾಮಗೌಡನೆ ಅದರ ಜವಬ್ದಾರಿ ತಕಣ್ತ್. ತಲೆಲಿ ಮುಂದೆನ ಯೋಜನೆಗಳೇ ತುಂಬಿರುಸ ಸೈನಿಕರೊಟ್ಟಿಗೆ ಕಲ್ಯಾಣಸ್ವಾಮಿಸ ಕುದ್ದ್ ಅರ್ಥದಾರಿಗಳ ವಾಗ್ಸುದ್ದ ಕೇಳ್ತ್.

ಕೂಟ ನಡ್ಕಂಡ್ ಇದ್ದ ಹಂಗೆನೆ ಕಾವಲ್‌ಗಾರ ಒಬ್ಬ ಬಂದ್ ರಾಮಗೌಡನ ಕಿವಿಲಿ ಪಿಸಪಿಸಂತ ಎಂತದೋ ಹೇಳ್ತ್.

ಯಾರೋ ಒಬ್ಬ ಸವಾರ ಬಂದುಟು. ಸ್ವಾಮಿಯವರ ಕೂಡಲೇ ನೋಡಕಡ.

ಎದ್ದ್ ಹೋದ ರಾಮಗೌಡ ಒಂದೆರಡ್ ನಿಮಿಷಲಿ ವಾಪಾಸ್ ಬಂದ್ ಕಲ್ಯಾಣಸ್ವಾಮಿನ ಕರ್ಕಂಡ್ ಹೋತ್.

ಬಂದ ಸವಾರ ಸುಬ್ರಾಯ ಹೆಗಡೆನ ದೂತ. ಸವಾರಂಗೆ ಕೇಳದಂಗೆ ರಾಮಗೌಡನೊಟ್ಟಿಗೆ ಕಲ್ಯಾಣಸ್ವಾಮಿ ಗುಟ್ಟ್‌ಲಿ ಕೇಳ್ತ್.

ಯಾರ್ ಈ ಹೆಗ್ಗಡೆ!

"ಹೆಗ್ಗಡೆ? ಓ ಗೊತ್ತಾತ್! ಕುಂಬಳೆ ಹತ್ರ ಉತ್ತರಕ್ಕೆ ತೆಂಕುಬಳೆಂತ ಒಂದು ಹಳ್ಳಿ ಉಟ್ಟು. ಅದರ ಪಾಳೇಗಾರ ಅಲಾ. ಹೆಸರ್ ಕೇಳ್ದ್ ನೆಂಪಾತ್.

"ಪಾಳೆಗಾರಂತ ಹೇಳ್ದರಿಯ?"

ಹೂಂ. ವಿಜಯನಗರದ ಅರಸಂಗ ಕೋಟೆಗಳ ರಕ್ಷಣೆಗೆಂತ ಇವರ ಹಿಂದೆನವರೆಲ್ಲ ಕಳ್ಸಿದ್‌ಗಡ. ಇವೆಲ್ಲಾ ಕೋಟೆಯವು, ರಾಜಕ್ಷತ್ರಿಯ ವಂಶದವು.

"ವೀರರೆ ಅಲಾ?"

"ಹೌದ್"

ಕಲ್ಯಾಣಸ್ವಾಮಿ ಕಾಗದನ ರಾಮಗೌಡನ ಕೈಗೆ ಇಸಿತ್ತ್. ಓದಿ ನೋಡಿ. ನಾನ್ ಕುಂಪಣಿಯವರ ವೈರಿಂತನೂ, ದಂಡ್‌ನೊಟ್ಟಿಗೆ ಮಂಜೇಶ್ವರದ ದಾರಿಲಿ ನಿಮ್ಮ ಸೇರಿಕಣೆ ಅಂತನು ಬರ್ದುಟು. ಇದರ ಉದ್ದೇಶ ಏನಿರ್ದು? ರಾಮಗೌಡ ಕಾಗದ ಓದಿ ಹುಬ್ಬು ಗಂಟ್ ಹಾಕಿಕಣ್ತ್. ದೂರಲಿಯೆ ನಿತ್ತ ದೂತನ ಕಡೆಗೊಮ್ಮೆ ನೋಡಿ ಹೇಳ್ತ್.

"ಇಂಥದ್ದೆ ಉದ್ದೇಶಂತ ಹೇಳಿಕೆ ಕಷ್ಟ. ಆದರೆ ಸಹಾಯ ಮಾತ್ರ ಬೇರೆ ಬೇಕು. ಅವ ಆಗಿಯೇ ಬನ್ನೆಂತ ಹೇಳ್ದವನ ಬುಡ್ದು ಹೆಂಗೇ?"

ಅದ್‌ಸ ನಿಜ, ಗೆಳೆಯಂತನೆ ಅವನ ತಕಣಮ. ಆದರೆ ನಮ್ಮ ಹೆಸ್ರ್‌ಲಿ ಕೊಲೆ, ಲೂಟಿ ಆಕೆ ಆಗದ್. ಅವಂಗೆ ಉತ್ತರ ಬರಿಯಮ. ನಾವು ಶರ್ತ ಹಾಕ್ಯೊಳ ಅಂತ ಅವನೆನ್ಸಿಕಾಗದ್; ಉಪದೇಶಂತಸ ತಿಳ್ಕಣಿಕೆ ಆಗದ್. ಹಂಗೆ ಇರೊಕು ಒಕ್ಕಣೆ.

"ಆದು".

"ನಂಜಯ್ಯನ ಕರಿಯನಿ ಹಂಗಾರೆ"

.... ಬಂದ ದೂತ ಶಿಬಿರದ ಊಟದ ಮನೆಲಿ ಉಂಡತ್. ಕಲ್ಯಾಣಸ್ವಾಮಿನ ಸೈನಿಕರೊಟಿಗೆ ಸೇರಿಕಣ್ತ್. ಯಕ್ಷಗಾನ ನಡ್ದ ಕಡೆ ಕುದ್ದ್ ತೂಕಡ್ಸಿತ್ತ್. ಬೊಚ್ಚಿ ಸುಸ್ತಾದ ಆ ಮೊನ್ಸ ಕುದ್ರೆ ಕಟ್ಟಿ ಹಾಕಿದ ಕಡೆಗೊಮ್ಮೆ ನೋಡಿ ಅಲ್ಲಿಯೇ ನಿದ್ದೆಗೆ

ಜಾರ್ತ್. ಹೊತ್ತಾರೆ ಆಕನ ಕೊಂಬುವಾದ್ಯ ಎಲ್ಲ ಸೈನಿಕರೊಟ್ಟಿಗೆ ಇವಂಗೆಸ ಎಚ್ಚರ ಆತ್. ದಂಡನಾಯಕರಿಬ್ಬರ ಅಡಿಲಿ ಕವಾಯಿತು ನಡ್ದದರ ನೋಡ್ತ್. ಮತ್ತೆ ಕುಡಿಯ ಅಣ್ಣ ತಮ್ಮಂದರ ಒಟ್ಟಿಗೆ ಕಾಫಿ ಕುಡ್ತ್. 'ವೀರ ದಳಪತಿ ಸುಬ್ರಾಯ ಹೆಗ್ಗಡೆ'ಯವ್ಕೆಂತಲೇ ರಾಜ್ಯಪಾಲ ಕಲ್ಯಾಣಸ್ವಾಮಿ ಬರ್ದ್‌ಕೊಟ್ಟ ಉತ್ತರದೊಟ್ಟಿಗೆ ಆ ದೂತ ತೆಂಕುಂಬಳೆಯ ಕಡೆಗೆ ಸಾಗಿತ್.

....ಪುತ್ತೂರ್ಲಿ ಇನ್ನುಸ ಒಂದ್ ದಿನ ಇದ್ದರೆ ಸಾಕ್‌ಂತ ಸೇನಾಧಿಕಾರಿಗ ಹೇಳಿಕೆ ಸುರು ಮಾಡ್ದೊ. ಅದ್ರ ಬಲಪಡ್ಸುವಂಗೆ ಒಂದ್ ಸಂಗತಿ ಆತ್. ಊರ್‌ನ ಒಂದ್ ಮೂಲೆಂದ ಕೆಲವ್ ಜನಂಗ ಬಂದ್, ಕಲ್ಯಾಣಸ್ವಾಮಿನ ಎದ್ರ್ ಬಂದ್ ಕಿವಿ ಒಡೆವಂಗೆ ಕಿರ್ಚಿದೊ. ಮತ್ತೆ ಮತ್ತೆ ಹೆದ್ರಿಕೆ ಇಲ್ಲೆಂತ ಹೇಳ್ದ ಮೇಲೆನೆ ಅವು ಮಾತಾಡಿಕೆ ಸುರು ಮಾಡ್ದ್.

ನಡ್ದದ್ ಇಷ್ಟೆ. ಕಲ್ಯಾಣಪ್ಪನ ದಂಡ್‌ನವ್‌ಂತ ಹೇಳಿ ಹಂಞ ಜನ ಮನೆಗಳಿಗೆ ನುಗ್ಗಿ ಲೂಟಿ ಮಾಡ್ದೊ. ಹೆಂಗಸ್ರ ಕಿವಿ, ಕುತ್ತಿಗೆಲಿದ್ದ ಚಿನ್ನನ ಕಿತ್ತ್‌ಕಂಡ್ ಹೋಗ್ಯೊಳ.

ಸಿಟ್ಟ್‌ಬಂದ್ ಕಲ್ಯಾಣಸ್ವಾಮಿ ಹೇಳ್ತ್ : "ದಂಡನಾಯಕರೆ, ಈಗಂದ ಈಗನೇ ಶಿಬಿರಲಿ ಹುಡ್ಕಿ! ಕಳ್ಳರ್ ಯಾರ್‌ಂತ ಈಗನೆ ಗೊತ್ತಾಕು." ಅವರ ಗುರ್ತ ಹಿಡಿಯಕೆಂತ ಕದ್ದ್ ಹೋದ ಮನೆಗಳ ಜನಗಳೆ ಬಂದೊ. ಕೊಂಬುನ ಶಬ್ದಕ್ಕೆ ಸೈನಿಕಂಗೆಲ್ಲ ಶಿಬಿರಕ್ಕೆ ಬಂದೊ. ಆದರೆ ಕದ್ದ ವಸ್ತು ಒಡವೆ ಶಿಬಿರಲಿ ಇತ್ಲೆ. ಒಂದುವರೆ ಸಾವಿರಕ್ಕು ಜಾಸ್ತಿ ಇದ್ದ ಸೈನಿಕರ್ಲಿ ದೌರ್ಜನ್ಯ ಮಾಡ್ದವು ಗೊತ್ತಾತ್ಲೆ.

"ಇದ್ ಸುಳ್ಳ್ ಆರೋಪ!" ಕರಿಯಪ್ಪ ಸಿಟ್ಟ್‌ಲಿ ಹೇಳ್ತ್. ಆದರೆ ಮರ್ಡ್‌ವವರ ಪ್ರಾಮಾಣಿಕತೆನ ಸಂಶಯ ಪಟ್ಟತ್ಲೆ ಯಾರುಸ.

ಸೋಮಯ್ಯ ಹೇಳ್ತ್: ಇದ್ದಿರ್ದು ಬುಡಪ್ಪ, ಊರಿದ್ದಲ್ಲಿ ಹೊಲಗೇರಿ.

ಕಲ್ಯಾಣಸ್ವಾಮಿಗೆ ಇದ್ದಂರ್ದ ಬಾರಿ ಬೇಜಾರಾತ್.

"ಆ ಪಾಪಿಗಳ ಸಿಕ್ಕಿರೆ ಸಕ್ಕರೆ ಕಡಾಯಿಲಿ ಎಣ್ಣೆನ ಕುದ್ಸಿ ಹಾಕೊಕು! ರಾಮಗೌಡರೆ"

ಈಗ ಈ ಜನಕ್ಕೆಲ್ಲ ಐವತ್ತು ವರಹ ಕೊಡುವಂಗೆ ಅಣ್ಣಿಗೌಡ್ರಿಗೆ ಹೇಳಿ.

ಆ ವಿಚಾರಣೆ, ರಾಜ್ಯಪಾಲ ಪರಿಹಾರ ಕೊಟ್ಟ್, ಊರ್ನನವರ ದೃಷ್ಟಿಲಿ ಬಂಡಾಯಗಾರ ದಂಡ್‌ನ ಬೆಲೆ ಇನ್ನ್ ಹೆಚ್ಚಿತ್. ಜನಂಗ ಬೀದಿಲಿ ಮಾತಾಡಿಕಂಡ.

"ಕಲ್ಯಾಣಸ್ವಾಮಿ ಧರ್ಮಿಷ್ಠ! ದುಷ್ಠ ಶಿಕ್ಷಕ–ಶಿಷ್ಟ ರಕ್ಷಕ!"

ಆದರೆ, ಎಷ್ಟ್ ತಲೆಮಾರುಸ ತಿಂದ್‌ದ್, ಉಂಡರುಸ ಮುಗಿಯದೆ ಸಿರಿವಂತಿಕೆ ಇದ್ದ ಕೆಲವು ಮುಚ್ಚಿದ ಬಾಗ್ಲ್ ಪರಂಚಿಕಂಡ.

"ಸುರು ಆತ್ ಕಾಟಕಾಯಿ. ಕುಂಪಣಿ ಸರ್ಕಾರನೆ ಇದ್ದಿದ್ದರೆ ವಾಸಿ ಇತ್ತ್"

ಆ ಇರ್ಲ್ ಕಳ್ದ್ ಬೊಳ್ವಾದ ಮೇಲೆ ಸೂಟೆ ಹಿಡ್ಕಂಡ್ ಕೊತ್ತಳಿಕೆ ಭಟರ ದಂಡ್ ಮುಂದೆ ಹೋತ್. ಇಬ್ಬಿಬ್ಬರಂಗೆ ಸಾಲಕಟ್ಟಿ ನಿಂತರುಸ ಭಾರಿ ಉದ್ದದ ಸೇನೆ. ಕುದುರೆಗ ಮಾತ್ರ ಅಲ್ಲದೆ, ಬೊಕ್ಕಸನ ಬೇರೆ ಸಾಮಾನ್‌ಗಳ ಹೊತ್ತ ಹೋರಿಗ ಬೇರೆ ಇದ್ದೊ.

ಇದರೊಟ್ಟಿಗೆ ಖೈದಿ ದೇವಪ್ಪಯ್ಯ, ಮತ್ತೆ ಇಬ್ಬರ್ ಸಿಪಾಯಿಗ. ಖುಷಿಗಂತು ಯಾವ ಅಭ್ಯಾಸ ಇತ್ಲೆ.

'ಹೊಳೆ ಹೆಂಗುಟ್ಟು?' ಕಲ್ಯಾಣಸ್ವಾಮಿ ರಾಮಗೌಡನತ್ರ ಕೇಳ್ತ್.

ದಂಡನಾಯಕ ಗೌಡನ ಮೋರೆಲಿ ನೆಗೆ ಇತ್. "ತಕ್ಕ ಮಟ್ಟಿಗೆ ಉಟ್ಟು. ಆದ್ರೆ ಸಾಲ್ದ್. ಪಾಣಿ ಮೊಗರು– ನಂದಾವರ ದಾಟೊಮ, ಆಮೇಲೆ ಹೇಳ್ನೆ.

.. ಪಾಣಿ ಮೊಗರ್‌ನ ಸಂತೆ ಕಟ್ಟೆನ ಅಂಗಳಲಿ ಯುಗಾದಿನ ದಿನ ದಂಡ್ ಬೀಡ್‌ಬಿಟ್ಟತ್.

"ಸುಳ್ಯ"ಂದ ಇಂದ್ ಹೊರಡುಕಂತ ಗೊತ್ತಾದ ದಿನ"

ರಾಮಗೌಡ ಕಲ್ಯಾಣಸ್ವಾಮಿಗೆ ನೆಂಪು ಮಾಡ್ತ್.

ನೆಂಪುಟ್ಟುಂತ ಕಲ್ಯಾಣಸ್ವಾಮಿ ನಗಾಡ್ತ್.

ಒಬ್ಬ ಸೈನಿಕ ರಾಮಗೌಡನತ್ರ ಕುಲುಕುಲು ನಗಾಡಿಕಂಡ್ ಹೇಳ್ತ್: "ಕತ್ತಿಗ ಕೆಲ್ಸ ಇಲ್ಲದೆ ಬಡ್ಡಾಗ್ತ ಒಳ. ಹಂಗಾರೆ ಹೆಂಗೆ? ಕತ್ತಿಗೆ ಕೆಲ್ಸ ಕೊಡಿ.

ರಾಮಗೌಡನು ನಗಾಡಿ ಹೇಳ್ತ್.

"ಸದ್ಯಕ್ಕೆ ಅಡಿಗೆ ಮಾಡಿಕೆ ಸೌದೆ ಕಡ್ದ್ ತನ್ನಿ. ಬೇರೆ ಕೆಲ್ಸ ಮುಂದೆ ಮಂಗ್ಳೂರ್ಲಿ!"

ಊರವರ ಸಹಾಯ ಅಲ್ಲಿಸ ಕಡಿಮೆ ಏನ್ ಇತ್ಲೆ.

... ಹಬ್ಬದ ಊಟ ಮಾಡಕುಂತ ಇರಿಕಾನ ಆ ಹೊತ್ತಿಗೆ ಶಿಬಿರದ ಕಾವಲ್‌ನವು ದಂಡನಾಯಕರತ್ರ ಬಂದ್ ಕಾತರಲಿ ಸುದ್ದಿ ಮುಟ್ಸಿದೊ.

"ಯಾವುದೋ ಕಾಲಾಳ್ ದಂಡ್ ಬರ್ತಾ ಉಟ್ಟು"

ರಾಮಗೌಡ ಹುಬ್ಬು ಗಂಟ್ ಹಾಕಿತ್.

"ದಂಡ್?"

'ಹೂಂ' ಪುತ್ತೂರ್‌ನ ಕಡೆಂದ?"

ಅದ್ ಸಾಧ್ಯನೇ ಇಲ್ಲೆ. ಆದರುಸ ರಾಮಗೌಡ ಹೇಳ್ತ್.

"ಕೊಂಬು ಊದಿ! ಸೈನಿಕರ್ ತಯಾರಾಗಿ!"

ಉಂಬಕ್ಕೆಂತ ಹೊರ್ಟವು, ಹೋರಾಟಕ್ಕೆಂತ ಸೊಂಟ ಕಟ್ಟಿದೊ. ನಂಜಯ್ಯನತ್ರ ತಿರ್‍ಗಿ ಕಲ್ಯಾಣಸ್ವಾಮಿ ಹೇಳ್ತ್: "ನಮ್ಮ ಸೇರಿಕಣಿಕೆ ಕೊಡಗ್‌ಂದ ಜನ ಬಾದು ಕಂಡದೆ"

"ಇರ್‍ದು, ನೋಡಮ, ನಂಜಯ್ಯ ಹೇಳ್ತ್.

ಕಲ್ಯಾಣಸ್ವಾಮಿ ಹೇಳ್ದ್ ಸರಿ ಇತ್ತ್. ಬಂದವು ಘಟ್ಟದ ಕೆಳಗೆನ ಚೆಂಬು, ಪೆರಾಜೆಗಳ ರೈತ ಯೋಧರ್. ಇವರೊಟ್ಟಿಗೆ ವಿರಾಜಪೇಟೆನ ಪಾಡಿ ನಾಲ್ಕ್‌ನಾಡ್‌ನ ಕಲಿಗ. ಕಲ್ಯಾಣಸ್ವಾಮಿ ಹೇಳ್ತ್.

"ಇನ್ನೊಂದು ಉಪನದಿ ಗೌಡ್ರೆ!"

ಬಂದ ಎಪ್ಪತ್ತ್-ಎಪ್ಪತ್ತೈದ್ ಜನಗ ತಮ್ಮವುಂತ ಗೊತ್ತಾಕನ ಗರ್ಜಿಸಿಕೆ ಸಿದ್ಧ ಆದ ಸೈನಿಕಂಗ ಬಂದವರ ಸ್ವಾಗತ ಮಾಡ್ದೊ.

ಮತ್ತೆ ನಡ್ದ ಯುಗಾದಿನ ಊಟ ಬಾರಿ ಲಾಯ್ಕ ಇತ್ತ್. ತಮ್ಮ ಸೇರಿಕೆಂತ ಬಂದ ಕೊಡಗ್‌ನ ಪ್ರಮುಖರೊಟ್ಟಿಗೆ ಕಲ್ಯಾಣಸ್ವಾಮಿಯು, ದಂಡನಾಯಕ ಎಲ್ಲ ಬಾಳ ಹೊತ್ತು ಮಾತಾಡಿಕಂಡ್ ಕುದ್ದೊ.

ಕೊಡಗ್‌ಲಿಸ ಬಂಡಾಯದ ಗುಡ್ಗು ಜೋರಿತ್ತ್. ಮಡಿಕೇರಿ ಕೋಟೆಲಿ ಗಾಬರಿ ಹೆಚ್ಚಾಗಿತ್ತ್. ಬೋಪು ದಿವಾನನ ನೆಂಟ್ರ್‌ಗಳೆ ಬಂಡಾಯಕಾರರ ಸೇರಿಕೆ ಕನ್ನಡ ಜಿಲ್ಲೆಗೆ ಹೊರ್ಟಳಂತ ಕೇಳಿಕಾನ ಲೀಹಾರ್ಡಿನ ಧೈರ್ಯ ಎಲ್ಲ ಬಿದ್ದ್‌ಹೋತ್. ಕಂಡ್ ಕೇಳಿ ಗೊತ್ತಿಲ್ಲದ ಕಲ್ಯಾಣಸ್ವಾಮಿನ ಹೆಸ್ರ್‌ನ ಯಾರಾದರ್ ಹೇಳ್ರೆ ಸಾಕ್ ಅವ ಹೆದ್ರಿ ಹೋಗ್ತಿತ್ತ್. ಸೈಂಧವನಂಗೆ ಇದ್ದ ಅವನ ನಾಯಿ, ಕೋಟೆ ಪ್ರಾಕಾರದ ಮೇಲೆ ನಿಂತ್ ಬೊಗುಳಿಕಾನ ಕೈ ಕೋವಿನತ್ತನೆ ಹೋಗ್ತಿತ್ತ್. ಯಾವುದೋ ಗುಡ್ಡೆಲಿ ಹೊಗೆ ಕಂಡರೆ "ರೈತರ ದಂಗೆ"ಂತ ಹೆದರ್‍ತಿತ್ತ್.

ಕಾಡಿಗೆ ಬೆಂಕಿ ಬಿದ್ದರಂತು 'ವಿದ್ರೋಹಿಗಂತ' ಕಿರ್‍ಚ್ತಿತ್ತ್.

ಯಾರ್‍ನಸ ನಂಬಿಕೆ ಲೀಹಾರ್ಡಿ ತಯಾರಿತ್ಲೆ. ಅಮರ ಸುಳ್ಯದ ದಂಗೆನ ವಿಚಾರ ತಿಳಿಸಿತ್ಲೆಂತ ದಿವಾನ ಲಕ್ಷ್ಮಿನಾರಾಯಣನ ಮೇಲೆ ಸಂಶಯಲಿ ಅವನ ಕೆಲ್ಸಂದ ತೆಗ್ದ್ ಹಾಕಿತ್ತ್. ಒಳಗಿಂದೊಳಗೆ ಬೋಪುಸ ಪಿತೂರಿ ಮಾಡಿಬುಟ್ಟದೆಂತ ಹೆದ್ರಿಕೆ ಇತ್ತ್.

ಇಂತ ಆಡಳಿತದ ಬುಡಕ್ಕೆ ಕೊಡ್ಲಿಪೆಟ್ಟು ಕೊಡ್ದು ಭಾರಿ ಸುಲಭ. ಆದರೆ ಹೊಡಿಯಕೆ ಹೊರ್ಟವ್ಕೆ ಕೊಡಲಿ ಇತ್ಲೆ. ಕೊಡ್ಲಿ ಇದ್ದವು ಅದರ ಎತ್ತಿಕೆ ಹೋತ್ಲೆ.

"ಇಂಗ್ಲೀಷರ ಮಡೆ ತಿನ್ನವುಸ ಸುಮಾರ್ ಜನ ಇದ್ದರು, ಹೆಚ್ಚ್ ನಮ್ಮ ಕಡೆಗೆ. ಕೊಡಗ್‌ನ ಉತ್ತರದ ಉಕ್ಕಡನ ನೀವು ಹಿಡ್ದೊಳರಿ, ಕಾಶಿಂದ ರಾಜರ್ ಬಂದ್ ನಮ್ಮ ಸೇರ್ದ್ಯೊಳಂತ ಸುದ್ದಿ ಹಬ್ಬಿಟು. ಕಲ್ಯಾಣಸ್ವಾಮಿ ಯಾರ್‌ಂತ ಸುಮಾರ್ ಜನಕ್ಕೆ ಗೊತ್ತಿಲ್ಲದರುಸ ರಾಜರ ಕಡೆವುಂತ ಎಲ್ಲವುಕೆ ಗೊತ್ತುಟು. ಬಿಸಿಲೆಘಾಟಿಯಾಗಿ ನೀವ್ ಬಂದರೆಂತ ಎಲ್ಲವು ನೆನ್ಸಿಯೊಳ. ನಮ್ಮ ಸೈನ್ಯ ಪಶ್ಚಿಮಂದ, ತಾವುನಾಡ್‌ನವು ದಕ್ಷಿಣಂದ, ಎಡೆನಾಡ್‌ನವು ಉತ್ತರಂದ ಮಡಿಕೇರಿಗೆ ಮುತ್ತಿಗೆ ಹಾಕೊಕುಂತ ಗುಡ್ಡೆಮನೆ ಅಪ್ಪಯ್ಯನವು ಏರ್ಪಾಟ್ ಮಾಡಿ ದಾರಿ ನೋಡ್ತಾ ಒಳ. ಇನ್ನ್ ತೀರ್ಮಾನ ಮಾಡದೆ ಕುದ್ದವು ಒಳ. ಅವೆಲ್ಲ ಬಾವುಟ ನೋಡ್ದ ಹಂಗೆ ಓಡಿ ಬಂದವೆ.

ಮುಂದೆ ಆಕಾದ್ದ ಚಿತ್ರಗ ಯಾವುದೇ ಸಂಶಯ ಇಲ್ಲದಂಗೆ ಸರ್ಯಾಗಿ ರೂಪುಗೊಂಡತ್.

.... ಮಲ್ಗಿಕೆ ಮುಂದೆ ಕಲ್ಯಾಣಸ್ವಾಮಿ ಚೆಟ್ಟಿ ಕುಡಿಯನ ಒಟ್ಟಿಗೆ ಶಿಬಿರದ ಸುತ್ತ ನಡ್ದ್ ಹೋತ್. ನಿದ್ದೆನ ಲೋಕಲಿ ಗೊರಕೆದೆ ಸದ್ದ್ ಕೇಳ್ತಿತ್ತ್. ಕೆಲವು ಜನ ಇನ್ನ್ ಮಾತಾಡಿಕಂಡೆ ಇದ್ದೊ.

ಅವರತ್ರ ಹೋಗಿ ಜೋರ್ ಮಾಡಿ ಕಲ್ಯಾಣಸ್ವಾಮಿ ಹೇಳ್ತ್: "ಹಾಳ್ ಹರ್ಟೆ ನಿಲ್ಲಿಸಿ! ಮಲ್ಕಣಿ! ಸ್ವರ ಗೊತ್ತಾಗಿ ಮತ್ತೆ ಉಸ್ರುನ ಸದ್ದ್ ಕೇಳ್ತ್‌ಲೆ, ಮರದ ಕುಂಟೆಗಳಂಗೆ ಮಲ್ಗಿದೊ.

ಶಿಬಿರದ ಕಡೆಂದ ಹತೋಟಿ ತಪ್ಪಿದ ಸ್ವರಗಳ ಗಾಳಿ ಹೊತ್ತ್ ತಾತ್. ಚೆಟ್ಟಿನೊಟ್ಟಿಗೆ ಅತ್ತ ಹೋಗಿ ಕಲ್ಯಾಣಸ್ವಾಮಿ ಬೊಯ್ದ್ ಹೇಳ್ತ್.

ಯಾರ್ ನೀವು?

ಕುಡ್ಡವನ ಸ್ವರ ಕೇಳಿ ಬಾತ್

ಅವನ ಒಟ್ಟಿಗೆ ಇದ್ದ ಹೆಂಗಸ್ ನಗಾಡ್ದು ಕೇಳ್ತ್.

ಕಲ್ಯಾಣಸ್ವಾಮಿನ ಮೈಯೆಲ್ಲ ಉರ್ತ್. ಕೈಲಿ ಮುಷ್ಠಿ ಹಿಡ್ತ್. ಚೆಟ್ಟಿ ಮುಂದೆ ಹೋಗಿ ಆ ಕುಡ್ಕನ ಕೆನ್ನೆಗೆ ಒಂದ್ ಪೆಟ್ಟ್ ಕೊಟ್ಟತ್. ಹೆಂಗಸ್ ಓಡಿ ಹೋತ್. ಪೆಟ್ಟ್ ತಿಂದ್ ಅವಸ ಓಡಿಕೆ ನೋಡಿಕಾನ ಚೆಟ್ಟಿ ದೂಡಿ ಕೆಳಗೆ ಹಾಕಿತ್ತ್.

ಬೊಬ್ಬೆ ಕೇಳಿ ಓಡಿಬಂದ ಕಾವಲ್‌ನವ್ಕೆ ಕಲ್ಯಾಣಸ್ವಾಮಿ ಹೇಳ್ತ್: ಇವರಿಬ್ಬರ್

ಕಟ್ಟಿಹಾಕಿ–ಮೋರೆಗೆ ಮೊಸಿ ಉಜ್ಜಿ. ಬೊಳ್ಪಿಗೆ ಎಲ್ಲವು ನೋಡಲಿ!

ದೇವಪ್ಪಯ್ಯನು ಇನ್ನಿಬ್ಬರ್ ಸೈನಿಕರ್ ಮಲ್ಗಿದ್ದ ಮೂಲೆಗೆ ಒಮ್ಮೆ ನೋಡಿ, ಕಲ್ಯಾಣಸ್ವಾಮಿ ಗುಡಾರಕ್ಕೆ ಹೋತ್.

ಎಷ್ಟ್ ಹೊತ್ತಾದರುಸ ಕಲ್ಯಾಣಸ್ವಾಮಿನ ಬಿಸಿ ಏರ್ದ ಮೆದುಳು ತಣ್ಣಂಗೆ ಆತ್ಲೆ. ನಿದ್ದೆ ಅವನತ್ರ ಬಾತ್ಲೆ.

ಶಿಸ್ತು ಚೆಲ್ಲಾಪಿಲ್ಲಿ ಆದರೆ ಸರ್ವನಾಶ ಸಿದ್ಧ. ವಿಲಾಸಿ ಬದುಕುನ ಆಸೆ ಆದರೆ ಸ್ವಾತಂತ್ರ್ಯ ಸೇನೆ ಧೂಳೆದ್ದ್ ಹೋದೆ. ಲೂಟಿ, ಕುಡಿಯದು, ಸೂಳೆಗಾರಿಕೆ ಇದರ್‍ನೆಲ್ಲ ತಪ್ಸುವ ಮದ್ದು ಒಂದೇ, ಹೋರಾಟ. ಮನ್ಸ್ ಹುಚ್ಚು ನಾಯಿ ಆಕೆ ಬುಡಿಕೆ ಆಗದ್. ಸೇನೆ ಸಿಡ್ಲ್‌ನ ಹಂಗೆ ಹೋಕು ಮಂಗಳೂರಿಗೆ!

ಆದಷ್ಟ್ ಬೇಗ ಮಡಿಕೇರಿ ಮೇಲೆ ದಂಡೆತ್ತಿ ಹೋಕು! ಏನಾತ್‌ಂತ ಜನ ನೋಡಿಕಾಕನ ಯುದ್ಧ ಮುಗ್ದ್ ಹೋಕು.

ಮಲ್ಗಿದ್ದಲ್ಲೆ ಮೈ ಮುರ್ದ್, ಜಡ ತೆಗ್ದ್ ಹೊರಳಿದ ಕಲ್ಯಾಣಸ್ವಾಮಿ, ಕಣ್ಣ್‌ನ ಅವನೇ ಗಟ್ಟಿ ಮುಚ್ಚಿ ಹಿಡ್ತ್.

ಮೆದುಳು ಮತ್ತು ಜುಮ್ ಅಂತ ಹೇಳ್ತಿತ್ತ್. ವೇಗ! ಅದೊಂದೆ ಮುಖ್ಯ. ಬೇಗ ಬೇಗ ಮುಗ್ಸಕು.

## ೧೯

ನಂದಾವರಕ್ಕೆಂತ ಮುಂದೆ ಹೊರ್ಟತ್ ಸೇನೆ. ಮಸಿ ಪೂಜಿಕಂಡವು ಮೋರೆ ತೊಳ್ದರಾದರು, ತಲೆತಗ್ಗಿಸಿ ನಡಿತ್ತಿದ್ದೊ. ಅವರತ್ರ ಎಂತಸ ಹತ್ಯಾರಗ ಇತ್ಲೆ. ಕೊನೆಲಿ ನಡ್ಕಂಡ್ ಬರ್ತಿದ್ದೊ.

ದಾರಿಲಿ ಹೋಕನ ಅವರ ಬಗ್ಗೆ ರಾಮಗೌಡ ಹೇಳ್ತ್. "ಇಡೀ ಸೇನೆ ಒಂದ್ ದೇಹ ಇದ್ದ ಹಂಗೆ. ಅವಿಬ್ಬರ್ ಆ ದೇಹಲಿ ಎದ್ದ ಕಜ್ಜಿಗ."

ನಂದಾವರದ ರಾಜ ಇಂಗ್ಲೀಷರ ಎದುರಿಸಿಕೆ ಆಗದೆ ಅವರ ಸಾರ್ವಭೌಮತ್ವನ ಒಪ್ಪಿಕಂಡಿತ್ತ್. 'ಮಾಲೀಖಾನೆಲಿದ್ದ ಮಾಂಡಲಿಕ'ನಾಗಿ ಕುಂಪಣಿ ಸರಕಾರ ಅವನ ತಕಂಡಿತ್ತ್. ಆದರೆ ಅದೆಲ್ಲ ಸರಪಣಿಗೆ ಕೊಟ್ಟಂತ ಚಿನ್ನದ ಗಿಲೀಟ್ ಅಷ್ಟೆ. ಪರಕೀಯರ್‍ಂರ್ದ ಅವಮಾನಕ್ಕೆ ಸಿಕ್ಕಿ ಅವ ಕೆಣ್ಕಿದ ಹಾವ್‌ನಂಗೆ ಇತ್ತ್. ಬಂಡಾಯ ಏಳಿಕೆ ಸಮಯ ಕಾಯ್ತಿತ್ತ್.

ಅದ್ ಒದಗಿ ಬಾತ್. ಕಲ್ಯಾಣಪ್ಪನ ಸೇನೆ ಯಾತ್ರೆ ಸುರು ಮಾಡಿಕಾನ

ಅವಂಗೆ ಆಸೆ ಚಿಗ್‌ರ್ತ್.

ನಂದಾವರದ ಬಂಗರಾಜ ನಮ್ಮ ಕಡೆ ಸೇರ್ದಂತ ಪುತ್ತೂರ್ಲಿ ಇರಿಕಾನಲೇ ಕಲ್ಯಾಣಸ್ವಾಮಿಗೆ ಗೊತ್ತಿತ್ತ್. ಲಕ್ಷ್ಮಪ್ಪ ಬಂಗರಾಜ ಕುದುರೆ ಹತ್ತಿ, ಮುನ್ನೂರ್ ಜನ ಸೈನಿಕರೊಟ್ಟಿಗೆ, ಆರತಿ ಬಟ್ಲ್ ಹಿಡ್ದ್, ನಾಗಸ್ವರ ವಾದನದೊಟ್ಟಿಗೆ ಊರ್ನ ಹೊರಗೆ ಮಾಡ್ದ ಬಾಳೆ ಕಟ್ಟಿ ತೋರಣ ಹಾಕಿದ ದ್ವಾರಲಿ ಕಲ್ಯಾಣಸ್ವಾಮಿನ, ದಂಡನಾಯಕರ ಸ್ವಾಗತ ಮಾಡ್ತ್.

ಲಕ್ಷ್ಮಪ್ಪ ಬಂಗಾರಾಜ ಹೇಳ್ತ್: "ಒಂದ್ಸಾವಿರ ಹೊನ್ನು, ಮುನ್ನೂರು ಜನ ಯೋಧಂಗ ಇದ್ ನಂದಾವರದ ಕಾಣಿಕೆ ತಕಣಕು"

ಕಲ್ಯಾಣಸ್ವಾಮಿ ಬಂಗಾರಾಜನ ಪ್ರೀತಿಂದ ನೋಡ್ತ್. ತನ್ನಷ್ಟೆ, ಇಲ್ಲರೆ ನನ್ನಂದ ಹಂಞ ಜಾಸ್ತಿ ಪ್ರಾಯ ಮೋರೆ ತೇಜಸ್ಸ್‌ಂದ ತುಂಬಿತ್ತ್.

"ನೀವು ಹೆಂಗಿರುವಿರಿ ಅಂತನಾ ಕಲ್ಪಿಸಿಕಂಡಂಗೆ ನೀವು ಒಳರಿ ರಾಜರೆ" ಕಲ್ಯಾಣಸ್ವಾಮಿ ಹೇಳ್ತ್.

"ಬಂಗರಾಜನ ಮೋರೆ ಅರ್ಳಿತ್. ಉತ್ತರ ಸರ್ಯಾಗಿ ಕೊಡಿಕೆ ಆಗದೆ ಅವ ಹೇಳ್ತ್

"ಕೊಡಗ್ ರಾಜರ ಪ್ರತಿನಿಧಿಯಾಗಿ ಜಯ ಹೊಂದಕು. ಇಲ್ಲಿ ಆತಿಥ್ಯ ತಕಣಕು".

ನಡ್ಕಂಡೇ ಎಲ್ಲವು ಊರೊಳಗೆ ಹೋದೋ. ಕಲ್ಯಾಣಸ್ವಾಮಿ ಹೇಳ್ತ್: ಒಂದ್ವಿಷಯಲಿ ನಿಮ್ಮ ಮನಸ್ಸಿಗೆ ನೋವುಂಟು ಮಾಡ್ನೆ ರಾಜರೇ.

"ಹೇಳಿಯಪ್ಪಾ"

ವೈರಿ ಸಿದ್ಧ ಆಕೆ ಅವಕಾಶ ಕೊಡಿಕೆ ಆಗದ್. ಇಂದೇ ನಾವಿಲ್ಲಿಂದ ಹೊರ್ಡಕು.

"ಇಂದಾ?"

'ಹೂಂ' ಉಂಡ ಮೇಲೆ,

"ಇರ್ಲ್ ಆಕೆ ಆಕನ ಬಂಟ್ವಾಳ ವಶಮಾಡಿಕಂಡ್ ನಾಳೆ ನಾವ್ ಮಂಗ್ಳೂರಿಗೆ ಹೋಕು."

ಬಂಗರಾಜ ಮಡೆ ನುಂಗಿಕಣ್ತ್.

ಮೂರ್ನಾಲ್ಕ್ ದಿನ ನಮ್ಮ ನೆಂಟ್ರಾಗಿ ಇದ್ದರೆಂತ ನೆನ್ಸಿದೆ.

"ನೀವೆ ಹೇಳಿ ತಡಮಾಡ್ದು ಲಾಯ್ಕನಾ?"

ಅಲ್ಲ

ಸರಿ ಮತ್ತೆ!

ನಿಮ್ಮ ತೀರ್ಮಾನದಂಗೆ ಆಗಲಿ. ನನ್ನ ಸೈನಿಕರ್ ಸಿದ್ಧ ಒಳ. ಕೇಳ್ದೊ ಬೇಡನಾ ಅಂತ ನೆನ್ಸಿ, ಕಲ್ಯಾಣಸ್ವಾಮಿ ಕೇಳ್ತ್.

ನೀವು?

ನಾ ಕೂಡ ಬನ್ನೆ.

ಖುಷಿ ಆತ್. ನಿಮ್ಮಂಥವರೊಟ್ಟಿಗೆ ಹೆಗ್‌ಲಿಗೆ ಹೆಗ್‌ಲ್ ಕೊಟ್ಟ್ ಹೋರಾಡ್ದು ಭಾಗ್ಯಂತ ತಿಳ್ಕನೆ.

....ನಂದಾವರಲಿ ಆ ಹೊತ್ತು ಸೈನಿಕರಿಗೆ ಸಿಕ್ಕಿದ್ ನೆನ್ಪ್‌ಲಿ ಇಸಿಕಣುವಂತ ಊಟ–ಉಪಚಾರ.

"ಜಾಸ್ತಿ ತಿನ್ನುಬಡಿ, ನಡಿಯಕೆ ಆಕಿಲೆ ಹ್ಹಾ!" ರಾಮಗೌಡ ಕುಸಾಲ್ ಮಾಡ್ತ್.

ಕಲ್ಯಾಣಸ್ವಾಮಿನೊಟ್ಟಿಗೆ, ದಂಡನಾಯಕರ ಸಾಲ್‌ಲಿ ಉಂಬಕೆ ಕುದ್ದ ಬಂಗರಾಜ ಹೇಳ್ತ್:

ಉಗಾದಿಯ ಮಾರ್ಣೆ ದಿನ ಬಂದೊಳರಿ. ಹೊಸ ವರ್ಸಲಿ ನಮ್ಮೂರಿಗೆ ಕಾಲಿಸ್ಯೊಳರಿ. ಈ ಸಲ ಫಸಲ್ ಲಾಯ್ಕ ಬಂದದೆ.

ಕಲ್ಯಾಣಸ್ವಾಮಿ ಹೇಳ್ತ್:

ಏನೇಪ್ಪಾ! ಮಳೆರಾಯ ನಮ್ಮ ಮಾನ ಉಳ್ಸಕು!

..ಬಿಸ್ಲು ಕಡಿಮೆ ಆದರ ಕಾಯದೆನೆ ಸೇನೆ ಬಂಟ್ವಾಳಕೆ ಹೊರ್ಟತ್. ಸಂಖ್ಯೆ ಜನರ್ದ್ ಎರ್ಡ್ ಸಾವಿರದತ್ರ ಆಗಿತ್ತ್. ಯುದ್ಧ ಮಾಡಿ ಜನಗಳಿಗೆ ಅನುಭವ ಇತ್ಲೆ ಹೊರ್ತ್ ಬೇರೆ ಯಾವ್ದುರ್ಲಿ ಸೇನೆ ಬಡವಾಗಿತ್ಲೆ.

ಕಲ್ಯಾಣಪ್ಪನ ಸೈನಿಕರ್ ಕೆಟ್ಟವರಲ್ಲಂತ ಸುದ್ದಿ ಆಗಲೆ ಬಂಟ್ವಾಳ ತಲ್ಪಿದ್ದರಿಂದ, ಎಲ್ಲ ಕಡೆ ಖುಷಿಲಿಯೆ ಅವ್ಕೆ ಸ್ವಾಗತ ಸಿಕ್ಕಿತ್.

ಮನೆಗಳಿಗೆ ಕಿಚ್ಚ್ ಇಸುವ ಊರಿನ ಕೊಳ್ಳೀ ಆಗಿತ್ಲೆ. ಸ್ವಾತಂತ್ರ್ಯ ದೀವಟಿಗೆ. ಲೂಟಿ ಮಾಡುವ ದೋಚಿಕಂಡ್ ಹೋಗ್ವ ಪುಂಡು ಪೋಕರಿಗೆ ಆಗಿತ್ಲೆ. ಕಲ್ಯಾಣಪ್ಪನ ದಂಡ್‌ನ ಜನ

...ನಂದಾವರಂದ ಕಟ್ಟಿ ತಂದದೇ ಸಾಕಾಗಿತ್ತ್. ರಾತ್ರಿ ಉಂಬಕ್ಕೆ ಊಟದ ಯೋಚನೆನೆ ಬೊಳ್ಪುಗೆ ದೂಡಿ ಯೋಧರ್ ಲಾಯ್ಕ ಮಲ್ಗಿ ನಿದ್ದೆ ಹೋದೊ.

ಗೂಡಾರಲಿ ಕಲ್ಯಾಣಸ್ವಾಮಿನ ಹಕ್ಕಲೆನೆ ಮಲ್ಗಿದ್ದ ಲಕ್ಷ್ಮಪ್ಪ ಬಂಗರಾಜ, ಬಾಳ ಹೊತ್ತು ಕೊಡಗ್‌ನ ಜನಗಳಿಗೆ ಕನ್ನಡ ಜಿಲ್ಲೆನ ಪರಿಚಯ ಮಾಡಿಕೊಡ್ತ್.

ಮಂಗಳೂರ್‌ನ ಕುರ್ತ್ ಮಾಹಿತಿ ಕೇಳ್ತ್. ಹಿಂಗೆ ಮಾತಾಡಿಕಂಡಿರಿಕಾನಲೇ ಇಬ್ಬರಿಗೆಸ ನಿದ್ದೆ ಬಾತ್.

* * * * *

ಬಂಟ್ವಾಳಲಿ ಕಲ್ಯಾಣಸ್ವಾಮಿನ ಸೇನೆ ನಿದ್ದೆ ಹೋದ ಹೊತ್ತ್‌ಲಿ, ಮಂಜೇಶ್ವರಲಿ, ಶ್ರೀ ಮದನಂತೇಶ್ವರ ದೇವಾಲಯ ಮುಂದೆ ಸಾವಿರ ಜನಕ್ಕೆ ಅನ್ನ ಸಂತರ್ಪಣೆಯಾಗ್ತಿತ್ತ್. ಯಾರ್ ಹೊತ್ತ ಹರ್ಕೆ ಅಲ್ಲ. ಊರಿಗೆ ಆಗಮಿಸಿದ ಸುಬ್ರಾಯ ಹೆಗ್ಗಡೆನ ದಂಡ್‌ಗೆ ಗಮ್ಮತ್ತ್ ಊಟ.

ಹೆಗ್ಗಡೆ ಮುಂದೆನೇ ಸಮರ ಇಷ್ಟಪಡ್ವುವವ. ಯುದ್ಧ ವಿದ್ಯೆಲಿ ಪರಿಣತ ಆಗಿದ್ದ ಅವಂಗೆ ಹೋರಾಡ್ವ ಚಪಲ. ಅದ್ ಈಡೇರಿಕೆ ಕಾಲಾವಾಕಾಸ ಬೇಕ್. ಅಂತ ಅವಕಾಶ ಬಾತ್, ಆಂಗ್ಲರ ಆಳ್ವಿಕೆನ ಜನ ದ್ವೇಷ ಮಾಡಿಕಾನ, ಬಾಸೆನು ಗೊತ್ತಿಲ್ದ ವಿದೇಶಿಗ ಬಂದ್ ಈ ದೇಶಲಿ ರಾಜ್ಯಭಾರ ಮಾಡ್ದು ಸಾಧ್ಯಂತ ಅವ ನಂಬಿತ್ಲೆ. ವ್ಯಾಪಾರಿಗಸ ಸರಕಾರ ಜೊತೆಯಾಗಿ ಸೇರಿಕಂಡದ್ ಇವಂಗೆ ಅಸಹ್ಯ ಆಗ್ತಿತ್ತ್. ಇವನ ಹಿರಿಯಾದರ್ ಎಂಥವು? ವಿಜಯನಗರ ಸಾಮ್ರಾಜ್ಯಲಿ ದಳಪತಿಗ ಆಗಿದ್ದವು. ನಮ್ಮದೇ ರಾಷ್ಟ್ರ.

ಆದರೆ ನಾನುಸ ದಳಪತಿ ಆಕ್. ಯಾರ ಹಣೆಲಿ ಬ್ರಹ್ಮ ಏನ್ ಬರ್ದುಟೋ ಯಾರಿಗೆ ಗೊತ್ತ್?

ಇಂತ ದೊಡ್ಡ ಆಸೆಗಳ ಇಸಿಕಂಡ್ ಸುಬ್ರಾಯ ಹೆಗ್ಗಡೆ ಕುಂಪಣಿ ಸರಕಾರನ ಎದ್‌ರಿಸಿಕೆ ತೀರ್ಮಾನಿಸಿತ್. ಈ ತೀರ್ಮಾನನ ತಕಂಡದ್ ಸುಳ್ಯ ಮಾಗಾಣಿಯ ಬಂಡಾಯದ ವಿಷ್ಯ ತಿಳ್ದ ಮೇಲೆ. ಕೊಡಗ್‌ನವು, ಕನ್ನಡ ಜಿಲ್ಲೆಯವು ಒಟ್ಟಿಗೆ ಹೋರಾಡುವಂತಾದರೆ ಜಯ ಕಟ್ಟಿಟ್ಟದೇ ನಾವುಗೆ. ರಾಜನೀತಿನ ಗೊತ್ತಿರ್ವ ನಾನುಸ ಸೇರಕಾದ್ ಅಂಥವರ.

ಕಲ್ಯಾಣಸ್ವಾಮಿಂದ ಬಂದ ಉತ್ತರ ಓದಿ ಹೆಗ್ಗಡೆನ ಅಭಿಪ್ರಾಯ ಬಲ ಆತ್. ಸೈನ್ಯದ ಸೂತ್ರಗ ಕವಾಯಿತು, ಇಸ್ತಿಹಾರು, ಘೋಷಣೆ, ದೀವಟಿಗೆ, ಬಾವುಟ–ಇವೆಲ್ಲ ಹಂಞ ವಿಚಿತ್ರವಾಗಿತ್ತ್. ಆದರುಸ ಆ ಶಿಬಿರದ ಬಗ್ಗೆ ಬೇಹುಗಾರ ನೀಡ್ದ ವಿವರ, ವರದಿ, ಅದ್ಭುತ ಆಗಿತ್ತ್. ಹೆಗ್ಗಡೆ ಜೋಯಿಸರ ಕರ್ಸಿ ಜಾತಕ ತೋರ್ಸಿತ್. ಹಸ್ತ ನೋಡುವವ್ಕೆನು ಕೈ ತೋರ್ಸಿತ್. ಒಳ್ಳೆ ಮೂರ್ತ ನೋಡಿಕಂಡ್ ಕತ್ತಿ ಹಿಡಿಯಕೆ ತೀರ್ಮಾನಿಸಿತ್.

ಮತ್ತೆ ಸರ್ದಾರನ ಸೇನೆ ಸಿದ್ಧ ಆತ್. ಅವನ ಒಕ್ಕುಲು ಆಗಿ ರೈತಂಗಳೇ ಇದ್ದೊ! ಮೊಗೇರರ್, ಮಹಮ್ಮದೀಯರಾಗಿ ಮತಾಂತರ ಹೊಂದಿದ್ದವ್, ಕೋಟೆಯವು ಎಲ್ಲವು ಇದ್ದೊ.

"ಗದ್ದೆ ಕೆಲ್ಸದ ಹೊತ್ತಿಗೆ ವಾಪಾಸು ಬಂದೇ ಬಂದವೆಂತ ಹೆಗ್ಗಡೆ ಹೇಳ್ತ್".

"ಈ ಯುದ್ಧಲಿ ಭಾಗವಹಿಸುವವ್ಕೆ ಒಂದೊಂದು ಸಾವಿರ ವರಹ ಬಹುಮಾನಂತ! ಜಾಹೀರ್ ಮಾಡ್ತ್.

ಡಂಗುರ ಹೊಡ್ಸಿ ಎಲ್ಲವ್ಕು ಹೇಳ್ತ್:

"ಯಾರ್ಯಾರ್ ಬಂದರೆನೋ ಅವೆಲ್ಲ ಮುಂದೆ ಯಾಗಸ ಭೂಮಿ ಕಂದಾಯ ಕೊಡಕುಂತ ಇಲ್ಲೆ!"

ಮನೆಲಿ ಕುದ್ದ್ ಸುಮ್ಮನಿರ್ದರ ಬದ್ಲ್ ಹೋಗಿ ಬಾದೇ ಸರಿಂತ ಸುಮಾರ್ ಜನ ಯೋಚಿಸಿದೊ. ವಿದೇಶಿಯ ಆದ ಬಿಳಿಯನ ಹೊಡ್ದು ಓಡ್ಸುದು, ಮೊಸ ಆಕನ ಮಾಡಕಾದ ಸಾಹಸಕಾರ್ಯಂತ ಅವೆಲ್ಲ ತಿಳ್ಕಂಡ. ಮುಸಲ್ಮಾನರಂತು ಹೆಗ್ಗಡೆನ ದಂಡ್ ಸೇರಿಕೆ ಹಿಂದೇಟ್ ಹಾಕಿತ್ಲೆ. ಟಿಪ್ಪು ಸಾಯಕೆ ಕಾರಣ ಆದ ಇಂಗ್ಲೀಷರ ವಿಷಯಲಿ ಸಹಾನುಭೂತಿನೆ ಇತ್ಲೆ ಅವ್ಕೆ. ಅಲ್ಲದೆ ಕಲ್ಯಾಣಸ್ವಾಮಿನ ಸೇನೆಲಿ ಎಷ್ಟೋ ಜನ ಮಹಮ್ಮದೀಯರ್ ಒಳಂತ ದೂತ ತಂದ ಸುದ್ದಿ ಅವರ ನಿರ್ಧಾರನ ಬಲಪಡ್ಸಿತ್.

ಸುಬ್ರಾಯ ಹೆಗ್ಗಡೆನ ಸುತ್ತ ಸೇರ್ದವರಲ್ಲಿ ಎಲ್ಲರತ್ರ ಆಯುಧಗ ಇತ್ಲೆ.

"ಪರವಾಗಿಲ್ಲೆ, ಮಂಗ್ಲೂರ್ಲಿ ಕೊಡ್ಸನೆ "ಹೆಗ್ಗಡೆ ಹೇಳ್ತ್. ಕುದುರೆಗಂತು ಮೂರೆ ಇದ್ದದ್.

"ಹಳ್ಳ ದಾಟಿಕಾನ ಕುದುರೆಗ ಇದ್ದರೆ ತೊಂದರೆನೆ ಜಾಸ್ತಿ. ಕುದುರೆಗ ಮಂಗ್ಲೂರ್ಲಿ ಸಿಕ್ಕುವೆಂತ ಆಶ್ವಾಸನೆ ಕೊಟ್ಟತ್."

ಕುಲದೈವಂಗೆ ಕೈ ಮುಗ್ದ್, ದೊಡ್ಡವ್ಕೆ ನಮಸ್ಕಾರ ಮಾಡಿ, ಹೆಗ್ಗಡೆ ನಡ್ಕಂಡೇ ಹೊರ್ಟತ್. ಉಳ್ದವು ಹಿಂದೆಂದ ಹೋದೋ.

ಯಾರ್ ಮೀರ್ಸಿಕೆ ಸಾಧ್ಯ ಇಲ್ಲದಂತ ಮಾತ್‌ಗಾರ ಹೆಗ್ಗಡೆ. ಅವ ನೋಡದ ಊರಿಲ್ಲೆ, ನೋಡದ ದೇಶ ಇಲ್ಲೆ, ಗೊತ್ತಿಲ್ಲದ ಜನರಿಲ್ಲೆ.

ಹಿಂದೆ ಒಂದ್ ಸರ್ತಿ ನಾವ್ ಕೊಡಗಿಗೆ ಹೋಗಿರ್ಕಾನ ನಾವುಗೆ ಕಲ್ಯಾಣಸ್ವಾಮಿನ ಪರಿಚಯ ಆಗಿತ್ತ್. ಬಾಳ ದೊಡ್ಡ ಮೊಸ್ಸ. ಸಮುದ್ರ ಇದ್ದ ಹಂಗೆ.

ರಾಜಮನೆತನಕ್ಕೆ ಸಂಬಂಧಿಸಿದ ದೊಡ್ಡ ಶ್ರೀಮಂತರ್ ಅವು,

ಕಲ್ಯಾಣಸ್ವಾಮಿನ ನೋಡಿಕೆ ಹೋಕನ ಹೆಗ್ಗಡೆ ಈ ವಿಷ್ಯ ನಂಗೆ ಹೇಳ್ತೇ ಇಲ್ಲೆಂತ ದೂತಂಗೆ ಆಶ್ಚರ್ಯ ಆತ್. ಆದರೆ ಕಲ್ಯಾಣಸ್ವಾಮಿ ಏನ್ ಹೆಗಡೆ ನಂಗೆ ಅಪರಿಚಿತ ಅಂತೇನು ಹೇಳ್ತ್‌ಲೆ. ಇವಿಬ್ಬರ್ ಗೆಳೆಯರ್ ಆಗಿರ್ವ ಅಂತ ದೂತನೆ ನಂಬಿತ್.

ವೇಗಲಿ ಎಡಪುಡೆಗು, ಬಲಪುಡೆಗು ಕುತ್ತಿಗೆ ತಿರ್ಗಿಸಿಕಂಡ್, ಮೀಸೆ ತಿರ್ಗಿಸಿಕಂಡ್, ಎದೆ ಮುಂದೆ ಮಾಡಿಕಂಡ್ ಮೋರೆಲಿ ಗೆಲುವುನ ತೋರಿಸ್ಕಂಡ್ ಇರ್ತಿತ್ತ್ ಸುಬ್ರಾಯ ಹೆಗ್ಗಡೆ. ಕೂದಲ್ನ ಹಿಂದೆ ಪೂಜಿ ಜುಟ್ಟು ಕಟ್ಟಿತ್. ಕಿವಿಲಿ ಕುಂಡಲಗಳಿದ್ದೊ. ನಲ್ವತ್ತು ಪ್ರಾಯ ಅವ ಆಗಾಗ ಹೇಳ್ತ್.

"ಈ ಮುಂದೆನೆ ನಾವ್ ಸುರು ಮಾಡಕಾಯ್ತ್. ಆದ್ರೆ ಕಲ್ಯಾಣಸ್ವಾಮಿ ಹೇಳಿ ಕಳ್ಸಿದ್ ಒಟ್ಟಿಗೆ ಆಗಲಿಂತ ಅವು ಪುತ್ತೂರು ಮಾರ್ಗಲಿ ಬರ್ತಾ ಒಳ. ನಾವು ಕರಾವಳಿ ದಾರಿಲಿ ಮಂಗ್ಳೂರು ಸೇರ್ವೆ. ಅಲ್ಲಿ ಒಟ್ಟಾದವೆ."

ನಿಜ ಹೇಳಕುಂತಾದರೆ ಇಷ್ಟ್ ತೀವ್ರಗತಿಲಿ ಮಂಗ್ಳೂರ್ ಸೇರ್ವ ಆಸೆ ಹೆಗ್ಗಡೆಗೆ ಇತ್ಲೆ. ಆದರೆ ಕಲ್ಯಾಣಸ್ವಾಮಿನ ಸೇನೆ ವೇಗಲಿ ಹೋಕನ ಅವಸ ಅನಿವಾರ್ಯಲಿ ವೇಗಲಿಯೆ ಹೋಕಾಯ್ತ್.

ಆ ಸೇನೆ ಮಂಗ್ಳೂರು ಸೇರ್ವ ಹೊತ್ತಿಗೆ ನಾನುಸ ಅಲ್ಲಿಗೆ ಹೋಗಿ ಪರಾಕ್ರಮ ತೋರ್ಸಕು. ಯುದ್ಧದ ಕಲೆನ ಉಳ್ದವರ ಎದ್ರು ಪ್ರದರ್ಶನ ಮಾಡೊಕು ಹಂಗೆಂತ ಅವ ನಿರ್ಧರಿಸಿತ್.

...ಕಲ್ಯಾಣಸ್ವಾಮಿನ ದಂಡಯಾತ್ರೆ ವಿಷ್ಯನ ಮಂಜೇಶ್ವರದ ಜನ ಆಗಲೆ ಕೇಳಿ ತಿಳ್ಕಂಡಿದ್ದೊ.

ಆ ವೀರನ ವಿಷಯಲಿ, ಸ್ವಾತಂತ್ರ್ಯ ಪ್ರೇಮಿಗ ಆದ ಅಲ್ಲಿನ ಜನಕ್ಕೆ ಒಳ್ಳೆ ಅಭಿಪ್ರಾಯ ಇತ್ತ್.

ಅಂಥವನ ಹೆಸ್ರ್ ಹೇಳಿಕಂಡ್ ಹೆಗ್ಗಡೆನ ದಂಡ್ ಬಾಕನ ಆಶ್ಚರ್ಯ ಆತ್. ಸ್ವಲ್ಪ ಮಟ್ಟಿಗಾದ್ರ್ ಹೆಗ್ಗಡೆನ ಸ್ವಭಾವ ಅವ್ಕೆ ಗೊತ್ತಿತ್ತ್. ಏನೆ ಆದ್ರುಸ ಉಪಾಯಂದ್ಲೇ ಈ ಸೇನೆನ ಮುಂದೆ ದಾಟ್ಸೊಕುಂತ ಅವು ನಿರ್ಧರಿಸಿದೊ.

ದೇವಸ್ಥಾನದ ಎದ್ರುಪುಡೆಗಿದ್ದ ಅಗಲ ಜಾಗಲಿ ಬೀಡುಹಾಕಿ ಸುಬ್ರಾಯ ಹೆಗ್ಗಡೆ ಊರ್ನ ಮುಖ್ಯ ಪಟ್ಟವ್ಕೆ ಹೇಳಿ ಕಳ್ಸಿತ್. ಹೈದ ಸಾಹುಕಾರ ರಾಮಯ್ಯ ಶಾನುಭಾಗನ ನಾಯಕತ್ವಲಿ ಒಂದು ತಂಡ ಬಂದ್ ಹೆಗ್ಗಡೆನ ಮಾತಾಡ್ಸಿತ್.

"ಶಾನುಭೋಗರೇ ನೀವೇನಾ ಮುಖ್ಯಸ್ಥರ್?

"ಹೌದು"

"ಇಷ್ಟ್ ಸಣ್ಣ ಪ್ರಾಯಲಿ?"

ಏನೋ ಊರವ್ ನನ್ನ ಮೇಲೆ ವಿಶ್ವಾಸ ಇಸಿಯೊಳ. ಆದು, ಇಲ್ಲಿ ಕುಂಪಣೀ ಸರ್ಕಾರದ ಕಡೆವು ಯಾರಾದ್ರ್ ಒಳನ?"

"ಯಾರೂ ಇಲ್ಲೆ, ನಾವೆಲ್ಲ ಸ್ವಾತಂತ್ರ ಪ್ರಿಯರ್ ಕಲ್ಯಾಣಸ್ವಾಮಿಯವರ ದಂಡ್ ಇಲ್ಲಿಗೆ ಬಂದದೆಂತ ನಾವ್ ಕಾದೊಳ"

"ಅವ್ ಸ್ವಂತ ಬಾದ್ಲೆ, ನಮ್ಮ ಕಳ್ಸಿದ್."

ನಾವೇ ಅವರ ಪ್ರತಿನಿಧಿಗ ಅಂತ ತಿಳ್ಕಣಿ. ತೆಂಕುಬಳ್ಳಿನ ಹೆಗ್ಗಡೆ ಪರಿಚಯ ನೀವುಗೆಲ್ಲ ಉಟ್ಟಲಾ?

"ಇಲ್ಲದೆ ಏನ್?"

ಆದು ನನ್ನ ಸೈನಿಕರಿಗೆಲ್ಲ ಕತ್ತಲೆನ ಊಟದ ಏರ್ಪಾಡು ಆಕೊಲ?

"ನಾವು ಮಾಡ್ವೆ"

"ಇದೇನ್ ನಿಮ್ಮ ವ್ಯಾಪಾರಿಗೆಲ್ಲ ಬಾಗ್ಲ್ ಹಾಕ್ಯೊಳಲ?"

"ನಿಮ್ಮ ಸೈನ್ಯ ಬಂದ ಖುಷಿಲಿ ಸೇರಕುಂತ ಕಾದ್ ನಿಂತೊಳ."

"ಬರ್ಲಿ, ಎಲ್ಲವು ಬರ್ಲಿ! ಒಂದ್ ವಿಷ್ಯ. ನೀವ್ ಯಾರೂ ಹೆದ್ರಕುಂತ ಇಲ್ಲೆ. ನಮ್ಮ ಮಿತ್ರ ಕಲ್ಯಾಣಸ್ವಾಮಿನ ಹೇಳಿ ಆಗಿಟು, ಲೂಟಿ ಮಾಡಿಕೆ ಇಲ್ಲೆ. ನೀವಾಗಿ ಕಾಣಿಕೆ ಕೊಟ್ಟರೆ ತಕಂಡವೆ.

"ಉಂಡ ಮೇಲೆ ಕಾಣಿಕೆ ಕೊಟ್ಟವೆ"

"ಆದು"

.... ಹಂಗೆ ನಡ್ತ್. ದೇವಸ್ಥಾನದ ಬಾಗ್‌ಲ್‌ಲಿ ಸಾವಿರ ಜನಕ್ಕೆ ಊಟ. ಗೌಡ ಸಾರಸ್ವತ ಬ್ರಾಹ್ಮಣರ ದೊಡ್ಡ ತಂಡನೆ ಅಡ್ಗೆ ಮಾಡಿ ಬಡ್ಸಿತ್.

ತನ್ನೊಟ್ಟಿಗೆ ಬಂದವ್ಕೆ ಹೆಗ್ಗಡೆ ಹೇಳ್ತ್.

ಲಾಯ್ಕ ಉಣ್ಣಿ! ದಾಕ್ಷಿಣ್ಯ ಮಾಡ್‌ಬಡಿ!

ಸ್ವತ ಅವ, ಇಬ್ಬರ್ ಭಟರೊಟ್ಟಿಗೆ ಶಾನುಭೋಗನ ಮನೆಗೆ ಹೋಗಿ ಅಲ್ಲಿಯೇ ಉಂಡತ್. ಊರ್ನ ವ್ಯಾಪಾರಿಗಳ ಪರವಾಗಿ ಅಲ್ಲಿನೆ ಕಾಣಿಕೆ ತಕಣ್ತ್. ಬೆಳ್ಳಿ ಬಟ್ಲ್‌ಲಿದ್ದ ಒಂದ್ ಸಾವಿರ ವರಹ, ಬೆಲೆಬಾಳ್ವ ಕಲ್ಲುಗ, ಪಟ್ಟೆ ಪೀತಾಂಬರ ಹೆಗ್ಗಡೆ ಖುಷಿನಸ ತೋರ್ಸಿತ್ಲೆ. ಬೇಸರನಸ ತೋರ್ಸಿತ್ಲೆ.

ಆ ಇಬ್ಬರ್ ಭಟರ್ಲಿ ಬಾರಿ ಕೂಚು ಆಗಿದ್ದ ಒಬ್ಬನೊಟ್ಟಿಗೆ ಕಾಣಿಕೆಗಳ ತೆಂಕುಂಬಳೆನ ಮನೆಗೆ ಕಳ್ಸಿತ್.

ಹೊತ್ತಾರೆ ಎಲ್ಲವು ತಡ ಆಗಿ ಎದ್ದೊ. ಇರ್‍ಲ್ ಆಗ್ವ ಹೊತ್ತಿಗೆ ಉಳ್ಳಾಲ ಸೇರ್‍ರೆ ಆತ್‌ಂತ ಬಿಸ್ಲ್ ಬಂದ ಮೇಲೆನೆ ಅವು ಹೊರ್‍ಟೊ.

ಉತ್ತರಕ್ಕೆ ಮುಖ ಮಾಡಿ ಕರಾವಳಿ ಉದ್ದಕ್ಕೆ ಮಾರ್ಗ ಅನುಕೂಲ ಆದ ಕಡೆ ಸಮುದ್ರಲಿ ಮೀಯದು, ತೆಂಗಿನ ಮರ ಕಂಡಲ್ಲಿ ಬೊಂಡ ತೆಗ್ದ್ ಕುಡಿತ್ತಿದ್ದೊ.

ಇವರ ತಂಡನ ಪುಂಡಾಡಿಕೆಯವುಂತನೇ ಜನ ಹೇಳ್ದೊ. ತಂಡ ಬಂದ್‌ಕಂಡ್ ಇದ್ದಹಂಗೆ ಊರ್‍ನ ಜನಗ ದೂರ ಓಡ್ತಿದ್ದೊ.

ಉಳ್ಳಾಲ ಬಾತ್.

ಅದಂರ್‍ದ ಆಚೆಗೆ ಹಂಞ ದೂರ ದಾರಿ ಮತ್ತೆ ದೊಡ್ಡ ನೇತ್ರಾವತಿ ನದಿ. ನದಿ ದಾಟ್ರೆ ಮತ್ತೆ ಮಂಗ್ಳೂರು.

ಸುತ್ತಮುತ್ತ ಇದ್ದವರೊಟ್ಟಿಗೆ ಹೆಗ್ಗಡೆ ಹೇಳ್ತ್.

"ಕಲ್ಯಾಣ ಸ್ವಾಮಿನ ಸೈನ್ಯ ಇಂದ್ ಬಂಟ್ವಾಳಂದ ಹೊರ್‍ಟಿರ್‍ದು. ನಾಳೆ ಅವೆಲ್ಲ ಮಂಗ್ಳೂರು ಸೇರ್‍ವೆ. ನಾವುನು ಅಷ್ಟೊತ್ತಿಗೆ...

## ೨೦

ಸಮುದ್ರ ಸೇರ್‍ವ ನದಿನ ಹಂಗೆ ನಿಧಾನ ಆತ್. ಸೇನೆನ ನಡೆ. ದಾರಿಸ ಅಗಲ ಇತ್ತ್ ಎತ್ತ್‌ನ ಗಾಡಿ ಹೋಗುವಷ್ಟು. ಸೈನಿಕರ ಸಂಖ್ಯೆಸ ಜಾಸ್ತಿ ಇತ್ತ್. ತಮ್ಮ ಸಾಮರ್ಥ್ಯದ ವಿಷಯಲಿ ವಿಶ್ವಾಸ ಇದ್ದ ಮೋರೆಗ.

ಹಿಂಗೆ ಸೇನೆ ಮುಂದೆ ಹೋಕಂಡ್ ಇದ್ರುಸ ಕಲ್ಯಾಣಸ್ವಾಮಿಗೆ, ದಂಡನಾಯಕರಿಗೆ, ಬಂಗರಾಜ ಅಣ್ಣಿಗೌಡರಿಗೆ ದಳಪತಿಗಳಾದ ಕುಡಿಯ ಅಣ್ಣ ತಮ್ಮಂದರಿಗೆ ಒಳಂಗಿದೊಳಗೆ ಕಾತರ ಇತ್ತ್. ದೊಡ್ಡ ತಂಡ ಇಂಗ್ಲೀಷರ ದಂಡ್ ಇಲ್ಲೆಂತ ಬಂಗರಾಜ ಹೇಳಿತ್ತ್. ಆದರುಸ ಫಿರಂಗಿಗ, ಮದ್ದ್ ಗುಂಡುಗ ಇಲ್ಲೆನಾ? ಉಪಾಯ ಮಾಡ್ದೊರ್‍ಲಿ ಭಾರಿ ಹುಶಾರ್ ಇರ್‍ವ ಆಂಗ್ಲರ್ ಎಂಥ ಗುಟ್ಟುಗಳ ಮಾಡ್ಯೊಳನ? ಯಾವ ಸಂದ್ ಗೊಂದ್‌ಲಿ ಎಂಥ ಅಪಾಯ ಉಟ್ಟಾ?

ಎಷ್ಟೆ ಹೆದ್ರಿಕೆ ಇದ್ದರುಸ ಗುರಿ ಸೇರ್‍ವ ಆಸೆ ಬಾಳ ಇತ್ತ್. ಆಗದ ಅನುಭವನ ಬೇಗ ಪಡಿವ ಹಂಬಲ.

ಬೊಳ್ಪುನ ಹೊತ್ತ್ ಮಂಗ್ಳೂರ್ ಸೇರ್‍ದು ಸರಿಂತ ಊರು ಹರದಾರಿ ದೂರ

ಇರಿಕಾನಲೆ ದಂಡ್ ಉಳ್ಕನ್ತ್. ಲಾಯ್ಕ ಉಂಬಕ್ಕೆನು ಇತ್ಲೆ; ಲಾಯ್ಕದ ನಿದ್ರೆನು ಇತ್ಲೆ. ಗೊತ್ತಾಗದಂಗೆ ದಾಳಿ ಮಾಡಿಬುಡುವಂತ ಅರ್ಧಕರ್ಧ ಜನ ಮಲ್ಗಿತೇಲೆ. ತಿಂಗಳ ಬೆಳ್ಕ್ ಮುಗ್ದ ಮೇಲೆ ಕರ್ಕುಟ ಕತ್ತಲೆ.

ಮಧ್ಯರಾತ್ರಿನ ಹೊತ್ತಾಕನ ಮಂಗಳೂರ್‌ಂದ ಬೇಹುಗಾರ ತನಿಯಪ್ಪ ಬಾತ್.

ಅವ ಹೇಳ್ದರ ಕೇಳ್ದ ಮೇಲೆಸ ಸಮಸ್ಯೆ ಹಂಗೆನೆ ಉಳ್ತ್.

ಇಂಗ್ಲೀಷರ ಸೈನ್ಯದ ನಡೆ ಮಂಗ್ಳೂರ್ಲಿ ಇಲ್ಲೆಂತ ಹೇಳ್ರೆ? ರಕ್ಷಣೆ ಮಾಡಿಕಣುವ ಸುದ್ದಿನೇ ಇಲ್ಲೆನಾ?

ಈ ಜನಂಗ ಮಂಗ್ಳೂರು ಬುಟ್ಟು ಓಡಿ ಹೋದವೆನಾ ಹೆಂಗೆ? ನಂಜಯ್ಯ ಕೇಳ್ತ್.

"ಹಂಗಾರೆ ಪುತ್ತೂರುಂದ ಓಡಿ ಬಂದ ಕಲೆಕ್ಟರ್ ಇಲ್ಲಿ ಮಾಡ್ದಾದರ್ ಎಂತ? ರಾಮಗೌಡ ಕೇಳ್ತ್.

ಬಂಗರಾಜ ಹೇಳ್ತ್.

"ನಂಗೆ ಆದೆ, ದೊಡ್ಡ ಗಲಾಟೆ ಮಂಗ್ಳೂರ್ಲಿ ಇರಿಕ್ಕಿಲ್ಲೆಂತ" ಎಲ್ಲ ಮಾತ್‌ಗಳಿಗೆ ಕಿವಿಕೊಟ್ಟು ಕಲ್ಯಾಣಸ್ವಾಮಿ ಹೇಳ್ತ್.

"ಇನ್ನ್ ತಡ ಮಾಡ್ದು ಬೇಡ. ಹೊತ್ತಾರೆ ಆದರೆ ದಾಳಿ ಮಾಡಮ. ಒಂದೇ ದಾರಿಲಿ ನಾವ್ ಹೋದರೆ ಸಾಕಾ? ಬೇರೆ ಕಡೆಂದಸ ಹೋಕಾ..."

"ಅದ್ರ ಅಗತ್ಯ ಇಲ್ಲೆ." ಬಂಗರಾಜ ಹೇಳ್ತ್.

"ಒಂದೇ ದಾರಿಲಿ ನಾವು ಹೋದರುಸ ಬೇರೆ ಕಡೆಂದ ಬಂದ್ ನಮ್ಮ ಅಡ್ಡೆ ಹಾಕಿಕೆ ಅಷ್ಟ್ ದೊಡ್ಡ ಸೇನೆ ಎಲ್ಲಿಟ್ಟು? ರಾಮಗೌಡ ಕೇಳ್ತ್.

ಕಲ್ಯಾಣಸ್ವಾಮಿ ಹೇಳ್ತ್: "ಹೌದು. ಸೀದಾ ಈ ದಾರಿಲಿ ಪೋಯಿ"

ಬೊಳ್ಪಿಗೆ ಬೇಗ ಎದ್ದ್, ಮಾಡಕಾದರೆಲ್ಲ ಮಾಡಿ ಮುಗ್ಸಿ ಸೈನಿಕರ್ ಹೊರ್ಟೊ. ರಾತ್ರಿ ಹನಿಗೆ ಸುಮ್ಮನಿದ್ದ ಧೂಳು ನಡಿಯಕಾನ ಹಾರ್ತಿತ್. ಮರದ ಎಡೆಂದ ಇಣ್ಕಿ ನೋಡ್ವ ರವಿ ಧೂಳುನ ನೋಡಿ ನೆಗೆ ಆಡ್ದೆ. ಹಾರಿ ಹೋಕೆಂತ ಕುದ್ದ ಹಕ್ಕಿಗ ಇದೆಂತ ಗಂಡಾಂತರ ಬಾತ್‌ಂತ ಗಾಬರಿಗೊಂಡೊ. ನಮ್ಮ ತಂಟೆಗೆ ಬಾತ್ಲೆಂತ ಆ ಹಕ್ಕಿಗ ಖುಷಿಲಿ ಹಾಡಿಕೆ ಮತ್ತೆ ಸುರುಮಾಡ್ದೊ.

ಉರಿಬಿಸ್ಲ್‌ಲಿ ನಡ್ಕಂಡ್ ಸೇನೆ ಊರ್ ಸೇರ್ತ್. ಎರ್ಡ್ ಕಡೆಲಿ ಇದ್ದ ಗದ್ದೆಗ ಬಿಸ್ಲ್‌ಗೆ ಒಣ್ಗಿ ಬಾಯಿ ಬುಟ್ಟಿದ್ದೊ. ಮನೆ ಅಂಗಳಲಿ ಕೋಮಣ ಕಟ್ಟಿಕಂಡ್ ಮಾವಿನೆಲೆಲಿ ಹಲ್ಲುಜ್ಜಿಕಂಡ್ ನಿತ್ತ ಗಂಡಸ್‌ಗ ಇವರ ಸೇನೆನ ನೋಡಿ ಅಲ್ಲಿಯೇ

ಬಾಕಿಯಾದೋ. ಹೆಂಗಸರ್ ಮನೆ ಒಳಗೆಂದ್ಲೆ ಬಿದಿರ್‌ತಟಿಕೆ ಸೆರೆಂದ ದಾರಿ ನೋಡಿಕಂಡೊ. ಆ ಎರ್ಡ್ ಮೂರ್ ದಿನಂದ ಅವೆಲ್ಲ ಕೇಳ್ತಿದ್ದ ವದಂತಿ ಸುಳ್ಳಾಗಿತ್ಲೆ.

ಅವ್ಕೆಲ್ಲ ಗೊತ್ತಾಗದಂಗೆನೆ ಅವರ ಬಾಯಿಂದ ಬರ್ತಿತ್. "ಕಲ್ಯಾಣಪ್ಪನ ದಂಡ್, ಕಲ್ಯಾಣಪ್ಪನ ದಂಡ್!"

ಒಮ್ಮೆಗೆ ನಿದ್ದೆಂದ ಎದ್ದವರಂಗೆ ಮಾಡ್ವ ಕೆಲ್ಸಗಳ ಅರ್ಧಕ್ಕೆ ಬುಟ್ಟು, ಬೈರಸ್‌ನ ಅಡ್ಡ ಸುತ್ತಿಕಂಡ್ ಸೇನೆನ ಹಿಂದೆ ಅವೆಲ್ಲ ಓಡ್ದೊ.

ಮನೆ ಹೆಂಗಸ್‌ಗ ಕಿರ್ಚಿ ಹೇಳ್ತಿದ್ದೊ.

ಬನ್ನಿ! ಹೋಗ್‌ಬಡಿ! ಬನ್ನಿ

ಇಕ್ಕಟ್ಟ್‌ನ ದಾರಿ, ಅದಾದ ಮೇಲೆ ಊರ್.

ಬಂಗರಾಜ ಕಲ್ಯಾಣಸ್ವಾಮಿಯತ್ರ ಹೇಳ್ತ್.

"ಸುರುಗೆ ಸಿಕ್ಕುದು ಕಂಕನಾಡಿ. ಸೀದ ಹೋದರೆ ಹಂಪನಕಟ್ಟೆಗೆ ಹೋದವೆ. ಬಲಪುಡೆಗೆ ತಿರ್ಗಿರೆ ಬಾವುಟಗುಡ್ಡೆಗೆ"

ಕಲ್ಯಾಣಸ್ವಾಮಿ ಮಾತಾಡ್ತ್ಲೆ. ಸುಮ್ಮನೆ ತಲೆ ಆಡ್ಸಿತ್. ಎಲ್ಲರ ಎದೆಸ ಢವಢವಂತ ಹೊಡ್ಕಣ್ತಿತ್ತ್. ಇಕ್ಕಟ್ಟ್‌ನ ದಾರಿ ಮುಗ್ದ್ 'ಏರಿ' ಬಾತ್. ಅದ್ ದಾಟಿದ ಕೂಡಲೇ ಕಂಡತ್ ಹೊಗೆಯಾಡ್ತಿದ್ದ ಊರ್.

ಕೈ ಎತ್ತಿ ಬೆರ್ಳ್ ತೋರ್ಸಿ ಬಂಗರಾಜ ಹೇಳ್ತ್: "ಅದನಿ ಮಂಗ್ಳೂರು!"

* * * * *

ಅದನೀ ಮಂಗ್ಳೂರು!

–ಅರ್ಧ ಹರದಾರಿಯಷ್ಟ್ ಅಗಲ ಆಗಿದ್ದ ನೇತ್ರಾವತಿ ನದಿನ ಆಚೆಗೆ ಹೊಗೆಯಾಡ್ತಿದ್ದದರ ಉಳ್ದವ್ಕೆ ತೋರಿಸ್ಕಂಡ್ ಸುಬ್ರಾಯ ಹೆಗ್ಗಡೆ ಹೇಳ್ತ್.

ಮತ್ತುಸ ವಿವರಿಸಿತ್.

"ಸುರುಗೆ ಸಿಕ್ಕುದು ಬೋಳಾರ. ಮೇಲೆ ಹೋದರೆ ಹಂಪನಕಟ್ಟೆ, ಎಡದ ಪುಡೆಗೆ ತಿರ್ಗಿರೆ ಬಂದರ್, ಬಲದ ಪುಡೆಗೆ ತಿರ್ಗಿರೆ ಬಾವುಟಗುಡ್ಡ"

"ಈ ಹೊಳೆ ಇಲ್ಲದೆ ಇದ್ದರೆ ಲಾಯ್ಕಿತ್ತ್‌ಂತ ಒಬ್ಬ ಹೇಳ್ತ್".

ಇನ್ನೊಬ್ಬ ಹೇಳ್ತ್.

ಈಜಿಕಂಡ್ ಹೋಕೆ ಆದೋ?

ಮತ್ತೊಬ್ಬ ನಗಾಡಿಕಂಡ್ ಹೇಳ್ತ್.

"ಸಮುದ್ರಕ್ಕೆನಾ? ಖಂಡಿತ ಆದೆ. ಅರ್ಧಲಿ ಕೈ ಕಾಲ್ ಬುಟ್ರೆ ತೇಲಿಕಂಡೆ ಹೋಕ್"

ಹೆಗ್ಗಡೆ ಹೇಳ್ತ್.

"ಮ್ಯೊದಿನೆ, ಅಲ್ಲಿ ಮೂರ್‍ನಾಲ್ಕ್ ದೋಣಿಗ ಕಂಡವೆ. ಹೋಗಿ ಕರ್‍ಕಂಡ್ ಬಾ. ಆಚೆ ದಡ ತಲ್ಪಿದ ಮೇಲೆ ಎಲ್ಲವುಕೆ ಒಂದೊಂದು ಸಾವಿರ ವರಹ ಕೊಟ್ಟವೆಂತ ಹೇಳ್ತ್.

"ಹೇಳ್ನೆ"ಂತ ಹೇಳ್ತ್ ಮ್ಯೊದಿನ್.

ಅವನೊಟ್ಟಿಗೆ ಬೇರೆನು ಮೂರ್‍ನಾಲ್ಕ್ ಜನ ಹೋದ್ರೋ. ಕೆಳಗೆ ಇದ್ದ ದೋಣಿಗಳ ಹುಟ್ಟು ಹಾಕಿಕಂಡ್ ಅಂಬಿಗರ್ ಹೆಗ್ಗಡೆ ಇದ್ದ ಕಡೆಗೆ ತಂದ್ ಅದರ್‍ಲ್ಲಿ ಒಬ್ಬ ಹೇಳ್ತ್.

"ಅಡ್ಡ ಬಿದ್ದವೆ"

"ಹೊಳೆಲಿ ನಿತ್ತ್ ಅಡ್ಡ ಬಿದ್ದದೆಗಡ! ಒಬ್ಬ ಸೈನಿಕ ಹೇಳ್ತ್.

ಆ ಮಾತ್ ಕೇಳಿಸ ಕೇಳದವನಂಗೆ ಮಾಡಿ ಹೆಗ್ಗಡೆ ಹೇಳ್ತ್: "ನಾವು ಯಾರ್ ಗೊತ್ತುಟ"

"ಇಲ್ಲೆ"

ಒಳ್ಳೆದ್ ನಾವುಗೆ ತುರ್ತುಲಿ ಮಂಗ್ಳೂರಿಗೆ ಹೋಕು. ಸರ್‍ಕಾರದ ಹತ್ರ ಕೆಲ್ಸ ಉಟ್ಟು.

ಆ ಮುಖಂಡ ಲಾಯ್ಕ ಬೋಳ್ಸಿಕಂಡಿದ್ದ ತಲೆ ಮಂಡೆನೊಮ್ಮೆ ಪೂಜಿಕಣ್ತ್.

ಅದರ ನೋಡಿ ಹೆಗ್ಗಡೆ ಹೇಳ್ತ್: "ಯಾಕಪ್ಪ? ಮ್ಯೊದಿನ್ ಹೇಳ್ತ್‌ಲೆನಾ?"

"ಹೇಳ್ತ್. ಆದರೆ ಆಮೇಲೆ–"

ಏನ್ ಹೇಳ್ತ್? ಆಮೇಲೆ?"

"ನಾಲ್ಕ್ ದೋಣಿಗೆ ಸೇರಿ ನೂರ್ ವರಹ ಕೊಟ್ಟರೆಗಡ"

"ನೋಡ್ದನಾ? ಹೌದಾ ಮ್ಯೊದಿನೆ?"

ನಾವು ಯಾರ್ ಗೊತ್ತುಟಾ? ತೆಂಕುಂಬಳೆಯ ರಾಜರ್– ಸುಬ್ರಾಯ ಹೆಗ್ಗಡೆ! ಒಬ್ಬೊಂಬ್ಬಂಗೆ ಒಂದೊಂದ್ ಸಾವಿರ ವರಹ ಕೊಟ್ಟವೆ!"

ಸಣ್ಣ ದನಿಲಿ ಅಂಬಿಗ ಹೇಳ್ತ್: "ಆದು ಒಡೆಯ, ಎಷ್ಟ್ ಜನ ದಾಟುವೆ?"

"ಎಲ್ಲರ್!"

ಒಂದೇ ಸಲ ಆದ್ಲೆಲಾ

ಎರ್ಡ್ ಸರ್ತಿ ದಾಟ್ಸಿಯಾ, ಮೂರ್ಸಲ ದಾಟ್ಸು!

"ಅಪ್ಪಣೆ"

ಎಲ್ಲವು ಒಮ್ಮೆಲೆ ದೋಣಿಗಳಿಗೆ ಹತ್ತಿಕೆ ಹೊರ್ರೊ. ಹೆಗಡೆ ಗದ್ರಿ ಹೇಳ್ತ್:

"ಕತ್ತೆ ಜಾತಿಗ! ಬುದ್ಧಿ ಇಲ್ಲೆನಾ! ಮುಳ್ಗಿ ಸತ್ತರೆನಾ ಎಲ್ಲರ್? ಒಂದೊಂದು ದೋಣಿಗೆ ನೂರ್ ಜನ ಹತ್ತಿರೆ ಸಾಕ್."

ಆಯುಧನ– ಆಜನಗ, ಅವರ ಮಾತು ಪುತ್ತೂರ್ನ ದಾರಿಲಿ ಕಲ್ಯಾಣಪ್ಪನ ದಂಡ್ ಬರೋ ವಿಷ್ಯ.

ಅಂಬಿಗರಿಗೆ ಗೊತ್ತಿತ್ತ್. ಪಾಣಿಮೊಗರ್‌ನ ನೀರ್‌ಲಿ ತೇಲಿ ಬಂದಿತ್ತ್ ಈ ಸುದ್ದಿ. ಆದರೆ ಈ ಕಡೆಂದ ಇವೆಲ್ಲ?

ಸಾವಿರ ವರಹ ಸಿಕ್ಕಿದೆಲ್ಲ. ಸಧ್ಯ. ಈ ಸಹವಾಸ ತಪ್ಪಿರೆ ಸಾಕ್‌ಂತ ಅಂಬಿಗರ್ ದೋಣಿ ನಡ್ಸಿದೊ.

ನದಿ ಹರ್ದಂಗೆ ದೋಣಿಗಳು ಹೋಗ್ತಾ ಉಟ್ಟುಂತ ಯಾರೋ ಒಬ್ಬ ಹೇಳ್ತ್: "ಯಾಕೆಯ ಕೆಳಗೆ?"

"ಇದ್ ಕುಂಬಳೆ ಹೊಳೆ ಅಲ್ಲ ಮರಾಯ್ರೆ" – ಹಂಗೆ ಕೇಳ್ದವನ ತಮಾಷೆ ಮಾಡ್ತ್ ಇನ್ನೊಬ್ಬ.

ಸಮುದ್ರ ಕಾಣ್ತಿತ್ತ್. ಅದರ ನೋಡಿಕಂಡ್ ಹೆಗ್ಗಡೆಯ ಹತ್ರ ಕುದ್ದವ ಒಬ್ಬ–

"ಆ ಸಮುದ್ರ ದಾಟ್ರೆ ಕುಂಪಣಿಯವರ ಬಂದರಾ? ಆ ಪ್ರಶ್ನೆಗೆ ಉತ್ತರಾಂತ" ಇನ್ನೊಬ್ಬ ಹೇಳ್ತ್: "ಬರೇ ಬೆಪ್ಪ ದಾಟಿ ಬರದೆ ಹನುಮಂತನ ಹಂಗೆ ಹಾರಿಕಂಡ್ ಬಾಕೆ ಆದೆನಾ?

ಆ ಮಾತ್‌ಕತೆನ ಕೇಳಿಕಣುವ ಸ್ಥಿತಿಲಿ ಇತ್ಲೆ ಹೆಗಡೆನ ಮನಸ್ಥಿತಿ. ಉಳ್ಳಾಲಲಿ ಮಲ್ಗಿದ್ದ ಸೈನಿಕರ್ ಏಳಿಕೆ ತಡ ಆತ್. ಹೊತ್ತಾರೆ ಹಿಂಗೆ ದಾಟುವಲ್ಲಿ ಏನಾಕಿಲ್ಲೆ. ದಡಲಿಸ ಯಾರೂ ಇರಿಕ್ಕಿಲ್ಲೆ. ಆದರೆ ಒಂದ್ ಸಮಯ ಅಲ್ಲಿ ಸೈನ್ಯ ಇದ್ದರೆ? ಹೆಕ್ಕ್! ಈ ಜನರ ಕಟ್ಟಿಕಂಡ್..."

ದೋಣಿಗೆ ಹಾಯಿ ಕಟ್ಟಿಕಾನ ಚಟಪಟ ಸದ್ದ್ ಬಾತ್.

ಮತ್ತೆ ಗಾಳಿ ತುಂಬಿಕಾನ ನೆರೆಗೆ ಎದುರಾಗಿ ಹೋಕೆ ಸುರು ಆತ್. ಗಾಳಿಂದಸ ಜಾಸ್ತಿ ರಭಸ, ಹಾರ್‍ವ ಹಕ್ಕಿನಂಗೆ, ಸೀಳ್ವ ಬಾಣದಂಗೆ ಹೆಗ್ಗಡೆ ಹತ್ರ ಅಂಬಿಗ ಕೇಳ್ತ್: "ಬೋಳಾರಲಿ ಇಳಿಯೊದಲಾ ನೀವು?

ತಲೆಬಿಸಿಲಿದ್ದ ಹೆಗ್ಗಡೆ ಹೇಳ್ತ್, ಇನ್ನೆಲ್ಲಿ?

ಮತ್ತೆ ಅಂಬಿಗ ಮಾತಾಡ್ತ್ತ್ಲೆ.

ದೋಣಿಗ ನೊಡು ನೀರ್ಲಿ ಹೋಕನ ಒಬ್ಬ ಕಿರ್ಚಿತ್.

"ಅದನಿ ಸೈನ್ಯ!"

ಆಚೆ ದಂಡೆ ಮೇಲೆ– ಎಲ್ಲಿ? ಎಲ್ಲಿ?

ಅಂಬಿಗರ್ ಹೇಳ್ದೊ, ಆಚೀಚೆ ಅಲ್ಲಾಡ್‌ಬುಡಿ! ದೋಣಿ ಜಾಗ್ರತೆ!" ಹೆಗ್ಗಡೆನ ದೋಣಿಲಿದ್ದವ ಕಿರ್ಚಿತ್.

ಎಂತ ಮಾಡ್ದು?

ಬಾಯಿಮುಚ್ಚು! ಹೆಗ್ಗಡೆ ಹೇಳ್ತ್" ಆಚೆ ಕಡೆ ಇರೊವು ಸೈನಿಕರ್‌ಂತ ಹೆಂಗೆ ಹೇಳ್ದು.

ಅಂಬಿ ಕೇಳ್ತ್, ಏನಾತ್?

ಅಷ್ಟೊತ್ತಿಗೆ ಉತ್ತರ ಕೊಟ್ಟಂಗೆ ಒಮ್ಮೆಗೆ ಬೆಂಕಿಯ ಉಂಡೆಗ ಬೀಸಿಕಂಡ್ ಬಂದವ್! ಫಿರಂಗಿಂದ ಹಾರ್‍ಸಿದ ಗುಂಡುಗ. ನದಿ ದಂಡೆ ಮೇಲೆಂದ ಫಿರಂಗಿಗ.. ಮೇಲೆಂದ ಮೇಲೆ ಗುಂಡುಗ ಬಾತ್. ಕೆಲವು ಜನಕ್ಕೆ ತಾಗಿತ್, ನೀರಿಗೆ ಬೀತ್. ಬೊಬ್ಬೆಂತ ಹೇಳ್ರೆ ಬೊಬ್ಬೆ. ಅಷ್ಟೊತ್ತಿಗೆ ಆ ದೋಣಿ ಮಗ್ಚಿತ್.

ಎಷ್ಟೊ ಜನಂಗ ಸತ್ತ್ ಹೋದೋ. ಕೆಲವು ಜನ ವಾಪಾಸ್ ಹಿಂದೆ ಈಜಿ ಹೋದೋ. ಹಿಂಗೆ ಈಜಿಕಂಡ್ ಹೋದವ್ರ್ಲಿ ತೆಂಕುಂಬಳೆಯ ತುಂಡರಸ ಸುಬ್ರಾಯ ಹೆಗ್ಗಡೆ ಇತ್ಲೆ. ಗುಂಡು ಅವನಸ ಬಲಿ ತಕಂಡಿತ್ತ್.

ವಾಪಾಸು ಕರ್ಕಂಡ್ ಹೋದವೆಂತ ಕಾಯ್ತಿದ್ದ ಐನೂರು ಜನ ಸೈನಿಕರ್ಲಿ ದಡಲಿ ಯಾರೊಬ್ಬನು ಇತ್ಲೆ. ಒಬ್ಬನು ಇತ್ಲೆ.

## ೨೧

ಕೊಡಗ್‌ನ ತೋಡು, ದಕ್ಷಿಣ ಕನ್ನಡ ಜಿಲ್ಲೆಲಿ ಹರ್‍ದ್ ನದಿ ಆಗಿ, ಪ್ರವಾಹ ಆಗಿ ಕಡಲ ತಡಿಗೆ ಬಂದ್ ಎತ್ತಿತ್.

ಮಂಗ್ಳೂರ್‌ನ ಜನ ನೆನ್ಸಿಕಂಡೇ ಇದ್ದೊ ಈ ಪ್ರವಾಹನ.

ಕಂಕನಾಡಿಂದ ಸುರು ಮಾಡಿ. ಪೇಟೆ ಬೀದಿಲಿ ಬಂದ ನೀರ್ ಗುಲಾಮಗಿರಿನ ಕೊಳ್ಕ್‌ನ ಉದ್ದಕ್ಕೆ ತೊಳ್ತ್.

ಬಾವುಟ, ದೀವಟಿಕೆ, ಕುದ್ರೆ ಓಡ್ಸವು, ಬಟ್ಟೆ ಎಲ್ಲಸ ಕೊಳಕಾಗಿದ್ದುರಸ

ಮೋರೆಲಿ ಮಾತ್ರ ಕಳೆಯಿದ್ದ ಸೈನಿಕರ್. ಮಂಗ್ಳೂರ್ ಪೇಟೆನ ಹುಕ್ಕಿತ್ ಕಲ್ಯಾಣಸ್ವಾಮಿನ ಸೇನೆ. ಹಂಪನಕ್ಕಟೆ ಹತ್ರ ಬಾಕನ ಸೈನ್ಯನ ಆಶ್ಚರ್ಯಲಿ ನೋಡಿಕಂಡ್ ನಿತ್ತ ಕೆಲವರ ಕಲ್ಯಾಣಸ್ವಾಮಿ ಹತ್ರಕೆ ಕರ್ತ್. ಹತ್ರ ಬಂದವ್ ಕೈ ಮುಗ್ದ್ ನಿಂತೊ.

ಅವ್ಕೆ ನಮಸ್ಕಾರ ಮಾಡಿ ಕಲ್ಯಾಣಸ್ವಾಮಿ ಕೇಳ್ತ್ : "ಇಂಗ್ಲೀಷ್‌ನವು ಎಲ್ಯೊಳ?"

ಅವರಲ್ಲಿ ಒಬ್ಬ ಹೇಳ್ತ್: "ಅವು ಬೊಳ್ಪಿಗೆನೆ ನದಿಗಿಳ್ದೊ ಸ್ವಾಮಿ ಇಷ್ಟೊತ್ತಿಗೆ ಸಮುದ್ರ ತಲ್ಪಿರ್ವ."

ಸಮುದ್ರನಾ?

"ಹೌದು ಸ್ವಾಮಿ. ಅವೆಲ್ಲಾ ಹಡ್‌ಗ್ ಹತ್ತಿ ತಲಚೇರಿಗೆ ಹೋದವೆ ಗಡ."

ಕಲ್ಯಾಣಸ್ವಾಮಿ ತುಟಿ ಕಚ್ಚಿತ್.

"ತಪ್ಪಿಸಿಕಂಡ್ ಬಿಟ್ಟೋ! ರಾಮಗೌಡಂಗೆ ಮನ್ಸ್ ಗಜಿಬಿಜಿ ಆತ್."

ವಿಷ್ಯ ಹೇಳ್ದವನ ಬಂಗರಾಜ ಕೇಳ್ತ್ : "ಎಷ್ಟ್ ಜನ ಇದ್ದೊ?"

"ಹೆಂಗಸರ್, ಮಕ್ಕ ಸೇರಿ ಸುಮಾರ್ ಇಪ್ಪತ್ತೈದ್ ಜನ.

ಎಲ್ಲಾ ಬಿಳಿಯವೇ. ಅವರೊಟ್ಟಿಗೆ ಏಳೆಂಟ್ ಜನ ಊರ್‍ನವು ಚಾಕ್ರಿಗೆ ಇದ್ದೊ.

'ಥೂ'!ಂತ ಮಡೆ ಉಗ್ತ್ ಸೋಮಯ್ಯ

ಕಲ್ಯಾಣಸ್ವಾಮಿ ಕೇಳ್ತ್: "ಎಲ್ಲಿಟು ಅವ್ರ ಸೈನ್ಯ?"

ಸೈನ್ಯ ಇದ್ದರೆಲಾ? ಸಿಪಾಯಿಗ ಅರ್ವತ್ತು ಎಪ್ಪತ್ತು ಜನ ಇರೊಕು. ಖಜಾನೆ, ಜೈಲ್, ಬಾವುಟಗುಡ್ಡದ ರಕ್ಷಣೆ ಮಾಡಿರೊಕು. ಆದುಂತ ಹೇಳಿಕಂಡ್ ಕಲ್ಯಾಣಸ್ವಾಮಿ, ಆಗಲೇ ನೆನ್ಸಿಕಂಡ ಯೋಜನೆನ ಉಳ್ದವ್ಕೆ ಹೇಳ್ತ್.

"ರಾಮಗೌಡ್ರೇ! ಐನೂರು ಜನರೊಟ್ಟಿಗೆ ನೀವ್ ಸೆರೆಮನೆ ಕಡೆಗೆ, ಹೋಗಿ ಖೈದಿಗಳ ಬುಡ್ಸಿ! ನಂಜ್ಯನವೇ ನೀವು ಬಂದರಿಗೆ ಹೋಗಿ! ಇಂಗ್ಲೀಷ್‌ನವರ ಬೆನ್ನಟ್ಟಿಗೆ ಎಷ್ಟರಮಟ್ಟಿಗೆ ಆದೆಂತ ನೋಡಿ! ಚೆಟ್ಟಿ, ಕರ್ತು ನೀವು ಶಸ್ತ್ರಗಾರಕ್ಕೆ ಹೋಗಿ ಅದರ ವಶಪಡ್ಸಿಕಣಿ! ಅಣ್ಣಿಗೌಡ್ರೆ ನೀವ್ ಕಲೆಕ್ಟರ್‌ನ ಕಛೇರಿಗೆ ಹೋಗಿ ಖಜಾನೆಗೆ! ಉಳ್ದವೆಲ್ಲಾ ಬಂಗರಸರು ಮತ್ತೆ, ನನ್ನೊಟ್ಟಿಗೆ ಬನ್ನಿ. ಬಾವುಟಗುಡ್ಡಕ್ಕೆ ಪೋಯಿ ಬಾವುಟದ ಕರಿಯಪ್ಪ ಬಂದ್ ನಮ್ಮೆದುರ್ಲಿ ಹೋಗು.

ಸೈನ್ಯ ಐದ್ ಭಾಗ ಆಗಿ ಐದ್ ದಿಕ್ಕ್‌ಲಿ ಹೋತ್. ಬಾವುಟ ಗುಡ್ಡದ ಕಡೆಗೆ ಹೋಕಂಡ್ ಕಲ್ಯಾಣಸ್ವಾಮಿ ಬಂಗರಾಜಂಗೆ ಹೇಳ್ತ್.

"ಹಿಂಗಾದೆಂತ ನಂಗೆ ಸಂಶಯ ಇದ್ದೇ ಇತ್ತ್. ಕೊನೆಗೆಸ ಆ ಜನಂಗ ಕೈಗೆ ಸಿಕ್ಕಿತ್ಲೆ."

ಅದೆಂತ ಇದ್ದರು ಮಂಗ್ಳೂರು ಗೆದ್ದ ಹಂಗೆ ಆತ್.

ಹೌದು, ಆದರೆ ಆ ಜನಕ್ಕೆ ಉಪ್ಪು ನೀರು ಕುಡ್ಸೊಕುಂತ ನಮ್ಮವ್ಕೆ ಇದ್ದ ಆಸೆ ಈಡೇರ್ತ್‌ಲೆ.

...ಗುಡ್ಡೆನ ಮೇಲೆ ಈಸ್ಟ್ ಇಂಡಿಯಾ ಕಂಪೆನಿಯ ಧ್ವಜನ ನೋಡಿಕಂಬಕೆ ನಿತ್ತ ಇಬ್ಬರ್ ಸೈನಿಕರ್ಲಿ ಒಬ್ಬ, ಹತ್ತಿಕಂಡ್ ಬರ್ತಿದ್ದ ಸೇನೆನ ನೋಡಿ ಒಟ್ರಾಸಿ ಗುಂಡ್ ಹಾರ್ಸಿತ್ತ್. ಒಂದು ಗುಂಡು ಕುದುರೆಂದ ಮುಂದೆ ಬರ್ತಿದ್ದ ಒಬ್ಬ ಸೈನಿಕನ ಹೊಟ್ಟೆನ ಅದ್ ಹುಕ್ಕಿತ್. ಅವ ಉರ್ಳಿಕಂಡ್ ಹೋದಂಗೆ ಸೋಮಯ್ಯನ ಕೋವಿ ಅವನ ಬಲಿ ತೆಗ್ತ್.

ಕಲ್ಯಾಣಸ್ವಾಮಿ ಹೇಳ್ತ್.

"ಗಾಯ ಆದವನ ಎತ್ತಿಕಣಿ, ಮತ್ತೆ ತನ್ನಷ್ಟಕ್ಕೆ ಹೇಳಿಕಣ್ತ್. ಈ ದೇಶದವ ಆಗಿದ್ದ್, ಪರಕೀಯರ ಚಾಕ್ರಿ ಮಾಡ್ವ ಮೊನ್ಸ. ಎಂಥ ದಡ್ಡ ಇವ!" ಕಲ್ಯಾಣಸ್ವಾಮಿನ ಸೈನಿಕರ್, ಕಂಪೆನಿನ ಬಾವುಟನ ಕೆಳಕ್ಕೆ ಇಳ್ಸಿ ಹರ್ದ್ ಮೆಟ್ಟಿ, ಕಿಚ್ಚಿ ಕೊಟ್ಟು ಸುಟ್ಟ್ ಹಾಕಿದ್ದೊ.

ಕರಿಯಪ್ಪ ಸುಳ್ಯಂದ ಹೊತ್ತ್ ತಂದ ಬಾವುಟ ಆ ಧ್ವಜ ಸ್ತಂಭದ ಮೇಲೇರ್ತ್. ಕುದುರೆಗಳಂದ ಎಲ್ಲವು ಕೆಳಗೆ ಇಳ್ದೊ. ಗಾಯ ಆದವನ ಉಪಚಾರ ಮಾಡ್ತಿದ್ದೊ ಎಲ್ಲವು. ಆದರೆ ಹೆಚ್ಚು ಹೊತ್ತ್ ಅವ ಬದ್ಕಿತ್ಲೆ.

ಮೋರೆ ಬಾಡ್ಸಿಕಂಡ್ ಕಲ್ಯಾಣಸ್ವಾಮಿ ಹೇಳ್ತ್ : "ನಾವುಗೆ ಸುರುನ ಬಲಿದಾನ!"

ಸೈನಿಕರತ್ರ ಅವ ಕೇಳ್ತ್ :  ಯಾರಿಗೆ ಇವ ಪರಿಚಯ ಉಟ್ಟು?

ಯಾವೂರು ಇವಂದ್? ನಮ್ಮ ಎಲ್ಲಿ ಸೇರಿಕಣ್ತ್? ಎಲ್ಲಿ ಸೇರಿಕಣ್ತ್‌ಂತ ಯಾರಿಗೆಸ ಗೊತ್ತಿತ್ಲೆ.

..ಎಲ್ಲರ್ ಈಗ ಇಲ್ಲಿವರ್ಗೆ ನೋಡದೆ ಇದ್ದ ಸಮುದ್ರನ ನೋಡಿಕೆ ಸುರು ಮಾಡ್ದೊ. ಕಲ್ಯಾಣಸ್ವಾಮಿಸ ಕೆಳಗೆನೆ ನೋಡ್ತಿತ್ತ್. ಕೆಳಗೆ ಗುಂಡಿಲಿ ಊರ್ ಮಲ್ಗಿತ್ತ್. ಬಿಸಿಲಿದ್ದರುಸ ಗಾಳಿ ತಣ್ಣಂಗೆ ಬೀಸ್ತಿತ್ತ್.

ಕಲ್ಯಾಣಸ್ವಾಮಿಗೆ ಆ ಪ್ರಕೃತಿನ ಲಾಯ್ಕನ ಸವಿಯಕೆ ಮನಸ್ಸಾಗ್ತಿತ್ಲೆ.

ಸತ್ತ್ ಬದ್ಕಿಕಂಡಿದ್ದ ಸೈನಿಕನ ಮೋರೆನ, ಮತ್ತೆ ಆ ಕಂಪೆನಿ ಸಿಪಾಯಿಯವನ ಮೋರೆನ ನೋಡಿ ಬೇಜಾರ ಆತ್.

ಮಾತಾಡದೆ ನಿಂತ ಕಲ್ಯಾಣಸ್ವಾಮಿಗೆ ಬಂಗರಾಜ ಹೇಳ್ತ್ : "ಕಲೆಕ್ಟರ್ ಹತ್ತಿದ ಹಡಗು ಎಲ್ಲಿಟ್ಟೊ? ದುರ್ಬಿನು ಇದ್ದಿದ್ದರೆ ಹುಡ್ಕಕಾಯ್ತ್. ಸಾಧಾರಣ ಆಗಿ ಪತ್ತೆ ಮಾರು ಹಡಗ್ ಬಾದು ಈ ಜಾಗಕ್ಕನೆ. ಅದ್ ನೇತ್ರಾವತಿ ಹೊಳೆ, ಈಚೆದು ಗುರುಪುರ ಹೊಳೆ, ಅದೊಂದು ನಡುಗುಡ್ಡೆ."

ಕಲ್ಯಾಣಸ್ವಾಮಿ ತಲೆಯೆತ್ತಿ ನೋಡ್ತ್. ಬೇರೆ ನಾಲ್ಕ್ ಕಡೆಗಳಿಗೆ ಹೋದ ತಮ್ಮ ಸೇನೆಯವರ ನೆನಪಾತ್ ಅವಂಗೆ. ಸೈನಿಕರತ್ರ ತಿರ್‍ಗಿ ಹೇಳ್ತ್.

"ಬೇರೆಯವ್ ಬರುವರೆಗೆ ನೀವಿಲ್ಲಿಯೆ ಕುದ್ದ್‌ಕಣಿ ಕರಿಯಪ್ಪ. ಗುಡ್ಡೆ ಇಳಿವ ಕಡೆ ಇಬ್ಬರ ಕಾವಲಿಗೆ ನಿಲ್ಸ್. ಹಂಗೆ ಹೇಳಿ ಕಲ್ಯಾಣಸ್ವಾಮಿಸ ಅಲ್ಲಿಯೆ ದೊಡ್ಡದಾಗಿ ಬೆಳ್ದ ಗೇರ್ದಹಣ್ಣ್ ಮರದ ಬುಡಲಿ ಕುದ್ದತ್."

ಮಧ್ಯಾಹ್ನ ಆಕನ ಒಂದೊಂದಾಗಿ ದಳಗ ಬಾವುಟ ಗುಡ್ಡೆಗೆ ಬಂದೊ. ಸೆರೆಮನೆನ ಹತ್ರ ಮತ್ತೆ ಶಸ್ತ್ರಗಾರ ಕಚೇರಿಲಿ ನಡ್ದ ಸಣ್ಣ ಜಗಳಲಿ ಒಟ್ಟು ಎಂಟ್ ಜನ ಸೈನಿಕರ್ ಸತ್ತಿದ್ದೊ. ಹತ್ತಾರ್ ಜನಕ್ಕೆ ಗಾಯ ಆಗಿತ್ತ್. ಸಿಪಾಯಿಗಲ್ಲಿ ಸತ್ತವರ ಸಂಖ್ಯೆ ತುಂಬಾ ಜಾಸ್ತಿ ಇತ್ತ್.

ಆ ಚೈತ್ರಯಾತ್ರೆಲಿ ವೈರಿನ ಸುರುನ ಗುಂಡಿಗೆ ಬಾವುಟಗುಡ್ಡೆಲಿ ಸತ್ತವನ ಯಾರಿಗೆ ಗುರ್ತಿಸಿಕೆ ಆತ್ಲೆ. ಎರ್ಡ್ ಮೂರ್ ದಿನಂದ ನದಿಲೇ ಕಾದ್ ನಿತ್ತ ಪತ್ತೆ ಮಾರನ್ನು ಆ ದಿನ ಬೊಳ್ಪಿಗೆ ಇಂಗ್ಲೀಷರ್ ಹತ್ತಿ ಹೋದೋ ಎಂಬ ಸುದ್ದಿನ ನಂಜಯ್ಯ ತಾತ್.

ಅವ ಹೇಳ್ತ್ : "ಫಿರಂಗಿನ ಪತ್ತೇಮಾರುಗೆ ಹತ್ತುಸುವ ಮುಂದೆ ಇಂಗ್ಲೀಷರ್ ನೇತ್ರಾವತಿ ನದಿಲಿ ನಾಕ್ ದೋಣಿಗಳ ಗುಂಡು ಹಾರ್ಸಿ ಮುಳ್ಗುಸಿದಗಡ."

ಯಾರ್ ನಾಕ್ ದೋಣಿಗಲ್ಲಿ ದಾಟ್‌ತ್ತಿದ್ದವು? ನೊಡುನೀರ್‍ಲಿ ಮುಳ್ಗಿದವ್? ಒಂದೂ ಗೊತ್ತಾತ್ಲೆ.

"ಬಂದರ್‌ನ ವ್ಯಾಪಾರಿಗೆಲ್ಲ ಸಾಯಾಂಕಾಲ ರಾಜ್ಯ ಪಾಲರ ನೋಡಿಕೆ ಬಂದವೆಗಡ" ನಂಜಯ್ಯ ಹೇಳ್ತ್.

ದಾಳಿಂದ ಲಾಭ ಪಡ್ದದ್ ರಾಮಗೌಡನ ದಳ ಅವ ಸೆರೆಮನೆಂದ ಬುಡ್ಸಿ ತಂದವರ್‍ಲಿ ಹೆಚ್ಚಿನವು ಕನ್ನಡ ಜಿಲ್ಲೆಯವು. ಅವರ್‍ನೆಲ್ಲಾ ಕಲ್ಯಾಣಸ್ವಾಮಿಗೆ ಪರಿಚಯ ಮಾಡಿಕೊಟ್ಟ್‌ಕಂಡ್ ರಾಮಗೌಡ ಹೇಳ್ತ್.

"ಇವೆಲ್ಲಾ ಇನ್ನ್ ನಮ್ಮ ಸೈನ್ಯಲಿ ದುಡ್ದವೆ ಸ್ವಾಮಿಯವೆ" ಕಾರಾಗೃಹಲಿ ಇದ್ದ್ ಸಪೂರ ಆಕಂಡಿದ್ದ ಆ ಜೀವಿಗಳ ನೋಡಿ ಕಲ್ಯಾಣಪ್ಪ ಹೇಳ್ತ್, ಸಂತೋಷ.

ಚೆಟ್ಟಿ ಹೇಳ್ತ್.

ಈ ವೀರಂಗಳಿಗೆಲ್ಲಾ ಶಸ್ತ್ರಾಸ್ತ್ರಗಳ ನಾ ಕೊಟ್ನೆ. ಶಸ್ತ್ರಾಗಾರಲಿ ಸಣ್ಣಮಟ್ಟದ್ ತುಂಬಾ ಉಟ್ಟು. ನಮ್ಮವೆ ಈಗ ಅಲ್ಲಿ ಕಾವಲ್ ಇರ್ದ್.

ಅಣ್ಣಿಗೌಡ, ಖಜಾನೆನ ಹೊತ್ತ್ ತಾತ್.

ಲೆಕ್ಕ ಮಾಡ್ದರ್ಯ ಗೌಡರೇ? ಕಲ್ಯಾಣಸ್ವಾಮಿ ಕೇಳ್ತ್.

"ಹನ್ನೆರಡ್ ಸಾವಿರ ವರಹ ಉಟ್ಟು".

"ಸರಿ. ನಮ್ಮ ಬೊಕ್ಕಸಕೆ ಜಮೆ ಮಾಡಿ".

ಪರಿಸ್ಥಿತಿನ ಎಲ್ಲಾ ವಿಷ್ಯ ಸರ್ಯಾಗಿ ಗೊತ್ತಾದ ಮೇಲೆ ಕಲ್ಯಾಣಸ್ವಾಮಿ ದಂಡನಾಯಕರೊಟ್ಟಿಗೆ ಹೇಳ್ತ್ : "ಗುಡ್ಡೆಮೇಲೆ ಜಾಗ ಲಾಯ್ಕ ಉಟ್ಟು. ಶಿಬಿರ ಇಲ್ಲಿಯೆ ಮಾಡೊಮ. ಆಕಿಲೆನಾ?"

ಇದ್ ಎಲ್ಲವುಕೆ ಒಪ್ಪಿಗೆ ಆತ್.

ಇನ್ನ್ ಆಕಾದ ಕೆಲ್ಸಗಳೆಲ್ಲ ಲೆಕ್ಕ ಹಾಕಿ ಕಲ್ಯಾಣಸ್ವಾಮಿ ಹೇಳ್ತ್: "ಊರೊಳಗೆ ಹೊಕ್ಕ್‌ದ್ ಒಳ್ಳೆ ಮದ್ದ್ ಕೊಡುವರ ಕರ್ಕಂಡ್ ಬನ್ನಿ. ಗಾಯ ಆದವ್ಕೆ ಮದ್ದ್ ಮಾಡೊಕು.

ಸತ್ತವರ ಕ್ರಿಯೆಗಳ ಮಾಡಿಕೆ ಎಲ್ಲ ಸಿದ್ಧ ಮಾಡಿ. ಅವರ ಮನೆಯವ್ಕೆ ಪರಿಹಾರ ಕೊಡೊಕು. ಕಂಪೆನಿ ಸಿಪಾಯಿಗಳ ಶವಗಳ ಊರ್‌ಂದ ಹೊರಗೆ ಇಸಿಬುಡಿ.

ಕಲ್ಯಾಣಸ್ವಾಮಿ ಎದ್ದ್‌ನಿಂತ್ ಬಾವುಟನ ನೋಡಿ ದೀವಟಿಗೆನ ಗಮನಿಸಿ ಹೇಳ್ತ್.

"ಮಂಗ್ಳೂರು ಸ್ವತಂತ್ರವಾದ ಹಂಗೆನೆ ಇನ್ನ್. ಅಲ್ಲ ರಾಮಗೌಡರೇ?"

ಹೌದು ಸ್ವಾಮಿ, ರಾಮಗೌಡ ಹೇಳ್ತ್.

....ಸಾಯಾಂಕಾಲ ಕರಿಯಪ್ಪ ಅರೆಬೆತ್ತಲೆ ಆಗಿದ್ದ ಇಬ್ಬರ ಹಿಡ್ದ್ ಕಲ್ಯಾಣಸ್ವಾಮಿಯತ್ರ ಕರ್ಕಂಡ್ ಬಾತ್. ಆಡಳಿತ ಸಮಸ್ಯೆಗಳ ಮಾತಾಡಿಕಂಡಿದ್ದ ಕಲ್ಯಾಣಸ್ವಾಮಿ ತಲೆಯೆತ್ತಿತ್.

"ಯಾರಿವೆಲ್ಲ? ಏನ್ ವಿಷಯ?"

"ಇವು ಸುಬ್ರಾಯ ಹೆಗ್ಗಡೆ ಕಡೆಯವು ಗಡ" ಕರಿಯಪ್ಪ ಹೇಳ್ತ್.

ಎಲ್ಲರ ಕಿವಿ ನೆಟ್ಟಂಗೆ ಆತ್. ಎಲ್ಲವು ಇವರ್ನೆ ನೋಡ್ದೊ. ಈಜಿಕಂಡ್ ದಡ ಸೇರಿ ಈ ನಿಮ್ಮ ಹತ್ರ ಬಂದಳೊ.

"ಸಾವಿರ ಜನ ಹೊರ್ಟಿದ್ದೊ. ಫಿರಂಗಿಂದ ಗುಂಡು ಹಾರ್ಸಿದೋ. ನಾಕ್ ದೋಣಿ ನಾಶ ಆತ್. ಹೆಗ್ಗಡೆಯವು ಮುಳ್ಗಿ ಸತ್ತೊ."

ಛೆ! ಹಿಂಗು ಆತ? ಕಲ್ಯಾಣಸ್ವಾಮಿ ಕೇಳ್ತ್.

ನಂಜಯ್ಯ ಹೇಳ್ದವರ ಕೇಳ್ತ್ : ಇಂದ್ ಬೆಳಿಗ್ಗೆನಾ?

'ಹೂಂ'

ಎಲ್ಲರೊಟ್ಟಿಗೆಂತ ನಂಜಯ್ಯ ಹೇಳ್ತ್. ಇಂಗ್ಲೀಷ್‌ನವು ಪತ್ತೇಮಾರ್ ಹತ್ತಿಕೆ ಮುಂದೆ ಈ ದೋಣಿಗ ಬಾಕೆ ಸರಿ ಹೋಗಿಟು. ತಕಂಡ್ ಹೊರ್ಟಿದ್ದ ಫೀರಂಗಿನನ್ನೇ ಇವರ ಮೇಲೆ ಹಾರಿಸ್ಯೊಳ.

"ಇಷ್ಟು ಒಳ್ಳೆ ದಿನಲಿ, ಇಂತ ಕೆಟ್ಟ ಸುದ್ದಿ!" ಕಲ್ಯಾಣಸ್ವಾಮಿ ಹೇಳ್ತ್.

"ನೀವು ನಮ್ಮ ಸೈನ್ಯಲಿ ಇದ್ದರೆನಾ?"

ನೀವು ಬುಟ್ಟರೆ ನಾವು ಊರಿಗೆ ಹೋದವೆ" ಒಬ್ಬ ಹೇಳ್ತ್.

ಆದು. ಕತ್ತಲೆಗೆ ಉಂಡ್‌ದ್ ಹೋಗಿ.

ಕರಿಯಪ್ಪ ಕರ್ದರುಸ ಅವಿಬ್ಬರ್ ಮಿಸ್ಕಿತ್ಲೆ. ಕಲ್ಯಾಣಸ್ವಾಮಿ ಪುನಃ ಹುಬ್ಬು ಹಾರ್ಸಿ ನೋಡಿಕಾನ ಆ ಮನುಷ್ಯ ಹೇಳ್ತ್.

"ರಾಜರೊಟ್ಟಿಗೆ ಕೇಳಿ ನಾವು ಸಿಕ್ಕಕಾದರ ತಕಂಡ್ ಪೋಯಿಂತ ಬಂದದ್"

ಎಲ್ಲರ ಕೆಬಿ ನೆಟ್ಟಂಗಾತ್.

"ಏನ್ ಇಸಿಕಂಡ್ ಹೋಕೆ ಬಂದರಿ?"

"ಒಬ್ಬೊಂಬ್ಬಂಗೆ ಒಂದೊಂದ್ ಸಾವಿರ ವರಹ ಕೊಟ್ನೆಂತ ಹೆಗ್ಗಡೆಯವ್ ಹೇಳ್ದೊ."

ಏನ್ ಒಂದು ಸಾವಿರ ವರಹನೆ? ನಿಮ್ಮ ಸೇನೆ ಸೇರ್ದ ಎಲ್ಲವುಕೆ ಹಿಂಗೆ ಹೇಳ್ದನಾ?

ಊಂ, ಲೊಟ್ಟೆ ಹೇಳುವೆನಾ ನಾವ್?

ಕಲ್ಯಾಣಸ್ವಾಮಿ ಕಣ್ಣು ಕೆಂಪ್ ಮಾಡಿ ಕಿರ್ಚಿಕಂಡ್ ಹೇಳ್ತ್.

ಕರಿಯಪ್ಪ! ಇವರಿಬ್ಬರ ಈಗನೆ ಗುಡ್ಡೆಂದ ಕೆಳಗೆ ಓಡ್ಸು!"

ಇಬ್ಬರ ಎಳ್ಕಂಡ್ ಹೋತ್ ಕರಿಯಪ್ಪ.

ಕಲ್ಯಾಣಸ್ವಾಮಿನ ಒಟ್ಟಿಗಿದ್ದವೆಲ್ಲ ಬಿದ್ದ ಬಿದ್ದ್ ನಗಾಡ್ದೊ. ಹಂಞ ಹೊತ್ತು ಹುಬ್ಬು ಗಂಟ್ ಹಾಕಿ ಕುದ್ದ ಕಲ್ಯಾಣಸ್ವಾಮಿ, ಕೊನೆಗೆ ಅವಸ ಗಟ್ಟಿಯಾಗಿ ನಗಾಡ್ತ್.

"ಒಳ್ಳೆ ಸುಬ್ರಾಯ ಹೆಗ್ಗಡೆ". ಒಂದ್ ಸಾವಿರ ವರಹಗಡ ಅಲ್ಲಿದ್ದವೆಲ್ಲಾ ಪುನಃ ನಗಾಡಿಕೆ ಸುರು ಮಾಡ್ದೊ.

...ಇರ್ಲ್ ತಿಂಗಳ್ ಬೊಳ್ಪ್‌ಲಿ ಹೊರಗೆ ಗಾಳಿಗೆ ಮೈಯೊಡ್ಡಿ ಬಂಗರಾಜ ಮತ್ತೆ ರಾಮಗೌಡರೊಟ್ಟಿಗೆ ನಿತ್ತ್‌ಕಂಡ್ ಕಲ್ಯಾಣಸ್ವಾಮಿ ಕೇಳ್ತ್.

ಹುಣ್ಣಿಮೆ ಯಾಗ ರಾಮಗೌಡ್ರೆ?

"ಇಂದ್‌ಂದ ಹನ್ನೊಂದನೆ ದಿನ".

"ನಮ್ಮ ಮನೆಲಿರಿಕಾನ ಮಾತಾಡಿಕಂಡ್ ಹುಣ್ಣಿಮೆ ದಿನ ನಾವ್ ಸಮುದ್ರ ದಂಡೆ ಮೇಲಿರಕುಂತ ಹೇಳ್ದ್ ನೆಂಪುಟ್ಟಾ?"

ಹೆಂಗೆ ಮರ್ತದೆ ಹೇಳಿ?

ಹುಣ್ಣಿಮೆ ಮನೆ ದೂರಲಿದ್ದ ಸಮುದ್ರ ಅಗಲ ಹರಡಿಕಂಡ್ ಕಾಡ್ ಇಂತ ತಿಂಗಳ್ ಬೊಳ್ಪುನ ಇರ್ಲ್‌ಲಿನೆ ನಾ ಹೆಚ್ಚಾಗಿ ಮನೆಗೆ ಹೋಗ್ತಿದ್ದತ್ ಅಮ್ಮ ಗಿರಿಜಾ..

ಮನ್ಸ್ ಎಲ್ಲಿಯೋ ಹೋಕನ ಅದರ ಹಿಡ್ದ್ ಕಟ್ಟಿ ಹೇಳ್ತ್ : ಬನ್ನಿ ಗಾಯ ಆದವರ ನೋಡಿ ಬರಮ.

## ೨೨

ಆ ವರ್ಷ ಲೀಹಾರ್ಡಿ ಈ ನೆಲಲಿ ಅನ್‌ಭವಿಸಿದ್ ಭಾರಿ ಕಷ್ಟದ ಬೇಸಿಗೆ. ಮರಗಳ ಹಸುರಿಗೆ ಬರಗಾಲ ಇತ್ಲೆ ಕೊಡಗ್‌ಲಿ. ನೆರಳಿಗು ಅಷ್ಟೆ. ಆದರುಸ ಆಂಗ್ಲರಿಗೆ ಬಿಸಿ ಮುಟ್ಟಿಟು. ಅವರ ಆಡಳಿತದ ಬುಡ ಗಡಗಡಾಂತ ಅಲ್ಲಾಡಿಕೆ ಸುರು ಆಗಿತ್ತ್.

ಈಸ್ಟ್ ಇಂಡಿಯಾ ಕಂಪೆನಿನ ಕೆಲ್ಸದವನಾಗಿ ಬಂದದ್ ಈ ಲೀಹಾರ್ಡಿ. ಕಂಡರಿಯದ ದೇಶಲಿ ಕೆಲ್ಸ ಮಾಡಿಕಂಡ್, ಬೇರೆಯವರ ಸೋಲ್ಲಿ ಕೀರ್ತಿಶಾಲಿ ಆಕುಂತ ಬಾಳ ಆಸೆ ಇತ್ತ್. ಆದರುಸ ಅವಂಗೆ ಮುಖ್ಯ ಆಗಿದ್ದದ್ ಸ್ವಂತ ಬದುಕುನ ದಾರಿ. ಹಂಞ ವರ್ಸ ದುಡ್ದ್, ಹಂಞ ಸಂಪಾದನೆನ ಉಳ್ಸಿ ಒಳ್ಳೆಯವಂತ ಹೆಸ್ರ್ ಪಡ್ದ್ ತಾಯ್ನಾಡಿಗೆ ಹೋಗಿ ಜೀವನ ಮಾಡಕುಂತ ಆಸೆ ಇತ್ತ್. ಆದರೆ ಇಂಗ್ಲೀಷ್‌ಗ ಕೊಡಗ್‌ಲಿ ಸೋತರೆ ಅವನ ಆಸೆ ಎಲ್ಲ ಮಣ್ಣ್‌ಪಾಲಾದೆ. ಭಾರತಂದ ಲಾಯ್ಕಲಿ ಹೋಗುವ ಮಾತಿರ್ಲ್ಲಿ; ದೇಶದವರ ಖೈದಿಯಾಗಿ ಕತ್ತಲೆ ಕೋಣೆಲಿ ನರಳೊಕು. ಇದರೆಲ್ಲ ನೆನ್ಸಿಕಂಡ್ ಅವನ ಮೈ ಜುಮ್ಮ್‌ಂತ ಹೇಳ್ತಿತ್ತ್.

ಮೈಯಿಡೀ ಬೆವರ್ತಿತ್ತ್.

ಲೀಹಾರ್ಡಿ ಗಾಳಿ ಹಾಕಿಕಂಡ್ ಬೊಬ್ಬೆ ಹಾಕ್ತಿತ್ತ್.

"ಎಂಥ ಸೆಖೆ! ಎಂಥ ಸೆಖೆ"

ಹೃದಯ ಮರ್ಡ್ತಿತ್ತ್.

"ಬಡವ ಆಗಿಯಾದರು ಸರಿಯೆ – ಕೂಲಿ ಮಾಡಿಯಾದರ್ ಸರಿಯೆ – ಯಾವ ತೊಂದರೆಸ ಇಲ್ಲದೆ ಹುಟ್ಟಿ ಬೆಳ್ದ ದ್ವೀಪಲಿಯೆ – ಇಂಗ್ಲೆಂಡ್‌ನಲ್ಲಿಯೇ ಹೊಟ್ಟೆ ಹೊರ್ಕಂಡ್ ಇರಕಾಯ್ತ್.

ಸೀಮೆ ನಾಯಿ ಬೊಗುಳ್ತು. ಅದರ ಹೊಕ್ಕುಳುಂದಲೇ ಹೊರ್ಟತ್ ಸ್ವರ – ಲೀಹಾರ್ಡಿನ ಹೊಕ್ಕುಳುಲಿ ನಡ್ಗಿಕೆ ಸುರಾತ್.

ಮಡಿಕೇರಿನ ಕೋಟೆಗೆ ಸಶಸ್ತ್ರ ಕಾವಲಿದ್ದರುಸ ಹೆಜ್ಜೆ ಹೆಜ್ಜೆಗೆ ಪ್ರಾಣಭಯಂದ ಲೀಹಾರ್ಡಿ ಹೆದರ್ತಿತ್ತ್. ಕಚೇರಿಲಿ ನಂಬುವ ಆಂಗ್ಲ ಅಧಿಕಾರಿಗ. ಸಿಪಾಯಿಗ ಇದ್ದರೂ..

ನಂಬುವ ಸಿಪಾಯಿಗನ? ಯಾರಿಗೆ ಗೊತ್ತು? ಯಾವ ಗಳಿಗೆಲಿ ಅವು ತಿರ್ಗಿ ಬಿದ್ದವೆನಾ? ಕರಿಯರ ಮೇಲೆ ನಂಬಿಕೆ ಇಸುದಂರ್ದ ಹೆಚ್ಚ್‌ನ ಮೂರ್ಖ ಕೆಲ್ಸ ಬೇರೆ ಉಟ್ಟಾ?

ಬೋಪು ದಿವಾನನ ನೆಂಟ್ರ್‌ಗಳೇ ಕಲ್ಯಾಣಸ್ವಾಮಿನ ಸೈನ್ಯ ಸೇರಿದ್ದೊ. ಈತಸ ಒಬ್ಬ ವಂಚಕ ಅಲ್ಲಂತ ಆಧಾರ ಎಲ್ಲಿಟು? ಹೆಂಗು ದ್ರೋಹ ಮಾಡಿ ಅಭ್ಯಾಸ ಇರ್ವ ಮೊನ್ಸ... ಆ ಲಕ್ಷ್ಮೀನಾರಾಯಣ ದಿವಾನನು ಬಂಡಾಯದ ಸುದ್ದಿನ ಸರಿಯಾದ ಸಮಯಲಿ ತಿಳ್ಸಿತೇ ಇಲ್ಲೆ, ಮೂರ್ಖ...

ವರದಿ. ಎಷ್ಟ್ ಬರ್ದರುಸ ಮುಗಿಯದ ವರದಿ, ಕಲ್ಯಾಣಸ್ವಾಮಿ ಮಂಗ್ಳೂರು ಕಡೆಗೆ ದಂಡೆತ್ತಿ ಹೋಗಿ ಒಳ್ಳೆ ಕೆಲ್ಸ ಮಾಡ್ತ್ ಒಂದ್ ರೀತಿಲಿ. ಮಂಗ್ಳೂರಿಗೆ ಸೇನೆ ಕಳ್ಸುವ ಜವಬ್ದಾರಿ ನಂದಲ್ಲ. ತಲಚೇರಿನವು ಈ ಕೆಲ್ಸ ಮಾಡೊಕು. ಸಮುದ್ರ ಮಾರ್ಗಲಿ ಬಂದ್ "ದ್ರೋಹಿ"ಗಳ ದಂಡಸೊಕು. ನಾ ಮದರಾಸಿಗೆ ವಿಷಯ ತಿಳ್ಸಿರೆ ಆತ್.

ಆದರೆ ಲೀಹಾರ್ಡಿಗೆ ಗೊತ್ತಿತ್ತ್. ಒಂದೇ ಒಂದು ಕಿಡಿ ಸಾಕ್.

ದರ್ಗ್ಗ ರಾಶಿನ ಹಂಗೆ ಕೊಡಗ್ ಉರ್ದ್ ಹೋದರ್ಲಿ ಸಂಶಯ ಇತ್ಲೆ. ಅಲ್ಲಿ ಅಶಾಂತಿನ ದ್ರವ ಕೊತ ಕೊತ ಕುದಿತ್ತಿತ್ತ್. ಸೋಲ್ದು, ಸಾವ್ ಅನಿವಾರ್ಯ ಆಗಿತ್ತ್ ಆಳುವವ್ಕೆ.

ವೀರರಾಜೇಂದ್ರ ಕಾಶಿಂದ ಬಂದುಟುಗಡ. ಲೀಹಾರ್ಡಿಗೆ ಗೊತ್ತಿತ್ಲೆನಾ ಅದ್ ಸುಳ್ಳುಂತ? ಆದರೆ ಜನ ನಂಬಿದ್ದೊ. ಎಂತ ವಿವರಣೆಸ ಆ ನಂಬಿಕೆನಾ ಅಳಿಸಿಕೆ ಆತ್ಲೆ. ಆ ರಾಜ ತಿರ್ಗಿ ಬರೊಕುಂತ ಬಾರಿ ಆಸೆನ ರೆಕ್ಕೆ ಮೇಲೆ ಹಾರಿ, ಅವ ಈಗಲೇ ಬಂದುಟುಂತ ವದಂತಿ ಕೊಡಗ್‌ನ ನಾಕ್ ಮೂಲೆಗೆ ಹರ್ಡಿತ್ತ್.

ಮಂಗ್ಳೂರು ಗೆದ್ದ ಮೇಲೆ ಕಲ್ಯಾಣಸ್ವಾಮಿನ ದಂಡ್ ಮಡಿಕೇರಿ ಕೋಟೆನ ಮೇಲೇರಿ ಬಂದವೆಂತ ಲೀಹಾರ್ಡಿಗೆ ಖಂಡಿತ ಗೊತ್ತಿತ್ತ್.

ದಿನಾ ಉಣ್ಣುವ ಅನ್ನ, ಕುಡಿವ ನೀರ್, ಉಸಿರಾಡ್ವ ಗಾಳಿ ಎಲ್ಲಸ ವಿಷ ಆದಂಗೆ ಅವಂಗೆ ಆಗ್ತಿತ್ತ್. ಹೆದ್ರಿಕೆ ಆಗ್ತಿತ್ತ್.

...ತಂಬಾಕ್‌ನ ಕೊಳವೆನ ಅವ ಬಾಯಿಗಿಸಿ ಬೆಂಕಿ ಹಚ್ಚಿಕಣ್ತ್. ಹೊಗೆಬುಟ್ಟು ದೊಡ್ಡದಾಗಿ ಸೇಂಕಿಕಣ್ತ್.

...ಮತ್ತೆ ನಾಯಿ ಬೊಗುಳ್ತು.

ಕಚೇರಿ ಕೋಂಬ್ರೆಲಿ ಕುದ್ದ ಲೀಹಾರ್ಡಿ ಅತ್ತಿತ್ತ ಹೊರಳಾಡ್ತ್. ಒಣ್‌ಗಿದ್ದ ಕುತ್ತಿಗೆಂದ ಸ್ವರ ಹೊರ್ಟತ್.

"ಬೋಪು ದಿವಾನ ಬಾತಾ?"

ಕಾವಲ್‌ನ ಸಿಪಾಯಿ ಹೇಳ್ತ್, ಇಲ್ಲೆ ಸರ್ಕಾರ್

ಹೊತ್ತು ಗೊತ್ತು ಒಂದೂ ಇಲ್ಲೆ ಈ ಜನಕ್ಕೆ. ಅದ್ ಜೋರಾಗಿ ಹೇಳ್ದ ಮಾತ್. ಆದರೆ ಒಳಗೆ ಸಂಶಯ ಹಂಗೆ ಇತ್ತ್.

"ಇಷ್ಟೊತ್ತಿಗೆ ಅವಂಸ ಬಂಡಾಯಗಾರರೊಟ್ಟಿಗೆ ಸೇರಿಟ್ಟೊ ಹೆಂಗೆ"

ಆದರೆ ನಿಜಸ್ಥಿತಿ ಬೇರೆನೆ ಇತ್ತ್. ಜನರ ದೃಷ್ಟಿಲಿ ಬೋಪು ಪರಕೀಯರ ಮಡೆಗೆ ಆಸೆಪಡ್ವ ಪ್ರಾಣಿಯಾಗಿತ್ತ್. ಎದ್ರು ಕಾಂಬಕಾನ ನಮಸ್ಕಾರ. ಒಂದು ಹೆಜ್ಜೆ ದಾಟಿದ ಕೂಡ್ಲೆ ಹಿಡಿಶಾಪ ಹಾಕ್ತಿದ್ದೊ. ದಿವಾನಗಿರಿನ ಅಧಿಕಾರದ ಆಧಾರಲಿ ಅವ ಪ್ರತಿಷ್ಠಿತ ಮೊನ್ಸ ಆಗಿತ್ತ್. ಆದರೆ ಮನೆಲಿ ಹೆಣ್ಣ್ ಮಕ್ಕಳಿಗೆ ಗೊತ್ತಿತ್ತ್ ನಾವ್ ವಿಶ್ವಾಸ ಘಾತುಕ ಸಂಸಾರದವುಂತ. ಬ್ರಿಟಿಷರ್ ಕೊಡುವ ಅನ್ನನೆ ವರಪ್ರಸಾದಂತ ಹೇಳವು ಇತ್ಲೆ ಅಂತಲ್ಲ. ಆದರೆ ಜನರ ಪ್ರೀತಿ ಅವರ ಪಾಲಿಗೆ ಇತ್ಲೆ. ಅಂಥವರ ಗುಂಪುಲಿ ಬೋಪುನೆ ದೊಡ್ಡ ಜನ.

ಸ್ವಾತಂತ್ರ್ಯನ ಪರಕೀಯವ್ಕೆ ದೂರ್ದ ದ್ರೋಹಿಗಳ ಪಾಲಿಗೆ ಕೊಡ್ಗ್ ಉಸುಬುಕಾಡ್‌ಂತ ಗೊತ್ತಾದ ಕೂಡ್ಲೆ ಬೋಪು ಹಂಞ ಅಲ್ಲಾಡ್ತ್. ಅವನ ಕನ್ಸ್‌ಲಿಸ ಬರ್ತಿತ್ತ್ ಕಲ್ಯಾಣಸ್ವಾಮಿನ ದಂಡ್. ಯಾರೋ ಕಳ್ಳರ್ ಅವರ ಚೂರು

ಚೂರ್ ಮಾಡ್ದು ಎಷ್ಟೆಷ್ಟು ಕೆಲ್ಸ? ಹಿಂಗೆ ನೆನ್ಸಿದ ಭಾವನೆ ಈಗ ಮಾಯ ಆಗಿತ್ತ್. ಯಾರೋ ಕಪಟಿ ಕಲ್ಯಾಣಸ್ವಾಮಿ ನೀವು ಹೆದ್ರ್‌ಬೇಡಿಂತ ಒಡೆಯಂಗೆ ಹೇಳ್ತಿದ್ದೊ. ಆದರೆ ಕಲ್ಯಾಣಪ್ಪನ ಗುಂಪ್ ಒಂದೇ ಸಮ ಗೆದ್ದ್ ಮಂಗ್ಳೂರು ಗೆದ್ದತ್‌ಂತ ಮಾತ್ರ ಕೇಳಿಕಾನ ಉಸಿರಾಡ್ದೆ ಕಷ್ಟ ಆತ್ ಅವಂಗೆ.

ಯಾರ್ ಕಲ್ಯಾಣಸ್ವಾಮಿ? ಯಾವ ಜನ?

ಗೂಢಚಾರಂಗ ಸುದ್ದಿ ತಂದೊ. ಹೆದ್ರಿಕೆ ಹುಟ್ಸುವ ವಿವರ ಹೇಳ್ದೊ. ನಂಜಯ್ಯ, ಪುಟ್ಟಬಸವ, ಕುಡಿಯ ಸೋದರರ ತಂಡನೆ ಅದ್‌ಂತ ಸರ್ಯಾಗಿ ಗೊತ್ತಾತ್. ಬೋಪುಗೆ ಗೊತ್ತಿತ್ತ್. ಅವು ಪುಂಡರ್ ಅಲ್ಲಂತ. ಆ ದಂಡ್ ಗೆಲ್ಲುದೇ ಆದರೆ ಬೋಪುನ ಗತಿ? ಅದ್‌ಸ ಅವಂಗೆ ಗೊತ್ತಿತ್ತ್. ದೊಡ್ಡ ಮರದ ಗಟ್ಟಿಗೆಲ್ಲ್, ಕುತ್ತಿಗೆಗೆ ಹಾಕಿಕೆ ಹುರಿಹಗ್ಗ... ಇಂಗ್ಲಿಷರ ಆಳ್ವಿಕೆ ಮಾತ್ರ ಅವಂಗೆ ಇದ್ದ ರಕ್ಷಣೆ. ಆದರೆ ಇಂಗ್ಲಿಷ್‌ನನೆ ಅವನ ನಂಬಿತ್ಲೆ. ತನ್ನ ವಿಚಾರಲಿ ಲೀಹಾರ್ಡಿ ತೋರ್ಸ್ತಿದ್ದ ಅನಾದಾರ ಬೋಪುಗೆ ಇನ್ನ್ ಹೆಚ್ಚ್ ಹೆದ್ರಿಕೆ ಆಗ್ತಿತ್ತ್.

.....ಮೊತ್ತೊಮ್ಮೆ ನಾಯಿ ಬೊಗಳ್ತ್.

ಲೀಹಾರ್ಡಿ ಕರ್ಕಶ ಸ್ವರಲಿ ಕಿರ್ಚಿತ್. ಬೋಪು ದಿವಾನ ಬಾತಾ? ಬರ್ತಾ ಒಳ ಸರ್ಕಾರ್. ಕಾವಲ್‌ನ ಸಿಪಾಯಿ ಹೇಳ್ತ್.

ನಮಸ್ಕಾರ, ಕೈಕುಲ್ಕಿ, ಹಿಂದೆದೆಲ್ಲಾ ಮಾತಾದ ಮೇಲೆ ಕುದ್ದ್‌ಕಂಬಕೆ ಹೇಳ್ತ್. ಹಂಞ ಹೊತ್ತಾಗಿ ಲೀಹಾರ್ಡಿ ಕೇಳ್ತ್.

"ಬಾದು ಅಪರೂಪ ಆಗಿಟಲಾ ದಿವಾನ?"

ಬೋಪು ಸುಳ್ಳು ಹೇಳ್ತ್.

"ಬೇಹುಗಾರರ್ ಬಂದಿದ್ದೊ. ಮಾತಾಡಿ ಮುಗ್ಸಿಕೆ ಹೊತ್ತಾತ್."

ಭಾರಿ ಸುದ್ದಿ ಇತ್ಲೆ. ನಾನೆ ಮಾತಾಡಿ ಕಳ್ಸಿ ಕೊಟ್ಟೆ.

ಬೇಹುಗಾರರ? ಎಲ್ಯೊಳ? ಯಾಕೆ ಕರ್ಕಂಡ್ ಬಾತಲೆ?

ಮನ್ಸೊಳಗೆ ಏನಿತ್ತ್‌ಂತ ತಿಳ್ಕಣಿಕೆ ಬೋಪುನ ನುಂಗುವಂಗೆ ನೋಡಿಕಂಡೆ ಇತ್ತ್ ಲೀಹಾರ್ಡಿ. ಉರ್ದ್ ಮುಗ್ದ ತಂಬಾಕ್‌ನ ಕೊಳವೆನ ಮೇಜ್‌ನ ಮೇಲೆ ಇಸಿ ಲೀಹಾರ್ಡಿ ಹೇಳ್ತ್.

ಮಂಗಳೂರ್‌ನ ಸುದ್ದಿ ಗೊತ್ತಾತಲ?

ಗೊತ್ತಾತ್ ಖಾವಂದರೇ

ಏನ್ ತೀರ್ಮಾನ ಮಾಡ್ಯೊಳರಿ?

ನಮ್ಮ ಕೊಡಗ್‌ಲಿ ಏನ್ ಆಕಿಲೆ!

ಕೊನೆವರೆಗೆಸ ನಾವು ತಯಾರಾದು ಬೇಡಾಂತ ಸಂಚು ಮಾಡ್ತ ಉಟ್ಟುಂತ ಲೀಹಾರ್ಡಿ ನೆನ್ಸಿತ್.

ಎಡೆನಾಡು ಗಡಿನಾಡುಗಳ ಜನ ಕಲ್ಯಾಣಸ್ವಾಮಿನ ಸೇರ್ದ್ ನಿಜಾನ?

"ಹೌದುಗಡ"

"ಬಿಸ್ಲಿಘಟ್ಟದ ಕನ್ನಡಿಗರ್ ಸಾ ಸೇರ್‍ರ್ಯೊಳಗಡ?"

"ಹೌದು"

ನಿಮ್ಮ ನೆಂಟ್ರ್‌ಗಸ ವಿದ್ರೋಹಿಗಳ ಕೂಡಿಕಂಡೊಳಗಡ?

ನಾ ಏನ್ ಹೇಳ್ದು ಖಾವಂದರೆ? ಅದರ್‌ನ್ನೆಲ್ಲ ಹೇಳಕುಂತನೆ ಬಂದೆ. ನೀವುಗೆ ಎಲ್ಲಸ ಗೊತ್ತುಟು.

ನಾವುಗೆ ಬೇಕಾದ ಸಲಹೆ ಕೊಡ್ದು ನಿಮ್ಮ ಜವಬ್ದಾರಿ.

"ಒಪ್ಪಿನೆ"

"ಹೇಳೀ ಅಂದರೆ!"

"ತಾವು ಚಿಂತೆ ಇಲ್ಲದಿರುವಂಗೆ.."

"ಲೀಹಾರ್ಡಿಗೆ ಸಿಟ್ಟ್ ಉಕ್ಕಿ ಬಾತ್"

"ಸಾಕ್ ಸುಮ್ಮನಿರಿ. ವೈರಿ ಮನೆ ಬಾಗ್‌ಲಿಗೆ ಬರುವರ್ಗ್ಗ ಸುಮ್ಮನಿರೊಕ?"

"ಮಡೆನುಂಗಿ ಬೋಪು ಹೇಳ್ತ್"

"ಅಂಬೆರ್ಪು ಮಾಡಿಕೆ ಆಗದ್ ಅಂತ ನನ್ನ ಅಭಿಪ್ರಾಯ. ಪುನಃ ಅದೇ ಮಾತ್! ಘಟ್ಟದ ಅಡಿಗೆ ನೀವುಸ ಹೋಗಿ ನಿಮ್ಮ ಗೆಳೆಯರ ಯಾಕೆ ಸೇರಿಕಣಿಕೆ ಆಗದ್? ಎದುರಿಗೆ ಲಾಯ್ಕ ಮಾತಾಡಿಕಂಡ್ ಒಳಂಗಿದೊಳಗೆ ಶತ್ರುಗಳ ಪಕ್ಷ ಸೇರ್ದಕ್ಕಿಂತ.."

ಬೋಪು ಮಧ್ಯ ಬಾಯಿ ಹಾಕಿ ಹೇಳ್ತ್ : "ಖಾವಂದರೆ! ಅಂಥ ಆರೋಪ ಮಾಡಿಕಾಗದ್. ನಾನ್ ಕುಂಪಣಿ ಸರಕಾರದ ಸೇವಕ. ನನ್ನ ನಂಬಿ!"

ಇಲ್ಲೆ, ನೀವು ವಂಚಿಸ್ತ ಒಳರಿ!"

ಬೋಪುನ ಮೋರೆ ಕಪ್ಪಾತ್. ಕಣ್ಣ್‌ಲಿ ನೀರ್ ಬಾತ್, ಕೆನ್ನೆಗೆ ಕಣ್ಣೀರ್ ಇಳ್ತ್.

ನಾನ್ ಕದ್ದತ್ಲೆಂತ ಮರ್ಟ್‌ಕಂಡ್ ನಂಬುಸುವ ಕೂಸುನ ಹಂಗೆ ಮರ್ಟ್‌ಕಂಡ್ ಬೋಪು ಹೇಳ್ತ್: "ಖಾವಂದರೆ! ಇಂಥ ಆರೋಪನ ಕೇಳ್ದಕ್ಕಿಂತ ಸಾಯೊದೆ

ಆದು. ಉಂಡ ಮನೆಗೆ ನಾ ದ್ರೋಹ ಮಾಡುವೆನಾ? ನಾ ಸ್ವಾಮಿನಿಷ್ಠಂತ ನೀವುಗೆ ತೋರ್ಸ್ನೆ, ಇರಿ.

ಮರ್ಡುವ ಆ ಮೊನ್ಸನ ನೋಡಿ ಲೀಹಾರ್ಡಿಗೆ ತಮಾಷೆಂತ ಆತ್. ಅವನ ವಿಷಯಲಿ ತಿರಸ್ಕಾರ ಮೂಡ್ತ್. ಲೀಹಾರ್ಡಿ ಹೇಳ್ತ್.

ಹೆಂಗಸ್ರ ಹಂಗೆ ಮರ್ಪರೆ ಏನ್ ಪ್ರಯೋಜನ? ಧೈರ್ಯ ಇದ್ದರೆ ಯುದ್ಧಭೂಮಿಗೆ ಇಳ್ದ್ ದ್ರೋಹಿಗಳ ಹುಟ್ಟಡಗಿಸಿ!"

ಕಣ್ಣುಜ್ಜಿಕಂಡ್ ಬೋಪು ಹೇಳ್ತ್ : "ಆದು ಖಾವಂದರೆ, ಹೋರಾಟಲಿ ಒಂದ ಅವು ಸಾಯಕು; ಇಲ್ಲರೆ ನಾನು ಸಾಯಕು".

ಮತ್ತೊಮ್ಮೆ ಕೊಳವೆಗೆ ತಂಬಾಕು ಹಾಕಿ ಬೆಂಕಿ ಮುಟ್ಟಿಸಿ ಲೀಹಾರ್ಡಿ ಹೇಳ್ತ್. ಅವರ ಇಸ್ತಿಹಾರು ನೋಡಿದರಿಯ?

"ನೋಡಿದೆ"

ಅದಿಕ್ಕೆ ಬದಲಾಗಿ ನಾವೊಂದು ಘೋಷಣೆ ಹೊರ್ಡಸಕು"

"ಆದು"

"ಕಪಟ ಕಲ್ಯಾಣಸ್ವಾಮಿನ ಹಿಡ್ದ್ ಕೊಟ್ಟವಂಗೆ ಹತ್ತ್ ಸಾವಿರ ರೂಪಾಯಿ ಬಹುಮಾನ"

"ಹೂಂ"

ಇನ್ನೊಬ್ಬನ ಹೆಸ್ರೆಂತ? ನಂಜಯ್ಯ ಅಂತನಾ? ಅವನ ಹಿಡ್ದ್ ಕೊಟ್ಟವ್ಕೆ ಐದ್ ಸಾವಿರ, ಸುಳ್ಯದ ಗೌಡನ ಹಿಡ್ದವ್ಕೆಸ ಐದ್ ಸಾವಿರ. ಆದಲಾ?

"ಸರಿ ಖಾವಂದರೆ"

ಸರಕಾರಕ್ಕೆ ಎದ್ರಾಗಿ ಬಂಡಾಯಗಾರರ ಸೇರಿಕೆ ರಾಜದ್ರೋಹ. ರಾಜದ್ರೋಹಕ್ಕೆ ಶಿಕ್ಷೆ ಮರಣದಂಡನೆ.

"ನ್ಯಾಯ"

ಹಂಗಾರೆ ಸಿದ್ಧ ಆಗಿ. ನಾಳೆ ಹೊತ್ತಾರೆನೆ ನಮ್ಮ ದಂಡ್ ಹೊರ್ಡಕು. ತಲಚೇರಿಂದ ಸೈನ್ಯ ಬಂದ್ ಮಂಗ್ಳೂರ್‌ನ ತಕಣಿಕೆ ಮುಂದೆ ಕೊಡಗ್‌ನ ಭದ್ರ ಮಾಡಿ, ಅಮರಸುಳ್ಯಂದ ಪುಂಡರ ಓಡ್ಸಿ, ನಾವೆ ಮಂಗ್ಳೂರು ತಲ್ಪಕು. ರಾಜದ್ರೋಹಿಗಳ ಹಿಡ್ದ್ ಸುಟ್ಟ್ ಹಾಕೊಕು.

ಹೌದುಂತ ತಲೆ ಅಲ್ಲಾಡ್ಸಿತ್ ಬೋಪು ದಿವಾನ.

ಲೀಹಾರ್ಡಿ ಜೋರು ಮಾಡಿ ಕೇಳ್ತ್: "ಸುಮ್ಮನೊಳರಿಯಲ? ಅಷ್ಟ್ ಶಕ್ತಿ

ನಮ್ಮಲ್ಲಿಲ್ಲೆನಾ?

ಹಂಗೆ ಅಲ್ಲ ಖಾವಂದರೇ"

"ತೂಕಡ್ಸಿಕಂಡ್ ಕುದ್ರಬೇಡಿ. ಏಳಿ!"

ಲೀಹಾರ್ಡಿ ಹೆದ್ರಿಸಿ ಮಾತಾಡ್ತ್. 'ನಿಮ್ಮ ವಿಷಯಲಿ ನಂಗೆ ಅಸಮಾಧಾನ ಆಗಿಟು. ಅದರ ನೀವೆ ಹೋಗಲಾಡ್ಸಕು. ನಾವುಗೇನಾದ್ರ ತೊಂದ್ರೆ ಆದರೆ ನಿಮ್ಮ ನೋಡಿಕಣೆ. ಹುಷಾರ್!'

ಬೋಪುನ ಪಾದಗ ಅತ್ತಿತ್ತ ಮಿಸ್‌ಕಾಡ್ತ್. ದೇಹದ ತೂಕನ ಒಂದು ಪುಡೆಂದ ಇನ್ನೊಂದು ಪುಡೆಗೆ ತಿರ್ಗಿಸಿತ್.

ಹೊರ್ಡಿ ಇನ್ನ್! ರಾತ್ರಿ ಇಲ್ಲಿಗೆ ಬಂದ್ ಮಲ್ಗಿ!

ಬೋಪು ದಿವಾನ ತಲೆ ತಗ್ಗಿ ವಂದಿಸಿ ಲೀಹಾರ್ಡಿನ ಕೋಣೆಂದ ಹೋತ್. ಒಳಗೆ ಬಾಕನ ಇದ್ದ ಖುಷಿ ಈಗ ಇತ್ಲೆ. ಅಷ್ಟು ಮಾತಾಡ್ದ ಮೇಲೆ ಲೀಹಾರ್ಡಿಗೆ ಹಂಞ ಸಮಾಧಾನ ಆತ್. ಮುಂದೆ ಮಾಡುವಂತದರ ಯೋಚನೆ ಮಾಡಿಕೆ ಸುರು ಮಾಡ್ತ್.

"ದಿವಾನನ ಚಲನವಲನಗಳ ನೋಡಿಕಂಡೆ ಇರೊಕು!"

ಅದ್ ಪೂರಾ ನಂಬುವ ಗೂಢಚಾರಂಗೆ ಆಜ್ಞೆ.

"ಮಡಿಕೇರಿ ಕೋಟೆನ ಕಾವಲಿಗೆ ಮೂವತ್ತಾರರ ರೆಜಿಮೆಂಟನ್ನು ನೇಮಿಸಿ!"

ಆ ರಕ್ಷಣೆಗೆ ಆಂಗ್ಲ ರೆಜಿಮೆಂಟೆ ಸರಿ. ಕೊಡಗ್‌ನ ಸಿಪಾಯಿಗಳ ನಂಬಿಕೆ ಸಾಧ್ಯ ಇತ್ಲೆ.

ಗಡಿಬಿಡಿಲಿ ಈ ಸಿದ್ಧತೆಸ ನಡ್ತ್.

..ಇರ್ಲ್ ಆತ್. ಅರಮನೆಲಿ ಕಂದೀಲ್ ಹೊತ್ತಿಸಿದೊ. ಕಂಡ್ ಕಾಣದಂಗೆ ಬೀಸ್ತಿದ್ದ ಗಾಳಿನೊಟ್ಟಿಗೆ ತಂಬಾಕ್‌ನ ಕೊಳವೆನ ಮತ್ತೆ ಚೀಪಿಕಂಡ್, ಅವನ ನಾಯಿನೊಟ್ಟಿಗೆ ಮತ್ತೆ ಕೋಟೆಯೊಳಗೆ ನಡೆದಾಡ್ತ್ ಲೀಹಾರ್ಡಿ.

ನಾಯಿ ಗಕ್ಕನೆ ನಿತ್ತ್ ಕಾಡ್ ನೋಡಿ ಬೊಗಳ್ತ್. ಡಬಡಬಂತ ಹೊಡ್ಕಂನ್ತ್ ಲೀಹಾರ್ಡಿನ ಹೃದಯ. ಲೀಹಾರ್ಡಿ ಮೈ ನಡ್ಗಿಕಂಡ್, ತಂಗಾಳಿನ ಅದರ ಪಾಡಿಗೆ ಬುಟ್ಟು ಗಡಿಬಿಡಿಲಿ ಅರಮನೆಯೊಳಗೆ ಹೋತ್.

## ೨೩

ಅಂಬಿಗರ್ ದೋಣಿಗಳ ಬುಟ್ಟ್‌ಕಂಡ್ ರಾಜ್ಯಪಾಲ ಕಲ್ಯಾಣಸ್ವಾಮಿನನ್ನೂ ಅವನೊಟ್ಟಿಗೆ ಇದ್ದವರ್ರೂ ಬಂದರ್‌ನಾಚೆಗೆ ನೊಡುಗುಡ್ಡೆಗೆ ಕರ್ಕಂಡ್ ಹೋದೋ. ಅಲ್ಲಿ ಮೈಚಾಚಿ ಮಲ್ಗಿಂದಗೆ ಇದ್ದ ನೀರ್‌ನ ರಾಶಿ. ಹುಣ್ಣಿಮೆ ಕತ್ತಲೆಲಿ ಎಷ್ಟ್ ಲಾಯ್ಕ ಕಾಣಿತ್ತ್ ಸಮುದ್ರ. ದಂಡೆ ಮೇಲೆ ಅಲೆಗಳ್ದೇ ಅಕ್ಷಯ ಸೇನೆ. ಒಂದ್ ಪಡೆ ಸೋತಂಗೆ ಇನ್ನೊಂದು ಪಡೆ ಆ ಅರ್ಭಟನೊ! ಕೋಟಿ ಕುದ್ರೆಗಳ ಬಾಯಿಂದ ನೋರೆ ಸೀಳಿ ಬಂದ ಹಂಗೆ ಕಾಂಬೊದು. ಜುಳು ಜುಳು ಜುಳು...

ಪ್ರಕೃತಿ ಮಾತೆನ ಎದ್ರು ಕೂಸಾಗಿ ಕುದ್ದತ್ ಕಲ್ಯಾಣಸ್ವಾಮಿ ಅವನ ಕೂಟುಗಳು ಅಷ್ಟೆ, ಹೊಯ್ಗೆ ಮೇಲೆ ಆಟವಾಡ್ವ ಮಕ್ಕಳಂಗೆ.

ಮಾತಾಡ್ದು ಕೇಳ್ಸಕುಂತ, ಅಲೆಗಳಂದ ಜೋರು ಧ್ವನಿಲಿ ಕಲ್ಯಾಣಸ್ವಾಮಿ ಹೇಳ್ತ್.

"ರಾಮಗೌಡ್ರೆ ಹೇಳಿ, ಎಂತ ನೆನ್ಸ್‌ತಾ ಒಳರಿ?

"ಬಾಯಿ ಬಾರದವನ ಯಾಕೆ ಕೇಳ್ವೆ?" ರಾಮಗೌಡ ಹೇಳ್ತ್.

"ಕರಿಯಪ್ಪ ಹೇಳ್ತ್: "ಈ ಸಮುದ್ರದ ಮೇಲೆಂದಾಗಿ ಇಂಗ್ಲಿಷ್‌ನವು ಹೋಗ್ಯೊಳಲ ಅವು ತಲಚೇರಿ ತಲ್ಪಿರುವನಾ? "ಕಾಡ್‌ಲಿ ಓಡಾಡ್ದು ನಾವುಗೆಲ್ಲಾ ಎಷ್ಟು ಸುಲಭನೋ. ಹಂಗೆನೆ ಆ ಜನಕ್ಕೆ ನೀರು" ಬಂಗರಾಜ ಹೇಳ್ತ್.

ಕಲ್ಯಾಣಸ್ವಾಮಿ ಹೇಳ್ತ್: "ಅವೆಲ್ಲ ಎಷ್ಟೋ ಸಮುದ್ರ ದಾಟಿ ಇಲ್ಲಿಗೆ ಬಂದ ಜನಂಗ ಅದರ ಮರಿಬಡಿ.

"ಕಡಲುಕಳ್ಳರು" ರಾಮಗೌಡ ಹೇಳ್ತ್.

ನಂಜಯ್ಯ ವಿವರಿಸಿತ್.

"ಅವರ ದೇಶ ಒಂದು ಸಣ್ಣ ದ್ವೀಪ."

ಮೀಯಕೆಸ ಅವು ಸಮುದ್ರಕೆ ಇಳಿಯಕು!"

ಮಾತ್ ನಿಂತತ್. ತೆರೆಗಳ ನೋಡಿಕಂಡ್ ಕುದ್ದ್ ಹಂಞ ಹೊತ್ತಾದ ಮೇಲೆ ಕಲ್ಯಾಣಸ್ವಾಮಿ ಹೇಳ್ತ್.

"ವೈರಿಗಳಿಂದಸ ನಾವು ಪಾಠ ಕಲಿಯಕು. ಈ ಇಂಗ್ಲೀಷರ ಜೀವನ ಯಾರಿಗೆ ಮಾದರಿ ಆದ್ಲೆ ಹೇಳಿ? ಅವರಂತ ಹೃದಯ ಮಾತ್ರ ನಾವುಗೆ ಬೇಡ ಅಷ್ಟೆ!" ನಮ್ಮ ಜನರಿಗೆ ದೇಶ ಸಂಚಾರ ಮಾಡ್ದಿರ್ಲಿ, ಊರ್ ಬುಟ್ಟು ಹೊರಗೋದೆ ಕಮ್ಮಿ. ಆ ಇಂಗ್ಲೀಷ್‌ನವ್ಕೆ ವಿಶ್ವಸಂಚಾರ ಮಕ್ಕಳಾಟ ಇದ್ದ ಹಂಗೆ. ಸಂಸಾರನ

ಊರ್ಲಿ ಬುಟ್ಟು ಬಾಸೆಸ ಗೊತ್ತಿಲ್ಲದ ದೇಶಕ್ಕೆ ಬಾದುಂತ ಹೇಳ್ರೆ ಸಣ್ಣ ವಿಷಯನಾ? ಇಂತ ಸಾಹಸ ನಮ್ಮಲ್ಲು ಇರಕು. ಆದರೆ ಇನ್ನೊಬ್ಬರ ಮೆಟ್ಟಿ ಆಳುವಂತದ್ ಇರಿಕಾಗದ್!"

ತಲೆ ಆಡಿಸಿಕಂಡ್ ನಂಜಯ್ಯ ಹೇಳ್ತ್: "ಇತಿಹಾಸಲೇ ಇಲ್ಲೆನಾ? ಎಲ್ಲವು ನಮ್ಮ ನುಂಗಿಕೆ ಬಂದವೇ ಹೊರ್ತು ಉದ್ದಾರ ಮಾಡಿಕೆ ಅಲ್ಲ. ಹಿಂದೂಸ್ಥಾನದ ಜನಗಾದ ನಾವು ಯಾಗಾದ್ರ್ ಬೇರೆ ದೇಶದವರ ಆಕ್ರಮಿಸಿದ್ ಉಟ್ಟಾ?

'ಸುರು ಮಾಡ್ದ ವಿಚಾರನ ಬುಟ್ಟತ್ಲೆ ಕಲ್ಯಾಣಸ್ವಾಮಿ'

"ಈ ಪ್ರಪಂಚಲಿ ವಿಜ್ಞಾನ ಇಂದ್ ಮುಖ್ಯ, ಪಶ್ಚಿಮದ ಪುಡೆಯವು ಈ ವಿಸಯಲಿ ಉಸಾರೊಳೊ. ನಾವು ಇನ್ನ್ ಮುಂದುವರಿಯಕು. ಯುದ್ಧನನ್ನೇ ತಕಣಿ. ನಮ್ಮ ಹಳೆ ಪದ್ಧತಿನೊಟ್ಟಿಗೆ ಆದುನಿಕ ಜ್ಞಾನಸ ಬೇಕ್. ಅವರ ತಂತ್ರನಸ ಮೀರುವ ಶಕ್ತಿ ಬರೊಕು".

ಈ ಮಾತ್‌ಗೆ ಕಿವಿಗೊಟ್ಟುಕಂಡ್ ನಂಜಯ್ಯ ಹೇಳ್ತ್: "ಸಮುದ್ರಲಿ ಸಣ್ಣ ಮೀನ್‌ನ ದೊಡ್ಡ ತಿಮಿಂಗಿಲ ನುಂಗಿದೆ. ಕಾಡ್‌ಪ್ರಾಣಿಗಸ ಅಷ್ಟೆ. ಒಂದರ ಇನ್ನೊಂದು ತಿಂದದೆ. ಹಂಗಾರೆ ಮೊನ್ಸಂಗು ಪ್ರಾಣಿಗಳಿಗು ವ್ಯತ್ಯಾಸ ಎಲ್ಲಿಟ್ಟು?"

ರಾಮಗೌಡ ಮಾತ್ ಸೇರ್ಸಿತ್.

"ತಿಮಿಂಗಿಲ ನ್ಯಾಯ! ಸರಿ ಹೇಳ್ದರಿ ಸೋಮಯ್ಯನವೇ. ಪ್ರಾಣಿಗಳಿಗಿರ್ದು ಉಗುರು, ಹಲ್ಲ್, ಮೊನ್ಸರ ಕೈಲಿ ಕತ್ತಿ, ಕೋವಿ ಅಷ್ಟೆ ವ್ಯತ್ಯಾಸ."

ಆ ಮಾತಿಗೆ ತಲೆ ಆಡ್ಸಿಕಂಡ್ ಸೋಮಯ್ಯ ಹೇಳ್ತ್ : "ನಾವೆಲ್ಲ ರಾಕ್ಷಸ ಸಂತಾನನೆ ಇರೊಕು. ಒಬ್ಬರ ಕುತ್ತಿಗೆನ ಇನ್ನೊಬ್ಬ ಕೊಯ್ಯೊದು ನಮ್ಮ ರಕ್ತಲಿಯೆ ಉಟ್ಟು!"

ರಾಮಗೌಡ ಪೂರ್ತಿ ನಿರಾಶೆಲಿ ಇತ್ಲೆ.

"ನಂಗೇನೋ ಒಂದು ನಂಬಿಕೆ ಉಟ್ಟು. ಒಂದಲ್ಲ ಒಂದು ದಿನ ಈ ಭೂಮಿಯ ಮೇಲೆ ಯುದ್ಧ ಮಾಡ್ವ ಅಗತ್ಯನೇ ಇರಿಕಿಲಲೆಂತ. ಅದ್ ಪ್ರತಿಯೊಬ್ಬಸ ಅವನ ನೆಲಲಿ ಅವನೆ ಬಿತ್ತಿ ಬೆಳ್ಸಿ ತಿಂಬ ಸುಖ ರಾಜ್ಯ. ಆ ರಾಜ್ಯಲಿ ನರಬೇಟೆಗೆ ಅವಕಾಶ ಇತ್ಲೆ. ಏನಿದ್ದರುಸ ಕಾಡ್‌ಪ್ರಾಣಿಗಳ ಮೇಲೆ ಯುದ್ಧ ಮಾಡಿ ಮೊನ್ಸ ತೋಳ್‌ನ ತೀಟೆ ತೀರ್ಸಕು.

"ಕವಿ ರಾಮಗೌಡರ ಕನಸುಂತ ಹೇಳಿ"! ನಂಜಯ್ಯ ಹೇಳ್ತ್. ಆ ಮಾತ್‌ಂದ ಎಲ್ಲವುಕೆ ನೆಗೆ ಬಾತ್. ತಾನು ನಗಾಡಿಕಂಡ್ ನಂಜಯ್ಯ ಹೇಳ್ತ್.

ಕನ್ಸ್ ಕಾಂಬೊದು ಖಂಡಿತ ತಪ್ಪಲ್ಲ. ವಾಸ್ತವಲಿ ಪ್ರತಿ ಮೊನ್ನನ ನಾಳೆನ ಕನ್ಸ್‌ನ ಕಾಣೊಕು. ಹಂಗೆನೆ ಆ ಕನ್‌ಸ್‌ನ ಕಾರ್ಯ ಮಾಡಿಕೆ ಅವಂಗೆ ಸಾಮರ್ಥ್ಯಸ ಇರಕು. ದಂಡ್ ಹೊರ್ಡಿಕೆ ಮುಂದೆ ನಮ್ಮ ಹಳ್ಳಿಲಿ ರಾಮಗೌಡರು ಅಂಥ ಕನಸ್ ಕಂಡದ್ ನೀವುಗೆಲ್ಲ ನೆಂಪಿರ್ದು...

ಅವ್ಕೆಲ್ಲಾ ನೆಂಪಿತ್ತ್. ನಿಜವಾಗಿ ಆಗಿತ್ತ್ ಆ ಕನ್ಸ್. ಮುಂದೆನ ಹುಣ್ಣಿಮೆ ರಾತ್ರಿಲಿ ಮಂಗ್ಳೂರ್‌ನ ಸಮುದ್ರ ದಂಡೆನ ಮೇಲೆ ಇರೊಕುಂತ ಹೇಳಿತ್ತ್ ರಾಮಗೌಡ. ಆ ಆಸೆ ಈಗ ಈಡೇರ್ತ್. ಇಂಗ್ಲೀಷರ್ನೆಲ್ಲ ಸಮುದ್ರಕ್ಕೆ ಬಿಸಾಡಕು ಅಂತ ಮಾತ್ ಬಾತ್ ಆಗ. ಬಿಸಾಡಿಕೆ ಆಗದಿದ್ರುಸ ಅವಾಗಿನೆ ಸಮುದ್ರಕೆ ಹಾರ್ದೊ.

ಕನ್ನಡ ಜಿಲ್ಲೆನ ವಿಮೋಚನೆ ಕಷ್ಟದ ಮಾತಾಗಿತ್ಲೆ. ಮಂಗ್ಳೂರ್‌ನ ಸ್ವಾತಂತ್ರ್ಯ ಪಡೆ ಸ್ವಾಧೀನ ಪಡ್ಸಿಕಂಡ ಹದಿಮೂರ್ನೆ ದಿನ ಅಂದ್. ಜನರ ಬೆಂಬಲ ಸಿಕ್ಕಿರೆ ಆಡಳಿತ ಮಾಡ್ದು ಸುಲಭದ ಕೆಲ್ಸಂತ ಕಲ್ಯಾಣಸ್ವಾಮಿ ಮನಗಂಡಿತ್ತ್.

ಈಗ ಮುಖ್ಯ ಆದದ್ದ್ ಮಂಗ್ಳೂರ್‌ನ ರಕ್ಷಣೆಗೆ ಏರ್ಪಾಡ್ ಮಾಡಿ, ಕೊಡಗ್‌ನ ಮೇಲೆ ದಂಡೆತ್ತಿ ಹೋಕು. ಅದರಂತು ತಡಮಾಡಿಕೆ ಇಲ್ಲೆ. ಒಮ್ಮೆ ಸೇನೆ ಮುಂದೆ ಹೋಕೆ ಸಾಧ್ಯ ಆಗಿದ್ದರೆ... ಯುದ್ಧ ಯೋಚನೆನ ಚರ್ಚೆ ಆಕನ ಬಂಗರಾಜ ಹೇಳ್ತಿತ್ತ್.

'ಸಾವಾಕಾಶ ಮಾಡಿಕಾಗದ್. ಮುಂಗಾರ್ ಮಳೆ ಬಾತ್‌ಂತ ಹೇಳ್ರೆ ತಲಚೇರಿಂದ್ಲೋ, ಸೂರತ್ತ್‌ಂದ್ಲೋ ಇಂಗ್ಲೀಷರ್ ಸಮುದ್ರ ಮಾರ್ಗಲಿ ಸೇನೆ ಕಳ್ಸುವ ಪ್ರಶ್ನೆ ಇಲ್ಲೆ. ಏನಿದ್ದರುಸ ಬೆಂಗ್ಳೂರು, ಮೈಸೂರುಗಳಂದ ಭೂ ಮಾರ್ಗಲಿ ಬರುವ ಸೇನೆನ ನಾವು ಎದುರ್ಸಕು. ಕೊಡಗ್‌ಲಿ ಕಾರ್ಯಾಚರಣೆ ಬೇಗ ಆತ್‌ಂತ ಹೇಳ್ರೆ ಅವು ಸೈನ್ಯನ ಎರ್ಡ್ ಭಾಗ ಮಾಡಕಾದೆ. ಆಗ ಅವರ ಸೋಲ್ಸುದು ಸುಲಭ.'

ಕಲ್ಯಾಣಸ್ವಾಮಿಗೆಸ ಅದ್ ಗೊತ್ತಿತ್ತ್, ದಂಡನಾಯಕರಿಗೆಸ ಅದೇ ಅಭಿಪ್ರಾಯವಿತ್ತ್.

ಮಂಗ್ಳೂರ್‌ನ ಮಳೆ ವಿಸ್ಯ ಗೊತ್ತಿದ್ದವು ಹೇಳ್ದೊ.

"ಇನ್ನ್ ಹಂಞನೆ ದಿನ, ಆಮೇಲೆ ತಕಣಿ ಜಡಿಮಳೆ!" ಕೊಡಗ್‌ಂದ ಒಳ್ಳೆ ಸುದ್ದಿ ಬಂದಿತ್ತ್ ಈ ಮಧ್ಯ. ಮಡಿಕೇರಿನ ಒಳಗೆ ಹಾಕಿ ಕೋಟೆಯೊಳಗೆ ಗದ್ದುಗೆ ಏರ್ದ ಆಂಗ್ಲರು ಕಲ್ಯಾಣಪ್ಪನ ದಂಡ್‌ನ ಗೆದ್ದ ವಿಚಾರ ಕೇಳಿ ನಡ್ಗಿಕೆ ಸುರು

ಮಾಡ್ದೊ. ಬೋಪು ದಿವಾನ ದೇಶದವರ ಎದ್ರು ತಲೆಯೆತ್ತಿ ತಿರುಗಾಡ್ದು ಕಷ್ಟ ಆಗಿತ್ತ್. ಮೈಸೂರು, ಮದ್ರಾಸುಗಳಿಗೆ, ಕಂಪೆನಿಯ ಹಿರಿಯ ಅಧಿಕಾರಿಗಳಿಗೆ ವರದಿ ಹೋದರುಸ ಸಹಾಯ ಮಾಡಿಕೆ ಅಲ್ಲಿಂದ ಸೈನ್ ಬಾವ ಲಕ್ಷಣ ಇತ್ಲೆ. ಕನ್ನಡ ಜಿಲ್ಲೆಂದ ಗುಡ್ಡೆ ಮೇಲೆ ಹತ್ತಿ ಧಾಳಿ ಮಾಡಿಕೆ ಸಮಯ ಹತ್ರ ಆಗ್ತಿತ್ತ್.

ಪರಿಸ್ಥಿತಿ ಹಿಂಗಿದ್ದರುಸ ಮಂಗಳೂರುನ ಬುಟ್ಟು ಹೋದು ಸುಲಭ ಆಗಿತ್ಲೆ. ಆ ಊರಿಗೆ ಆಕ್ರಮಣ ಮಾಡ್ದ್, ಸ್ವಾತಂತ್ರ್ಯ ಸೇನೆನ ಮುನ್ನಡೆಲಿ ಬಾರಿ ದೊಡ್ಡ ಸಾಧನೆ. ಸುರುನ ಕೂಸುನ ಬಟ್ಟ ಬಯಲ್ಲಿ ಇಸಿ ಗಿಡ್ಗಂಗೆ ಆಹಾರ ಮಾಡಿ ಹೋದು ಸಾಧ್ಯ ಇತ್ಲೆ. ಅದಿಕ್ಕೆ ಬೇಕಾಗಿಯೆ ಮುಂಗಾರ್ ಮಳೆ ಆ ವೀರರಿಗೆ ಅಗತ್ಯ ಇತ್ತ್.

....ಸಮುದ್ರ ಕಡೆಗೆ ಕಾಲು ನೀಂಡಿ ಹೊಯ್ಗೆ ರಾಶಿನ ಮೇಲೆ ಮಲ್ಗಿ ಚಂದ್ರನ ನೋಡ್ತಿತ್ತ್ ಕಲ್ಯಾಣಸ್ವಾಮಿ. ಆಕಾಶಲಿ ಕೋಟೆ ಸೊಡರ್‌ಗ ಹೊತ್ತಿಕಂಡಿತ್ತ್. ಬಿಳಿಗರಿಗಳ ನೊಡುಲಿ ಚಂದ್ರ ಒಮ್ಮೊಮ್ಮೆ ಮೋರೆ ಹಾಕ್ತಿತ್ತ್.

ಕರಿಯಪ್ಪ ನಡುಗುಡ್ಡೆನ ದಂಡೆ ಉದ್ದಕ್ಕೆ ನಡ್ಕಂಡ್ ತೆರೆಗಳಿಗೆ 'ಕೂ' ಅಂತ ಕೂಕ್ಳ್ ಹಾಕಿತ್ತ್.

ಸಣ್ಣದಿರಿಕಾನ ಕಲ್ತ ಯಾವ್ದೊ ಪದ್ಯದ ಸಾಲ್‌ನ ಗಟ್ಟಿಲಿ ಹೇಳ್ತ್.

ಆದರೆ ಸಮುದ್ರರಾಜ ಇದ್ಯಾವುದರ ಗಮನಿಸಿತ್ಲೆ. ಬಂಗರಾಜಸ ಕಲ್ಯಾಣಸ್ವಾಮಿನಂಗೆ ಮೈ ಚಾಚಿ ಅಂಗಾತ ಮಲ್ಗಿತ್ತ್. ಅವಂಗೆ ಈ ಸಮುದ್ರ ಅಷ್ಟೊಂದು ಅಪರಿಚಿತ ಆಗಿತ್ಲೆ. ಆದರುಸ ಪೊರ್ಲು ಮಾತ್ರ ಸಮುದ್ರದ್ದ್ ಬಾರಿ ಲಾಯ್ಕ ಇತ್ತ್.

ರಾಮಗೌಡ, ನಂಜಯ್ಯ, ಅಣ್ಣಿಗೌಡ, ಕುಡಿಯ ಸೋದರಂಗ ಎಲ್ಲವುಸ ಅಲ್ಲಲ್ಲಿ ಒಂದೊಂದು ವಿಷಯ ಮಾತಾಡ್ತಿದ್ದೊ. ಗಾಳಿಲಿ ಅವ್ರ ಮಾತ್‌ಗೆಲ್ಲ ಚೆಲ್ಲಾಪಿಲ್ಲಿಯಾಗಿತ್ತ್.

ಕಲ್ಯಾಣಸ್ವಾಮಿಗೆ ಒಂದೇ ಒಂದ್ ಆಸೆ ಚಿಗ್‌ರ್ತ್. ಅಷ್ಟೊತ್ತಿಗೆ ಮೆಲ್ಲೆ – ನೆಮ್ಮದಿ ಬೇಕಿತ್ತ್ ಆ ಜೀವಕ್ಕೆ. ಈ ಕ್ಷಣನೆ ಪುಷ್ಪಗಿರಿನ ಅಡಿಲಿರುವ ನನ್ನ ಮನೆಯ ಜಾಲ್‌ಲಿ ಇದ್ದರೆ ಎಷ್ಟ್ ಲಾಯ್ಕ ಇತ್ತ್?

ಗಿರಿಜಾ – ಗಿರಿಜಾ

ಹುಣ್ಣಿಮೆ ಬಾತ್‌ಂತ ಹೇಳ್ರೆ ತಾಯಿಗೆ ಆಸೆ – ಮಂಜ ಬಂದದೆಂತ...

ಗದ್ದೆ ಪುಣಿಲಿ ನಡ್ಕಂಡ್, ಕಾಡ್‌ಲಿ ಅಲ್ಕಂಡ್, ತೋಡುಲಿ ಆಟ ಆಡಿಕಂಡ್,

ಹಕ್ಕಿಗ ಮರ್ದುದರ ಕೇಳಿಕಂಡ್ ಇರಿಕೆ ಎಷ್ಟ್ ಲಾಯ್ಕ!

ಕಲ್ಯಾಣಸ್ವಾಮಿ ಮಗ್ಗ್‌ಲ್ ಬದಲಾಯಿಸಿತ್. ಇದೆಂತ ಕನ್ಸ್ ಕಾಣ್ತಾ ಒಳೆ ನಾನ್‌ಂತ ಹೇಳಿಕಂಡ್ ಅಲ್ಲಿಂದ ಎದ್ದ್ ಕುದ್ದತ್.

ಪೇಟೆಗೆ ಬೇಗ ಹೋಕುಂತ ಆತ್. ಅಲ್ಲಿ ಅವನ ಸೈನಿಕರ್ ಒಳ. ಸ್ವಾತಂತ್ರ್ಯದ ಬಾವುಟ ಇತ್ತ್. ಆ ಇರ್‌ಲ್ ಕಾವಲ್‌ನವರ ರಕ್ಷಣೆಲಿ ಊರ್ ಮಲ್ಗಿತ್ತ್.

ವೈರಿಗಳಿಗೆ ಸೋಲಾಗಿದ್ದರುಸ ಗಂಡಾಂತರ ತಪ್ಪಿತ್ಲೆ. ಹಿಂದೂಸ್ಥಾನಂದಲೇ ಅವರ ಹೊರಗೆ ಹಾಕಿದ ಮೇಲೆನೆ ನಾವುಗೆ ನೆಮ್ಮದಿ.

ಕಲ್ಯಾಣಸ್ವಾಮಿ ಖುಷಿಲಿ ಎದ್ದ್ ನಿಂತ್ ಹೇಳ್ತ್.

"ಗೌಡ್ರೆ, ನಂಜಯ್ಯನವೇ, ಬಂಗರಾಜರೇ ಇನ್ನ್ ಏಳಿ ಹೊರ್ಡುಮ" ಎಲ್ಲವು ಎದ್ದೊ. ನೊಡುಗುಡ್ಡೆನ ಪೂರ್ವಲಿ ದೋಣಿ ಸಿದ್ಧ ಇತ್ತ್. ಇವರ್ನೆಲ್ಲ ಹೊತ್ತ ದೋಣಿ ನಗರ ಕಡೆ ಹೋತ್.

## ೨೪

ಹುಣ್ಣಿಮೆ ಕಳ್ದ್ ಮಾರ್ನೆ ದಿನ, ನಡ್ಕಂಡ್ ಬಂದ್ ಬೊಚ್ಚಿದ ಒಬ್ಬ ಹೈದ ಸೇಂಕಿಕಂಡ್ ಮಂಗ್ಳೂರು ತಲ್ಪಿತ್.

ಕಂಕನಾಡಿ ಹತ್ರ ಕಲ್ಯಾಣಸ್ವಾಮಿನ ಸೈನಿಕರ್ ಅವನ ತಡ್ದ್ ಯಾರ್‌ಂತ ಕೇಳ್ದೊ? ಉತ್ತರನ ಅಗತ್ಯ ಇತ್ಲೆ. ಬೆಳ್ಳಾರೆಂದ ಕೊಡಗ್‌ಗೆ ಹೋದ ಇಬ್ಬರ್ ಧೂತರ್ಲಿ ಒಬ್ಬ ಆಗಿತ್ತ್ ಅವ. ಸೇಂಕಿಕಂಡ್ ಇದ್ದ ಆ ಯೋಧ ಹೇಳ್ತ್: "ಸ್ವಾಮಿಯವರತ್ರ ಕರ್ಕಂಡ್ ಹೋಗಿ ರಾಜ್ಯಪಾಲರತ್ರ ಕರ್ಕೊಂಡ್ ಹೋಗಿ ಈಗಲೇ ಬೇಗ..!"

ಅದೆಂತ ವಾರ್ತೆ‌ಂತ ತಿಳ್ಕಣಿಕೆ ಸೈನಿಕರಿಗೆಸ ಅಂಬೆರ್ಪು ಇತ್ತ್. ಆದರೆ ವರದಿ ತಲ್ಪಕಾದ್ ಪ್ರಮುಖರಿಗೆ. ಹಂಗೆ ವಿಷ್ಯ ಸಿಗುವರೆಗೆ ಸುಮ್ಮನಿರಕಾಯ್ತ್.

ರಾಜ್ಯಪಾಲರ ಶಿಬಿರಲಿ ಧೂತರ ಕುದುರೆನ ನೀರ್ ಮಡ್ಡಿ ಕೊಡಿಕೆ ಸೈನಿಕರ್ ಕರ್ಕಂಡ್ ಹೋದೋ. ಕುದುರೆ ಸವಾರ ಮಾತ್ರ ಅಂತ ಸತ್ಕಾರ ತಕಣಿಕೆ ಸಿದ್ಧ ಇತ್ಲೆ.

ಬೊಳ್ಪುನ ಕವಾಯತು ಮುಗ್ಸಿ ಆಗಷ್ಟೆ ಬಿಡಾರಕ್ಕೆ ಬಂದ ಕಲ್ಯಾಣಸ್ವಾಮಿನು, ದಂಡನಾಯಕರು ತಮ್ಮೆದುರು ಕೈ ಮುಗ್ದ್ ನಿಂತ ಧೂತನ ಕಂಡ್ ಪರಿಚಿತನಂಗೆ ಮಾತಾಡ್ಸಿದೋ.

"ಕುದ್ರು, ಸಮಾಧಾನ ಮಾಡಿಕ. ಏನ್ವಿಷಯ?"

ಬೊಚ್ಚಿರುಸ ಕುದ್ರದೆ ನಿಂತ್‌ಕಂಡೇ ಧೂತ ಹೇಳ್ತ್.

"ಕೆಟ್ಟ ಸುದ್ದಿ ತಂದೊಳೆ, ಮಡಿಕೇರಿಂದ ಸೈನ್ಯ ಬರ್ತುಟ್ಟು" ಕಾದ್‌ಕಂಡ್ ಇದ್ದಂಗೆ ನಗಾಡಿಕಂಡ್ ನಂಜಯ್ಯ ಹೇಳ್ತ್.

"ಕೆಟ್ಟ ಸುದ್ದಿಗಡ! ಇಷ್ಟ್ ದಿನಲಿ ಇದ್ ನಾನ್ ಕೇಳ್ವ ಸುರುನ ಒಳ್ಳೆ ಸುದ್ದಿ!"

ರಾಮಗೌಡನು ನಗಾಡಿಕಂಡ್ ಹೇಳ್ತ್.

"ಸೈನ್ಯ ಅಲ್ಲದೆ ಇನ್ನೆಂತ ಬರೊಕಪ್ಪ?"

ತಾನ್ ಹೇಳ್ದ್ ಏನಾದ್ರ್ ತಪ್ಪಾಗಿಟ್ಟೊಂತ ಸಂಶಯ ಆತ್ ಧೂತಂಗೆ.

"ಸೈನ್ಯ ನಮ್ಮದಲ್ಲ, ಇಂಗ್ಲೀಷರ್ದ್..."

"ಅವರ್ದೇಪ್ಪ ನಾವುಗು ಬೇಕಾದು!" ನಂಜಯ್ಯ ಹೇಳ್ತ್.

ಕಲ್ಯಾಣಸ್ವಾಮಿ ನಗಾಡಿಕಂಡಿದ್ದರ್ ಗಂಭೀರಲಿ ಇತ್ತ್. ಮತ್ತೆ ಹೇಳ್ತ್ ಇನ್ನಾದ್ರ್ ಕುದ್ದ್ ನಿಧಾನಕೆ ಹೇಳ್.

ದಂಡನಾಯಕರ ನೆಗೆ ಕಂಡ್ ಪರಿಸ್ಥಿತಿ ನಾನ್ ನೆನ್ನಿದಷ್ಟ್ ಗಂಡಾಂತರ ಇಲ್ಲೆಂತ ತಿಳ್ದ್ ಧೂತ ಚಾಪೆ ಮೇಲೆ ಕುದ್ದ್ ಕಂಬಕ್ಕೆ ಒರ್‍ಗಿತ್. ಮೆಲ್ಲ ಮಾತಾಡಿಕೆ ಸುರುಮಾಡ್ತ್.

ಅದ್ ಕೊಡಗ್‌ನ ಪರಿಸ್ಥಿತಿನ ಕುರ್ತ ವಿವರ. ಬೆಂಕಿನ ಕಿಡಿ ಈಗಾಗಲೇ ಅವರ ಹೊತ್ತಿಕಂಡಿತ್ತ್. ಬೋಪು ದಿವಾನನ ಮೋರೆಗೆ ಮಂಗಳಾರತಿ ಆಗಿತ್ತ್. ಅವನ್ನೆ ಅವನ ಮೂರ್ಕಾಸಿಗೆ ಮಾರಿಕೊಂಡದರ ಫಲ ಪರಕೀಯವೇ ಅವನ ಶಂಕಿಸುವ ಸ್ಥಿತಿ ಬಂದಿತ್ತ್.

ಸ್ವಾತಂತ್ರ್ಯ ಪ್ರೇಮನ ಬೆಳ್ಸುವ ದೊಡ್ಡ ಶಕ್ತಿ ಆಗಿತ್ತ್ ಈಗ 'ಕಲ್ಯಾಣಪ್ಪನ ದಂಡ್' ಎನ್ನುವ ಹೆಸ್ರು. ಆ ದಂಡ್‌ನ ನಾಯಕರ ಹಿಡೆವ್ಕೆ ಬಹುಮಾನಗಳಸ ಘೋಷಣೆ ಮಾಡಿದ್ದೊ. ವಿದ್ರೋಹಿಗಳ ಸೋಲ್ಸಿಯೆ ಬಾದುಂತ ಬೋಪು ದಿವಾನ ಹೊರ್‍ಟಿತ್ತ್. ಇಲ್ಲರೆ ಅವನನ್ನೆ ಬಲಿ ತಕಣೆಂತ ಹೆದ್ರಿಸಿತ್ತ್ ಲೀಹಾರ್ಡಿ.

ಲೀಹಾರ್ಡಿ–ಬೋಪು ದಿವಾನನ ನಾಯಕತ್ವಲಿ ಸಿಪಾಯಿಗಳ ದಂಡ್ ಮಡಿಕೇರಿ ಬುಟ್ಟತ್.

ಕಲ್ಯಾಣಸ್ವಾಮಿ ಕೇಳ್ತ್: "ಎಷ್ಟ್ ದಿನ ಆತ್?"

ಇಂದಿಗೆ ನಾಕ್ ದಿನ. ಬಾಳ ಹುಸಾರ್‍ಲಿ ನಿಧಾನಕ್ಕೆ ಬರ್ತಾ ಒಳ. ಇಕ್ಕಟ್ಟ್‌ನ ಕಾಡ್‌ನ ದಾರಿ. ಮುಂದೆ ಹೋಕೆ ಸುಲಭ ಇಲ್ಲೆ. ಸುಳ್ಯನ ಆಕ್ರಮಣ ಮಾಡ್ದು

ಅವ್ಕೆ ಇರ್ವ ಗುರಿ.

"ಈಗದ ವಾರ್ತೆ ಹೆಂಗುಟ್ಟು? ಎಲ್ಲಿಗೆ ತಲ್ಪಿಯೊಳ?"

"ಸಂಪಾಜೆಲಿ ಅವು ಉಳ್ಕಂಡದರ ನಾ ಕಂಡೊಳೆ. ಆ ಮೇಲೆ ನಂಗೆ ಗೊತ್ತಾದಂಗೆ ಲೀಹಾರ್ಡಿಗು ಬೋಪುಗು ಅಲ್ಲಿ ಜಗಳ ಆತ್‌ಗಡ. ಲೀಹಾರ್ಡಿ ಬೋಪುಗೆ ಬಾಯಿಗೆ ಬಂದ ಹಂಗೆ ಬೊಯ್ತ್ ಗಡ. ಸಿಪಾಯಿಗಳ ಒಂದು ದಂಡ್ ವಾಪಾಸ್ ಮಡಿಕೇರಿಗೆ ಹೋತ್ ಗಡ.

ಆಹಾ! ನಂಜಯ್ಯ ಹೇಳ್ತ್.

ರಾಮಗೌಡ ಹೇಳ್ತ್: "ಅಮರಸುಳ್ಯ ಹತ್ರ ಬಂದ ಹಂಗೆ ಮಡಿಕೇರಿನ ಚಿಂತೆ ಹತ್ತಿತ್ ಆಗಿರಕು.! ಭಾರಿ ವೀರನೆ ಇರಕು ಆ ಲೀಹಾರ್ಡಿ!" ಧೂತ ಹೇಳ್ತ್.

"ಬೋಪುನ ಸೈನಿಕರ್ ಜನಕ್ಕೆ ಕೊಡ್ವ ಹಿಂಸೆಗೆ ಮಿತಿನೆ ಇಲ್ಲೆ. ಕಾಟಕಾಯಿಯ ಜನ ಅಂತ ಸಿಕ್ಕಿದವ್ಕೆಲ್ಲಾ ಅವು ಹೊಡ್ದವೆ. ಕಲ್ಯಾಣಸ್ವಾಮಿ ಹೇಳ್ತ್: "ಅವರ ದಂಡ್‌ನ ಲೆಕ್ಕ ಎಷ್ಟ್?"

ಬಾಳ ದೊಡ್ಡ ಸಂಖ್ಯೆ. ನಂಜಯ್ಯ ನೆಗಾಡ್ತ್.

"ಆದರೆ ಅವರ್ಲಿ ಐವತ್ತರಷ್ಟ್ ಜನ ಕುದುರೆ ಸವಾರರೆ ಇರ್‍ದು."

ಎಲ್ಲರತ್ರಸ ಕೋವಿ ಉಟ್ಟು.

ರಾಮಗೌಡನ ಮೋರೆಲಿ ಚಿಂತೆ ತುಂಬಿತ್. ಅವ ಹೇಳ್ತ್ : "ಅಮರಸುಳ್ಯ ಅವರ ವಶ ಆದು ಖಂಡಿತ"

ಅಲ್ಲಿವರ್ಗೆ ಸುಮ್ಮನೆ ಇದ್ದ ಅಣ್ಣಿಗೌಡ ಒಮ್ಮೆಗೆ ಹೇಳ್ತ್ : ಯಾಕೆ ಆದೆ? ಸುಳ್ಯನ ರಕ್ಷಿಸ್ವ ಶಕ್ತಿ ನಾವುಗಿಲ್ಲೆನಾ? ಕಲ್ಯಾಣಸ್ವಾಮಿ ಅಂಬೆರ್ಪುಲಿ ದೂತನ ಕೇಳ್ತ್: "ಇನ್ನ್ ಏನಾರ್ ಉಟ್ಟಾ?"

"ವಿಶೇಷ ಎಂತ ಇಲ್ಲೆ. ಪುತ್ತೂರು ಪಾಣಿಮೊಗರುಗಳೆಲ್ಲ ಶಾಂತಲಿ ಉಟ್ಟು."

"ಸರಿ ನೀ ಇನ್ನ್ ಹೋಗು. ವಿಶ್ರಾಂತಿ ತಕ."

ದೂತ ಹೋದಂಗೆ ಇವೆಲ್ಲ ಸೇರಿ ಮಾತಾಡಿಕೆ ಸುರು ಮಾಡ್ದೊ. ಕಲ್ಯಾಣಸ್ವಾಮಿ ಹೇಳ್ತ್: "ನಾವು ನಾಳೆಗೆ ಎಂತರ್‍ನು ಮುಂದೆ ಹಾಕಿರೆ ಇಂದೇ ಮಾಡುಂತ ಹೇಳ್ದೆ ದೈವ...." ನಾವುಗೆ ಲೀಹಾರ್ಡಿ – ಬೋಪು ಇಬ್ಬರುಸ ಒಂದೇನೆ. ಸುಳ್ಯ ಮೇಲೆ ದಾಳಿ ಮಾಡ್ವ ತುಕಡಿನ ನಾಶ ಮಾಡೊಕು. ಏನ್ ಹೇಳ್ರೆ ನಂಜಯ್ಯನವೇ?

ನಂಜಯ್ಯ ರಾಮಗೌಡನ ಕಡೆಗೊಮ್ಮೆ ನೋಡಿ ಹೇಳ್ತ್.

"ಇದರ್ಲಿ ಭಿನ್ನಭಿಪ್ರಾಯದ ಮಾತೆಲ್ಲಿಟ್ಟು? ಕೂಡ್ಲೆ

ಒಂದ್ಸಾವಿರ ಸೈನಿಕರ ಸುಳ್ಯಕೆ ಕಳ್ಸೊಕು.

ಕಲ್ಯಾಣಸ್ವಾಮಿ ರಾಮಗೌಡರ ಕೇಳ್ತ್: ಹೆಂಗೆ ಏರ್ಪಾಟ್ ಮಾಡ್ದು?

"ನೀವು ಹೆಂಗೆ ಹೇಳ್ರೆ ಹಂಗೆ"

ಕುಡಿಯ ಸೋದರರ ಕಡೆಗೊಮ್ಮೆ ನೋಡ್ತ್ ಕಲ್ಯಾಣಸ್ವಾಮಿ. ಚೆಟ್ಟಿ ಕುಡಿಯ ಹೇಳ್ತ್ : "ಬೋಪುನ ಮುಗ್ಸುವ ಶಪಥ ಹಾಕಿದ್ ನಾನ್. ನಾನು ಕರ್ತುನು ಸುಳ್ಯಕ್ಕೆ ಹೋದವೆ."

ಆದು ದಂಡನಾಯಕರಿಬ್ಬರಿಗೆ ಹೇಳ್ತಾ ಒಳೆ. ಇನ್ನ್ ಯಾರ್ಯಾರ್ ಸುಳ್ಯಕ್ಕೆ ಹೋದು?

"ನಾನು ಹೋನೆಂತ ಹೇಳ್ರೆ ಊರುನ ಮೇಲೆ ಪ್ರೀತಿ ಅಂತ ಹೇಳ್ವರಿ ನೀವು" ರಾಮಗೌಡ ಹೇಳ್ತ್.

ನಂಜಯ್ಯ ಹೇಳ್ತ್ : ಖಂಡಿತ ಹೇಳ್ನೆ. ಸುಳ್ಯಕ್ಕೆ ಹೋಗ್ವ ಹಕ್ಕ್ ನಮ್ಮದ್. ಗೌಡ ಮಾತಾಡ್ತ್‌ಲೆ.

"ಆದು, ಇಲ್ಲಿಯೆ ಇರುವಂತವು ಯಾರು ಇಲ್ಲೆ. ಈ ವಾರ ಅಲ್ಲರುಸ ಮುಂದಿನವಾರ ಅಂತು ನಾವೆಲ್ಲ ಮಡಿಕೇರಿ ಕಡೆ ಹೋಗುವವೆ.

ನಾನ್? ಅಣ್ಣಿಗೌಡ ಕೇಳ್ತ್.

"ಕೋಶಾಧಿಕಾರಿ ಮುಖ್ಯ ಗುಂಪುಲಿಯೆ ಇರೊಕು" ಬಂಗರಾಜ ಹೇಳ್ತ್.

ನಿರ್ಧಾರ ಮುಗ್ದಹಂಗೆ ಕಲ್ಯಾಣಸ್ವಾಮಿ ಹೇಳ್ತ್. "ಎಲ್ಲಸ ತೀರ್ಮಾನ ಮಾಡ್ದಂಗೆ ಆತ್ ಅಂದರೆ. ನಂಜಯ್ಯನವೇ ಎದ್ರಿ. ಹೋಕಿರುವಂತ ದಂಡ್ ಸಿದ್ಧ ಆಗಲಿ.

ಉಂಡ ಕೂಡ್ಲೆ ಹೊರ್ಡಿ. ನಾಳೆ ಬೊಳ್ಪಾಕನ ಸೇನೆ ಪುತ್ತೂರು ದಾಟಿದೆ.

ಸರಿಂತ ಹೇಳ್ತ್ ನಂಜಯ್ಯ.

....ಹೊತ್ತಲ್ಲದ ಹೊತ್ತ್‌ಲಿ ಕಹಳೆ ಸದ್ದಾತ್. ಸೈನಿಕರ್ ಚುರುಕಾದೊ. ಆಗಿಂದಾಗೆ ಸುಳ್ಯಕ್ಕೆ ಹೊರ್ಡ್ಡುಕುಂತ ಹೇಳ್ರು ಸಿದ್ಧ ಆಗ್ವ ಜನಕ್ಕೆ ಕೊರತೆನೆ ಇತ್ಲೆ. ಕುದುರೆಗೆ, ಕೋವಿ, ಕತ್ತಿ ಒಟ್ಟಿಗೆ ಕೊತ್ತಳಿಕೆನು ಈಗ ಬೇಕಾದಂಗೆ ಇತ್ತ್. ಮಂಗ್ಳೂರ್‌ಂದಲೇ ಓಡಿ ಹೋದ ಇಂಗ್ಲೀಷರು ಇರಿಕಾನ, ಉಳ್ದವು ಯಾರ್ ಬಾವ ಧೈರ್ಯ ಮಾಡಿಕಿಲ್ಲೆಂತಾ ಇತ್ತ್. ಬಿಸಿಲ್‌ನಸ ಲೆಕ್ಕಕ್ಕೆ ತಕಣವೆ ಹೊರ್ಟ್‌ನಿಂತ ಸೈನಿಕರ ನೋಡಿ ಕಲ್ಯಾಣಸ್ವಾಮಿ ಹೇಳ್ತ್: "ಇಂದ್ ನಮ್ಮ ಸ್ವಾತಂತ್ರ್ಯ ಸೇನೆ ಇನ್ನೊಂದು

ಹೆಜ್ಜೆ ಇಸ್ತ ಉಟ್ಟು. ನಮ್ಮ ದಂಡ್‌ನ ಒಂದು ಕೈ ಮಂಗ್ಳೂರ್‌ನ ಕಾಪಾಡ್ತ ಉಟ್ಟು, ಇನ್ನೊಂದು ಕೈ ಆಗಿರ್‍ವ ನೀವು ಸುಳ್ಯ ಕಡೆ ಹೋಗ್ತ ಒಳರಿ. ಮತ್ತೆ ಎರ್‍ಡ್ ಕೈ ಒಟ್ಟಿಗೆ ಆಗಿ ಕೊಡಗ್‌ನ ಒಳಗೆ ವೈರಿಗಳ ಪುಡಿ ಪುಡಿ ಮಾಡೊಕು. ಆ ದಿನ ದೂರ ಇಲ್ಲೆ. ನಮ್ಮ ರಾಜ್ಯಂದ ಪರಕೀಯರ ಪೂರಾ ಓಡ್ಸುವ ದಿನಾ ಹತ್ರ ಬರ್ತುಟ್ಟು. ಸ್ವಾತಂತ್ರ್ಯಕ್ಕೆ ಮಾಡ್ವ ಯುದ್ಧ ಇದ್ ಧರ್ಮಯುದ್ಧ. ನಾವು ಸಾಯಕೆ ಹೊರ್‍ಟವು ಅಲ್ಲ. ವೈರಿಗಳ ಕೊಂದ್ ನಾವೇ ಗೆಲ್ಲಕು. ಹೇಳಿ ಈ ಯುದ್ಧಲಿ ನಾವು ಗೆಲ್ಲುವೆಲಾ?

ಸಾಲ್ ಮಾಡಿ ನಿಂತ್‌ಕಂಡಿದ್ದ ಸಾವಿರ ಜನ ಸೈನಿಕರ್ ಜೋರಾಗಿ ಬೊಬ್ಬೆ ಹೊಡ್ದೊ!

"ಖಂಡಿತ!"

"ಹಂಗಾರೆ ಘೋಷಣೆ ಮಾಡಿ! ಸ್ವಾತಂತ್ರ್ಯ ಸೇನೆಗೆ ಜಯ ಆಗಲಿ!" ದಂಡನಾಯಕ ನಂಜಯ್ಯ, ತಾನ್ ಕುದ್ದ ಕುದುರೆನಾ ಆಚೀಚೆ ತಿರ್‍ಗಿಸಿಕಂಡ್ ಗಟ್ಟಿಯಾಗಿ ಹೇಳ್ತ್.

ಹೇಳಿಯಪ್ಪ! ರಾಜ್ಯಪಾಲ ಕಲ್ಯಾಣಸ್ವಾಮಿಗೆ ಜಯವಾಗಲಿ ಘೋಷಣೆ. ಪ್ರತಿಧ್ವನಿ ಆಕನ ಬಾವುಟಗುಡ್ಡೆ ನಡ್ಗಿತ್. ಮತ್ತೆ ಗುಡ್ಡ ಇಳ್ದ್, ನಗರ ದಾಟಿ ಹದಿಮೂರು ದಿನಂದ ಹಿಂದೆ ಬಂದ ಮಾರ್ಗಲಿಯೆ ಸುಳ್ಯ ಕಡೆ ಹೊರ್‍ಟೊ. ಕೊನೆಯ ಸೈನಿಕಸ ಕಣ್ಣಂದ ಕಾಣದಾಗುವರೆಗೆಸ ಕಲ್ಯಾಣಸ್ವಾಮಿ ನೋಡಿಕಂಡ್ ನಿಂತಿತ್.

ಸೇನೆನ ಬದಲ್ ಅದರ ಪದಹತಿಯಿಂದ ಎದ್ದ ಧೂಳು ಉಳ್ದಾಗ ಗುಡ್ಡೆನೆ ಖಾಲಿಯಾದಂಗೆ ಅನ್ಸಿತ್ ಕಲ್ಯಾಣಸ್ವಾಮಿಗೆ. ಹೋದ ಸೇನೆನ ಜನಂದ ಎರ್‍ಡ್ ಪಟ್ಟ್ ಉಳ್ದರುಸ ಒಂದು ನಿಮ್ಸ ಎಲ್ಲ ಕಳ್ಕಂಡಂಗೆ ಆತ್ ಕಲ್ಯಾಣಸ್ವಾಮಿಗೆ.

ಕೆಳಗೆ ಊರ್ ಕಾಣ್ತಿತ್ತ್. ಮರದ ಹಸುರುಂದ ಮುಚ್ಚಿಕಂಡಿದ್ದ ಮನೆ ಮಾಡು, ದಂಬೆ, ಹಂಚುಗ, ಮುಳಿಹುಲ್ಲು ಭಾವುಟಗುಡ್ಡನ ಹತ್ತಿ ಬಂದ ಹಂಗೆ ಕಾಣ್ತಿತ್ತ್. ಕೆಳಗೆ ಊರ್‌ಂದ ಹೊರ್‍ಟ ನೂರು ಸ್ವರಗ. ಮಧ್ಯಾಹ್ನ ಉಂಡು ಮಲ್ಗಿದ್ದ ಊರ್‍ನ ಯಾರೋ ತಟ್ಟಿ ಎಚ್ಚರ ಮಾಡುವಂಗೆ ಇತ್ತ್.

ಪಶ್ಚಿಮಲಿ ಲಾಯ್ಕಲಿ ಹರ್‍ಡಿಕಂಡಿತ್ತ್ ಸಮುದ್ರ. ನಿನ್ನೆ ಕತ್ತಲೆಗೆ ಭಾರಿ ಸದ್ದ್ ಮಾಡ್ತಿದ್ದ ಅಲೆಗ, ಈಗ ಸುದ್ದಿ ಇಲ್ಲದೆ ಮಲ್ಗಿಕಂಡಿತ್ತ್.

ದೂರ ನಿಂತ್‌ಕಂಡಿದ್ದ ಅಂಗರಕ್ಷಕನ ಕಲ್ಯಾಣಸ್ವಾಮಿ ಕರ್‍ದ್ ಹೇಳ್ತ್: "ದುರ್ಬೀನ್

ತಕಂಡ್ ಬಾ"

ಮಂಗ್ಳೂರು ಗೆಲ್ಲಿಕಾನ ತಕಂಡ ಸಾಮಾನ್‌ಗಳ್ಲಿ ಸಿಕ್ಕಿದ ದುರ್ಬೀನ್ ಅದ್.

ಸೈನಿಕ ತಂದ ಕೂಡ್ಲೆ ಎರ್ಡ್ ಕೈಲಿ ಅದರ ತಕಂಡ್ ಕಲ್ಯಾಣಸ್ವಾಮಿ ಎಡಮಡೆ ಕಣ್ಣ್ ಮುಚ್ಚಿ ಬಲಕಣ್ಣ್‌ಲಿ ನೋಡ್ತ್.

ಹತ್ರನೆ ನಿಂತ್‌ಕಂಡಿದ್ದ ಲಕ್ಷ್ಮಪ್ಪ ಬಂಗರಾಜ ಕೇಳ್ತ್,

"ಎಂತ ಕಂಡದೆ ಸ್ವಾಮಿಯವೇ?"

"ಎಂತ ಇಲ್ಲೆ, ಬರಿ ನೀರ್, ಎಲ್ಲಿ ನೋಡ್ರು ನೀರ್..."

"ಮತ್ತೆ ದುರ್ಬೀನುನ ಬಂಗರಾಜನ ಕೈಗಿಸಿ ಕಲ್ಯಾಣಸ್ವಾಮಿ ಹೇಳ್ತ್.

"ನೀವುಸ ನೋಡಿ"

ಅವಂಗುಸ ನೀರ್‌ನ ರಾಶಿ ಕಾಣ್ತಿತ್ತ್ ಅಷ್ಟೆ. ಸಮುದ್ರ ಹತ್ರ ಬಂದ ಹಂಗೆ ಆಗ್ತಿತ್ತ್ ಗಡ.

ರಾಮಗೌಡ ಹತ್ರ ಬಂದ ಹೇಳ್ತ್ : "ವಿಲಾಯಿತಿ ಎಲ್ಲಿಟ್ಟುಂತ ನೋಡ್ತಾ ಒಳರಿಯ?"

"ಕಲ್ಯಾಣಸ್ವಾಮಿ ನಗಾಡ್ತ್"

"ಆ ದೇಶ ಕಣ್ಣಿಗೆ ಬಿದ್ದಿದ್ದರೆ ಲಾಯ್ಕ ಇತ್ತ್!"

ಕಲ್ಯಾಣಸ್ವಾಮಿ ಪಶ್ಚಿಮದ ಕಡೆ ನೋಡ್ರುಸ ಅವ್ನ ಮನ್ಸು ಮಂಗ್ಳೂರ್‌ಂದ ಹೋದ ಸೇನೆನ ಬಗ್ಗೆನೆ ಇತ್ತ್. ಅದ್ ಮನೆಲಿಯೆ ಹುಟ್ಟಿ ಬೆಳ್ದ ಮಗ್ಳ ಕಳ್ಸಿಕೊಟ್ಟ ಸಂಕಟ.

ರಾಮಗೌಡನ ಮನ್ಸ್‌ಲಿಸ ಆ ವಿಷಯನೆ ಇತ್ತ್.

"ನಂಜಯ್ಯನೂ, ಹೈದಂಗಳೆಲ್ಲ ಈಗ ಕಂಕನಾಡಿ ದಾಟಿರುವ ಅಲ. ಆ ವಿಷಯದ ಯೋಚನೆನೆ ನನ್ನದ್ ಕೂಡ ಎಂಬಂಗೆ ಬಂಗರಾಜ ಹೇಳ್ತ್.

"ಓ ದಂಡ್ ಈಗ ಕಂಕನಾಡಿ ದಾಟಿರ್ದು"

"ಕಲ್ಯಾಣಸ್ವಾಮಿ ಮೆಲ್ಲನೆ ಹೇಳ್ತ್"

"ಯಾಕೋ ಬೇಜಾರಾದೆ ಗೌಡರೇ"

ಗೌಡನ ಸ್ವರಸ ನಡ್ಗಿತ್.

"ನಂಗೆ ಬೇಜಾರಾತ್ಲೆಂತ ತಿಳ್ಕಂಡರ್ಯ?"

ಆ ಸಂಕಟಕೆ ಇದ್ದದೊಂದೆ ಪರಿಹಾರಂತ ಬಂಗರಾಜ ಹೇಳ್ತ್.

ಇನ್ನ್ ಹಂಞ ದಿನ ಮತ್ತೆ ನಾವುನು ಅವರೊಟ್ಟಿಗೆ ಸೇರ್ವೆ.

ಹೌದು ಕಲ್ಯಾಣಸ್ವಾಮಿ ಹೇಳ್ತ್.

ಬಂಗರಾಜನ ಕೈಯಿಂದ ದುರ್ಬೀನ್‌ನ ಮತ್ತೆ ಅವೆತ್ತೆಕಂಡ್ ನೋಡ್ತ್. ದುರ್ಬೀನಿಲ್ಲದೆಸ ನೋಡ್ತ್. ಪುನಃ ನೋಡ್ತ್.

"ಎಂತ ಅದ್?" ರಾಮಗೌಡ ಕೇಳ್ತ್.

"ಎರ್ಡ್ ಮೂರ್ ಬಿಳೀ ಚುಕ್ಕೆಗ. ನೈಋತ್ಯ ದಿಕ್ಕ್‌ಲಿ"

"ಬೆಸ್ತರ ದೋಣಿನಂಗೆ ಉಟ್ಟು"

ಬಂಗರಾಜಸ ಪರೀಕ್ಷಿಸಿ ನೋಡ್ತ್

ಶಿಬಿರಂದ ಅವರತ್ರ ನಡ್ಕಂಡ್ ಬಂದ ಅಣ್ಣಿಗೌಡ ಹೇಳ್ತ್: "ಊರ್ನ ವ್ಯಾಪಾರಿಗ ಬಂದೊಳ. ಕಂದಾಯದ ವಿಷ್ಯ ಮಾತಾಡಿಕೆ ಉಟ್ಟುಗಡ"

ಹೌದಾ, ಪೋಯಿ ಅಂದರೆ, ಹೋಕನ ಕಲ್ಯಾಣಸ್ವಾಮಿ ಆ ಮೂರು ಚುಕ್ಕಿಗಳ ದುರ್ಬೀನುಲಿ ನೋಡಿಕಂಡಿರ್‌ಂತ ಸೈನಿಕರಿಗೆ ಹೇಳಿ ಹೋದೋ.

ವ್ಯಾಪಾರಿಗಳೊಟ್ಟಿಗೆ ಮಾತಾಡಿ ಮುಗ್ಸಿಕಾನ ಸಾಯಾಂಕಾಲ ಆಗಿತ್ತ್. ಅಲ್ಲಿಂದ ಸೀದಾ ಅವನೇ ನಿಲ್ಸಿ ಹೋದ ಸೈನಿಕನತ್ರ ಬಾತ್.

ಆ ಸೈನಿಕ ವರದಿ ಒಪ್ಪಿಸಿತ್.

"ಏನೂ ಕಾಂಬೊದ್ಲೆ ಸ್ವಾಮಿಯವೇ, ಬರೀ ಚುಕ್ಕಿಗ, ಬಿಳಿ ದೋಣಿಗ".

"ಮೀನ್ ಹಿಡಿವ ದೋಣಿಗ ಆಗಿರ್ದು" ಹಂಗೆಂತ ಕಲ್ಯಾಣಸ್ವಾಮಿ ಅವಂಗೆ ಅವನೇ ಸಮಾಧಾನ ಮಾಡಿಕಣ್ತ್.

## ೨೫

ಬೆಸ್ತರು ಒಳಗಿದ್ದರುಸ ಅದ್ ಮೀನ್ ಹಿಡಿವ ದೋಣಿಗಳಾಗಿತ್ಲೆ. ಮೀನು ಹಿಡಿವ ಬೆಸ್ತರಾಗಿತ್ಲೆ ಅವು. ಏಳ್ ಸಮುದ್ರನ ದಾಟಿ ಯಾಗಳೋ ಬಂದಿದ್ದ ಅವ್ಕೆ ಬಲೆ ಬೀಸುದು ಲಾಯ್ಕ ಗೊತ್ತಿತ್ತ್. ಆದರೆ ಆ ಬಲೆಯೊಳಗೆ ಸಿಕ್ಕ್‌ತ್ತಿದ್ದದ್ದ್ ಮೀನ್‌ಗ ಅಲ್ಲ, ದೇಶಗ.

ಕುತ್ತ ಇರ್ವ ಮೂರ್ ಪತ್ತೆ ಮಾರ್‌ಗ. ಇರ್ಲ್ ಹೊತ್ತು ನದಿ ಒಳಗೆಂದ ಇತ್ತ ಬಂದದ್ ಅದ್.

ದಂಡೆ ಉದ್ದಕ್ಕೆ ಕಾವಲ್ ಇದ್ದ ಸೈನಿಕರ್ ನಿದ್ದೆ ಮಾಡಿದ್ದೊ. ನೊಡುಲಿ ಎಚ್ಚರ ಆದವ್ಕೆ ಎತ್ತರದ ಹಾಯಿಗ ಕಂಡೊ. ಒಬ್ಬ ಇನ್ನೊಬ್ಬನ ಕೇಳ್ತ್: "ಎಂತಯ ಅದ್?

"ಬಂದರ್‌ನ ವ್ಯಾಪಾರಿಗ ಆಗಿರಕು, ಸಾಮಾನು ಬಂದುಟೊ ಏನೋ?"

ನಿದ್ದೆ ಬಂದವಂಗೆ ಸಾಕಾಗಿತ್ತ್ ಆ ಮಾತ್.

ಸಣ್ಣ ದೋಣಿಗ ನೀರಿಗಿಳ್ತ್. ಅದರೊಳಗೆ ಜನರ್. ಆದಷ್ಟು ಮಟ್ಟಿಗೆ ಸದ್ದೇ ಇಲ್ಲದೆ ಹೋಗ್ತಾ ಉಟ್ಟು.

ದಡಕ್ಕೆ ಬಾತ್. ಖಾಲಿಯಾಗ್ತಿತ್ತ್. ಮತ್ತೆ ಹೋಗ್ತಿತ್ತ್. ಮತ್ತೆ ಪುನಾ ಹಂಗೆನೆ.

ಯಾವ ಅಂಬೆರ್ಪುಸ ಅವ್ಕೆ ಇದ್ದಂಗೆ ಕಂಡತ್ಲೆ. ಅಂಬೆರ್ಪು ಇದ್ದರುಸ ಯಾರು ತೋರ್ಸಿಕಣ್ತಿತ್ಲೆ. ಇರ್ಲ್ ಎಲ್ಲಾ ನಮ್ಮದೆ ಎನ್ನುವಂಗೆ ಆತ್ಮವಿಶ್ವಾಸಲಿ ಅವರ ಕೆಲ್ಸ ಮಾಡ್ತಿದ್ದೊ.

ತಿಂಗಳ ಬೆಳ್ಕಿತ್ತ್ ನಿಜ. ಆದರೆ ನೋಡಿಕಾಗದ ಜನಂಗ ನಿದ್ದೆ ಹೋಕನ ಯಾವ ಹೆದ್ರಿಕೆ ಅವ್ಕೆ? ಅಲ್ಲದೆ ದಂಡೆ ಉದ್ದಕ್ಕೆ ಪೂರಾ ಚಾಳೆ ಮರಗ ಇದ್ದೊ. ಮರದ ಕೆಳಗೆ ಕತ್ತಲೆ ಇತ್ತ್. ಕತ್ತಲೆಲಿ ನಿತ್ತವ್ಕೆ ಏನ್ ಕಾಂಬತಿತ್ಲೆ?

ಬಾಳ ಹೊತ್ತು ಹಿಂಗೆನೆ.

...ಮಧ್ಯರಾತ್ರಿ ಕರ್ಕುಟ್ಟಿ ಕತ್ತಲೆ ದಾಟಿ ಹಂಞ ಹೊತ್ತಾಗಿರ್ದು. ಬಿಳಿಯ ಮೋರೆಗಳಿದ್ದ, ಕರಿ ಪಿಜಿನ್‌ಗಳ ಸಾಲ್ ಬೀದಿಲಿ ಹೋಗ್ತಿತ್ತ್. ಬೋಳಾರ, ಹಂಪನಕಟ್ಟೆ ಹಂಗೆ ಮುಂದಕ್ಕೆ ಕರಿ ಮೋರೆಗಳ ಕಪ್ಪು ಪಿಜಿನ್‌ಗಳ್ ಇದ್ದೊ. ಎಷ್ಟೋ ಇದ್ದೊ. ಸುಮಾರು ಒಂದ್ ಸಾವಿರದಷ್ಟ್.

ಈ ಪಿಜಿನ್ ಸಾಲ್ ಎಲ್ಲಿಗೆ? ಯಾವ ಮಾಟೆಗೆ? ಯಾವ ಮರಕ್ಕೆ?

ಬಾವುಟಗುಡ್ಡದ ಬುಡ. ಅದರ ಸುತ್ತು ಸೆರೆಮನೆನತ್ರ ಒಂದ್ ಸಾಲ್, ಹೆಚ್ಚ್‌ನವೆಲ್ಲ ಬಾವುಟಗುಡ್ಡಕ್ಕೆ.

ಕಾವಲ್‌ನಿತ್ತ ಸೈನಿಕ ಒಬ್ಬ ಹತ್ರಲಿ ಎಂತೋ ಹೋದಂಗೆ ಆಗಿ ಕೇಳ್ತ್ : "ಯಾರದ್?"

ಉತ್ತರ ಬಾತ್ಲೆ. ಕರಿ ಬಣ್ಣ ಮಾತ್ರ ಅಲ್ಲಿತ್ತ್.

ಸೈನಿಕ ಕೋಪಿಂದ ಒಂದು ಗುಂಡು ಹಾರ್ಸಿತ್ತ್. ಅಡ್ಡ ಇದ್ದ ಒಂದು ಮರಕ್ಕೆ ಬಡ್ತ್. ಯಾರು ಉರ್ಳಿ ಬೀತ್ಲೆಂತ ಕಾವಲ್‌ನವ ಸುಮ್ಮನಾತ್.

ಆಕಾಶಲಿ ಬೆಳ್ಳಿ ಮೂಡ್ತ್. ಇನ್ನ್ ಹೊತ್ತಾರೆ. ಮೈ ನಡ್ಗುವ ಹಂಗಿತ್ತ್ ಆ ಹೊತ್ತುನ ಗಾಳಿ ಮತ್ತೆ ಕಪ್ಪು ಆಕೃತಿಗ ಬಗ್ಗಿಕಂಡ್ ಹೋಗ್ತಿತ್ತ್. ಒಂದರ ಹಿಂದೆ ಒಂದು.

ಕಾವಲ್‌ನವ ಇದೆಂತ ಕನಸ್ ಅಂತ ಪೇಚಾಡಿಕಂಡ್ ಕಣ್ಣ್ ಉಜ್ಜಿಕಣ್ತ್.

ಕಾಡ್ ಹಂದಿನಾ? ಸುಳ್ಯದಾಚೆಲಿ, ಕೊಡಗ್‌ಲಿ ಈ ಪ್ರಾಣಿ ಉಟ್ಟು ನಿಜ. ಆದರೆ ಇಲ್ಲಿ? ಈ ಪೇಟೆಲಿ ಎಲ್ಲಿಂದ?

ಮತ್ತೊಮ್ಮೆ ಗುರಿ ಇಸಿಕೆ ಸೈನಿಕ ಕೋವಿ ಎತ್ತಿತ್ತ್. ಕುದ್ರೆ ಒತ್ತಕುಂತ ಇರಿಕಾನ–

"ಆಯ್!"

ಕುತ್ತಿಗೆನ ತಬ್ಬಿಕಂಡ್ ಒಂದ್ ತೋಳ್ ಬಾತ್. ಒಟ್ಟಿಗೆ ಕತ್ತಿನ ಗಾಯ. ಇಂಗ್ಲೀಷ್‌ಲಿ ಮಾತಾಡ್ದು ಕೇಳ್ತಿತ್ತ್;" ಮುಂದೆ ನುಗ್ಗಿ, ಸೀದಾ ಹೋಗಿ!"

ಹಂಞ ಹೊತ್ತುಲಿ ಇಡೀ ಗಜಿಬಿಜಿ ಆತ್. ಕಲ್ಯಾಣಸ್ವಾಮಿಯ ಸೇನೆನ ಬಿಡಾರನ ಹೊಕ್ಕು, ದೀಪಗಳ ಕೆಡ್ಸಿ ಕತ್ತಲೆಲಿ ಎಡ್ಗಿರುಸ, ತಿಂಗಳ ಬೊಳ್ಪುಲಿ ಎದ್ದ್‌ಕಂಡ್ ಸುದಾರ್ಸಿಕಂಡ್ ಮಲ್ಗಿದವರ ಕತ್ರಿಸಿದೋ. ಎದ್ದವರ ಎದೆಗೆ ಗುಂಡು ಹಾರ್ಸಿದೊ. ಮರ್ಡುದು–ಬೊಬ್ಬೆ–ಕಿರ್ಚಾಟ! ಎಚ್ಚರ ಆದವು ಬಿಡಾರಂದ ಹೊರಗೆ ಓಡ್ದೊ.

ಒಮ್ಮೆಗೆ ಕಹಳೆ ಧ್ವನಿ ಕೇಳ್ತ್, ಆ ಪುರ್ಡಿಕಂಡ್ ಇದ್ದ ಗಲಾಟೆಲಿ ರಾಮಗೌಡ ಆಜ್ಞೆ ಕೇಳ್ತ್ : "ಹೆದ್ರ್‌ಬೇಡಿ! ವೈರಿಗಳ ಕೊಲ್ಲಿ! ಕತ್ರಿಸಿ! ಗುಂಡು ಹಾರ್ಸಿ."

ಶಸ್ತ್ರಾಗರದ ಬಾಗ್ಲ್ ತೆಗ್ತ್. ಕಲ್ಯಾಣಸ್ವಾಮಿನ ಸೈನಿಕರ್ ಓಡಿಕಂಡ್ ಬಂದ್ ಕತ್ತಿ, ಕೋವಿ, ದೊಣ್ಣೆಗಳ ತಕಂಡ್ ವೈರಿಗಳೊಟ್ಟಿಗೆ ಯುದ್ಧ ಮಾಡ್ದೊ.

ದೊಡ್ಡ ಮಟ್ಟಲಿ ಅನಾಹುತ ಆಗಿಟು ನಿಜ. ಆದರೆ ಒದ್ದ್ ಕೆಡವಿಕೆ ಅದ್ ಗೆದ್ದಲ್ ಗೂಡಾಗಿತ್ಲೆ ಆ ಬಿಡಾರ.

ದಾಳಿ ಮಾಡ್ದವ್ಕೆ ಮುಖ್ಯ ಬೇಕಾಗಿದ್ದದ್ – ರಾಣಿ ಹುಳ. ಅಷ್ಟೊತ್ತಿಗೆ.. ಬೊಳ್ಪಾಕಂಡ್ ಬಾತ್. ದಾಳಿ ಮಾಡ್ದವ್ಕು, ಮಾಡ್ಸಿಕಂಡವ್ಕು ಖುಷಿ ಆಗುವಂಗೆ ಇತ್ಲೆ ಆ ಬೊಳ್ಪು.

ತಬ್ಬುರ್ಸಿಕಂಡ್ ಎದ್ದ್, ಬಂಗರಾಜನಸ ಏಳ್ಸಿದ ಕಲ್ಯಾಣಸ್ವಾಮಿಗೆ ಕಣ್ಣೆದುರು ಬಂದದ್, ಹಿಂದೆನ ದಿನ ಸಾಯಾಂಕಾಲ ಕಂಡ ಬಿಳಿ ಮೂರು ಚುಕ್ಕೆಗ. ಆಗಬಾರ್ದು ಆಗಿಹೋಗಿಟು!

ಎದೆಲಿ ಗುಂಡು ಸಿಕ್ಕಿ ಹಾಕಿಕಂಡಿದ್ದ ಸೈನಿಕ ಒಬ್ಬ ಬಂದ್ ಹೇಳ್ತ್: "ಸಮಸ್ಯೆಯಾಗಿಟ್ಟು!"

ಕಲ್ಯಾಣಸ್ವಾಮಿಗೆ ಯಾವ ವಿವರಣೆಸ ಬೇಕಾಗಿತ್ಲೆ. ಅದ್ ಆದಷ್ಟು ಗಟ್ಟಿಲಿ ಹೇಳ್ತ್.

"ಹೋರಾಡಿ! ಯಾರ್ ಹೆದ್ರ್‌ಬೇಡಿ!"

ಅವನ ಕೋವಿ ಪ್ರತಿ ಗುಂಡು ಮುಟ್ಟುವಂಗೆ ಹೊಡಿತ್ತಿತ್ತ್. ಖಡ್ಗಸ ಎಲ್ಲವರ ಕತ್ರಿಸಿ ಹಾಕ್ತಿತ್ತ್.

ಬಂಗರಾಜ ಹಿಂದೆ ಆತ್ಲೆ. ರಾಮಗೌಡಸ ಅಷ್ಟೆ. ಅಣ್ಣಿಗೌಡನ ಲಾಯ್ಕ ಯುದ್ಧ ಮಾಡ್ತಿತ್ತ್.

ಬೊಳ್ಪು ಜಾಸ್ತಿ ಆದಂಗೆ ಧಾಳಿ ಮಾಡುವವರ ಸಂಖ್ಯೆಸ ಹೆಚ್ಚಿಗೆ ಆತ್. ಬಾವುಟಗುಡ್ಡದ ಸುತ್ತಂದೆಲ್ಲ ಮೇಲೆಗೆ ಹರ್ಕಂಡ್ ಬರ್ತಿದ್ದೊ ಪಿಜಿನ್‌ಗ.

ಕಲ್ಯಾಣಸ್ವಾಮಿ ಹೆದ್ರದೆ ಯೋದರ ಬೆಂಬಲಕೆ ನಿಂತತ್.

"ಹಿಂದೆ ಬರ್ಬೊಡಿ! ಹೋರಾಡಿ!"

ಕಟ್ಟಿಹಾಕಿದ ಕುದ್ರೆಗ ನಿತ್ತಲ್ಲೆ ಕುಣಿದಾಡ್ದೊ. ಬಳ್ಳಿ ಬಿಚ್ಚಿಕೆ ನೋಡಿಕಂಡ್ ಕುಣ್ದೊ.

ಯಾವುದೋ ಒಂದ್ ಸ್ವರ ಕಲ್ಯಾಣಸ್ವಾಮಿನ ಹಿಂದೆಂದ ಬಾತ್.

"ಸ್ವಾಮಿಯವೇ ಬಂದು ಬುಡಿ. ಕುದುರೆ ಸಿದ್ಧ ಆಗಿಟು. ಕುದುರೆ ಹತ್ತಿ ಯುದ್ಧನಾ? ಅದ್ ಆಕಿಲೆ ನಂಗೆ. ಕುದುರೆ ಹತ್ತಿ ಓಡಿ ಹೋದೋ? ಎಂಥ ಯೋಚನೆ, ಥೂ! ಹತ್ರ ಬಂದ ಬಿಳಿಯರಿಬ್ಬರ ಆ ಖಡ್ಗಲಿ ಕೊಂದ್ ಹಾಕಿತ್ತ್."

ಕಲ್ಯಾಣಸ್ವಾಮಿ ಹೇಳಿಕಂಡೆ ಇತ್ತ್: ಯಾರ್ ಹಿಂದೆ ಬರ್ಬೊಡಿ, ಹೋರಾಡಿ!

ಹತ್ರನೆ ಇನ್ನೊಂದು ಸ್ವರ ಕೇಳ್ತ್ : "ಇವನೇ ಕಲ್ಯಾಣಸ್ವಾಮಿ"

ಆ ಸ್ವರ ಬಂದ ಕಡೆ ಕಲ್ಯಾಣಸ್ವಾಮಿ ತಿರ್ಗಿದ ಕೂಡ್ಲೆ ಗುಂಡೊಂದು ಅವನ ಬಲಕೈಗೆ ತಾಗಿತ್. ಖಡ್ಗ ಬಿದ್ದ್‌ಹೋತ್.

ಎಡಕೈಲಿ ಅದರ ತಕಂಡ್ ರೋಷಲಿ ಕಲ್ಯಾಣಸ್ವಾಮಿ ಕಿರ್ಚಿತ್.

"ಪಾಪಿಗ! ಧೈರ್ಯ ಇದ್ದರೆ ಮುಂದೆ ಬನ್ನಿ!"

ಬಂದ ಇಬ್ಬರುಸ ಗಾಯ ಆಗಿ ಉರ್ಳಿದೋ.

ಆದರೆ ನಾಕ್ ದಿಕ್ಕಂದಸ ಬಂದ ಹತ್ತಾರ್ ಜನ ಅವನ ಹಿಡ್ಕಂಡ್ ಕೆಳಗೆ ಹಾಕಿದೊ.

ಕಿವಿ ಒಡ್ದು ಹೋಗುವಂಗೆ ಮರ್ಡಾಟ ಕೇಳ್ತಿತ್ತ್.

ಹೋರಾಡುವರಂದಸ ಓಡುವವರ ಸಂಖ್ಯೆ ಜಾಸ್ತಿ ಇತ್ತ್. ಬಂಗರಾಜ, ರಾಮಗೌಡ, ಅಣ್ಣಿ ಎಲ್ಲರಸ ಗಾಯಮಾಡಿ ಹಿಡ್ಕೊಂಡ ಬಿಳಿಯರ್, ಅವರೊಟ್ಟಿಗಿದ್ದ ಕರಿಯರ್.

ಒಂದೇ ಸಮ ಉರ್ಕಂಡ್ ಬಂದ ಸ್ವಾತಂತ್ರ್ಯ ದೀವಟಿಗೆನ ನೆಲಕ್ಕೆ ಬಿಸಾಡಿ,

ಕೆಡ್ಸಿದೊ.

ಧ್ವಜ ಸ್ತಂಭದ ಮೇಲೆ ಇದ್ದ ಸ್ವಾತಂತ್ರ್ಯ ಬಾವುಟನಾ ಕೆಳಗೆ ಹಾಕಿ ಮೆಟ್ಟಿದೊ.

## ೨೬

ಮುಂಗಾರ್ ಮಳೆ ಬಾಕೆ ಮುಂದೆನೆ ಪಶ್ಚಿಮ ತೀರ ಕಡೆಂದ, ಕೆಳಗೆಂದ ಇಂಗ್ಲೀಷರ ದಂಡ್ ಬಾತ್.

ಬೇಟೆಗಾರ ಹಾಕಿದ ಉರ್ಳು ಇಡೀ ನಾಡ್‌ನ ಮೈನ ಬಿಗ್ತ್. ಹೋರಾಡಿಕಂಡ್ ಸತ್ತವರ ರಕ್ತಂದ ಚೆಂಡಿ ಆದ ಕರಿಮಣ್ಣ್‌ಲಿ ಸೈತಾನನ ಸರಕಾರ ಮತ್ತೆ ಬೇರು ಬುಟ್ಟತ್.

ಪೊರ್ಲುನ ಕನ್ಸ್ ಒಡ್ದ್‌ಹೋತ್.

ಫಿರಂಗಿಗಳ, ಮದ್ದ್‌ಗುಂಡ್‌ಗಳ ಬಲ ಅವ್ಕೆ. ಜಗತ್ತ್‌ನ ಹತ್ತ್ ಮೂಲೆಗಲ್ಲಿ ಅನ್ಯಾಯದ ಯುದ್ಧ ಮಾಡಿ ಕಲ್ತ ಕುಟಿಲ ಕೌಶಲನೇ ಅವ್ಕೆ ಬಂಡವಾಳ. ಜನರ ಮೇಲೆ ಅವು ನಡ್ಸಿದ ಧಾಳಿಗೆ ನಮ್ಮದೆ ದ್ರೋಹಿ ಧೂರ್ತರ ಬೆಂಬಲ.

ಸುದ್ದಿ ಕಾಡ್‌ಕಿಚ್ಚ್‌ನಂಗೆ ಹಬ್ಬಿತ್.

"ಕಲ್ಯಾಣಸ್ವಾಮಿನ ಸೆರೆ ಹಿಡ್ದೊ! ಅವನ ದಂಡ್, ಹೊಡಿ ಹೊಡಿ ಆತ್!"

ಪೇಟೆನ ಮುಖಂಡರ್‌ನ ಕೆಲವು ಬಿಳಿ ಅಧಿಕಾರಿಗಳಿಗು ಕುರ್ನಿಸು ಮಾಡ್ದೊ.

"ನೀವೆ ನಮ್ಮ ತಂದೆ, ನೀವೇ ನಮ್ಮ ತಾಯಿ ಕಾಪಾಡಕು!"

ಇಂಗ್ಲೀಷರ ನುರ್ತ ಗೂಢಚಾರರ್ ಹಿಂದೆನ ದಿನ ಅಷ್ಟೆ ಸುಳ್ಯಕ್ಕೆ ಸೇನೆ ಹೋದ ಸುದ್ದಿ ತಂದೊ.

ಸಾವಿರ ಜನ? ಕೆಲವು ಕುದ್ರೆ ಓಡ್ಸವು? ಕೊತ್ತಳಿಕೆ ಹೊತ್ತವು?

ಉಳ್ದದ್ದ್ ಒಂದೇ ಕೆಲ್ಸ. ವಿದ್ಯುತ್ ರಭಸಲಿ ಬೆನ್ನಟ್ಟುದು. ಎದುರುಂದ ದೇಶದವನೆ ಆದ ಬೋಪು ದಿವಾನನ ಕತ್ತಿ. ಹಿಂದೆಂದ ವಿದೇಶಿಯರ್ದ್ ಗುಂಡು.

ಕತ್ರಿಲಿ ಸಿಕ್ಕಿಕಣ್ತ್ ಸ್ವಾತಂತ್ರ್ಯ ಸೇನೆನ ಇನ್ನೊಂದು ಕೈ. ಹೆದ್ರ್‌ಪುಕ್ಕರು ಓಡಿ ಹೋದೋ. ವೀರರ್ ಹೋರಾಡ್ದೊ.

ಆ ಯುದ್ಧಕ್ಕೆ ಮುಂದೆನೆ ಮಂಗಳೂರ್‌ಂದ ಬಂದ ಸುದ್ದಿ ಸೋಲ್ದು ಖಂಡಿತ ಅಂತ ಆಗಿತ್ತ್.

ನಂಜಯ್ಯನ, ಕುಡಿಯ ಸೋದರರ ಇನ್ನು ಹಂಞ ಜನರ ವೈರಿಗ ಸೆರೆ ಹಿಡ್ದಿದ್ದೊ.

ಆ ಬೇಟೆ ತನ್ನ ಸ್ವಾಮಿನಿಷ್ಠೆಗೆ ಸಾಕ್ಷಿಂತ ಬೋಪು ದಿವಾನ ಹೇಳ್ತ್.

"ಈ ಖೈದಿಗಳ ನಾ ಮಡಿಕೇರಿಗೆ ತಕಂಡ್ ಹೋಕು.."

ಕಲ್ಲ್–ಮುಳ್ಳ್ ಗುಡ್ಡೆ ಕಾಡ್‌ಗಳ ದಾರಿಲಿ ಮಡಿಕೇರಿಗೆ ಕೊಡಗಿಗೆ...

ಕಿಡಿ ಬೆಂಕಿಯಾಗಿ ಸುಟ್ಟು ಹಾಕುವಂಗೆ ಹೋಗ್ತಿತ್ತ್. ಸುಳ್ಯ ಬರಿ ಸುಡುಗಾಡ್ ಆಗಿತ್ತ್.

ಬಳೆಗೆಲ್ಲಾ ತುಂಡಾತ್. ಹಣೆಗೆಲ್ಲಾ ಖಾಲಿ ಆದೊ. ಉತ್ತರ ಕೊಡಿಕೆ ಆಗದಷ್ಟ್ ಪ್ರಶ್ನೆಗ ಎದ್ದೊ. ನನ್ನ ಮಂಜ ಎಲ್ಲಿ? ಅಣ್ಣ ಎಲ್ಲಿ? ಪೊಪ್ಪ ಎಲ್ಲಿ?

ಮಂಗ್ಳೂರ್‌ನ ಈ ಯುದ್ಧಲಿ ಸತ್ತವರ ಸಂಖ್ಯೆ ಸಾವಿರ ದಾಟಿತ್ತ್. ಸೆರೆ ಸಿಕ್ಕಿದವ್ ನೂರಾರ್.

ಆಂಗ್ಲ ಸೈನ್ಯಾಧಿಪತಿ, ಬೇರೆ ಸೈನಿಕರೊಟ್ಟಿಗೆ ಅರಬ್ಬಿ ಕುದ್ರೆ ಹತ್ತಿ ಮುಖ್ಯ ಬೀದಿಲಿ ತಿರ್‌ಗಾಡ್ತ್.

ಅವ ಹೇಳ್ತ್: ಹೆದ್ರ್‌ಬೇಡಿ! ನಾವು ಕಲ್ಯಾಣಸ್ವಾಮಿ ಅಂತವರ ಹುಟ್ಟಡಗಿಸುವೆ. ನೀವುಗೆ ರಕ್ಷಣೆ ಕೊಟ್ಟವೆ. ನಮ್ಮ ಆಡಳಿತ ಭಾರಿ ದಯಾಳು. ನಿಮ್ಮನೆಲ್ಲ ಕೂಸುನಂಗೆ ನೋಡಿಕಂಡವೆ.

* * * * *

ದೇಶನ ಸ್ವತಂತ್ರ ಮಾಡಿಕೆ ಹೋರಾಡ್ದ ಅಪರಾಧಕ್ಕೆ (ಗಲ್ಲು) ದೇಹಾಂತ ಶಿಕ್ಷೆ. ಸೈನಿಕರ್ ಕಲ್ಯಾಣಸ್ವಾಮಿನ, ಬಂಗರಾಜನ ಒಂದು ಬೊಳ್ಪಿಗೆ ಕರ್ಕಂಡ್ ಹೋಕೆ ಬಂದೊ.

ರಾಮಗೌಡ ಕೇಳ್ತ್:

"ನಾವುಗು ಇಂದೇ ಸದ್ಗತಿ ತೋರ್‍ಸಿ"

ಉತ್ತರ ಬಾತ್.

ಇಲ್ಲೆ, ನಿಮ್ಮ ಸರದಿ ನಾಳೆ.

ಗೌಡ ಕಲ್ಯಾಣಸ್ವಾಮಿಗೆ ಹೇಳ್ತ್: ಕೊನೆವರೆಗೆಸ ನಿಮ್ಮೊಟ್ಟಿಗೆ ಇರೊಕುಂತ ಒಂದ್ ಆಸೆ ಇತ್ತ್ ಸ್ವಾಮಿಯವೆ.

ಉತ್ತರ ಹೇಳಿಕೆ ಆಗದೆ ಕಲ್ಯಾಣಸ್ವಾಮಿನ ಗಂಟ್ಲ್‌ಲಿ ಅಳ್ಗೆಲ್ ಬಾತ್. ಕಣ್ಣೀರು ತುಂಬದಂಗೆ ಕಣ್ಣುಗಳ ನಿಲ್ಸಿತ್.

ರಾಮಗೌಡನೇ ಹೇಳ್ತ್.

"ಹೋಗಲಿ ಬುಡಿ–ಇಂದಲ್ಲರೆ ನಾಳೆ. ಅಲ್ಲಿಯಾದ್ರ್ ಒಟ್ಟಿಗೆ ಆದವೆ!"

...ಊರ್ ಎಚ್ಚರಾಕೆ ಮುಂದೆನೆ ಆ ವೀರರಿಬ್ಬರ ಸೈನಿಕರ್ ಬಲನಾಡ ಕಾವಲ್‌ಲಿ ಊರ್‍ನ ಹೊರಗೆ ಬಿಕ್ರನಕಟ್ಟೆಗೆ ಕರ್‍ಕಂಡ್ ಹೋದೋ.

ಶಿಕ್ಷೆ ಕೊಡಿಕೆ ಅವು ಮಾಡ್ತಿದ್ದ ತಯಾರಿಗಳ ಕಲ್ಯಾಣಸ್ವಾಮಿ ನೋಡಿಕಂಡ್ ನಿಂತತ್. ಗುಂಡು ತಾಗಿ ಅವನ ಬಲಕೈ ನೇತಾಡಿಕಂಡಿದ್ದರು ಹೆಗಲ್ ಹಂಗೆ ಇತ್ತ್. ಆ ತಲೆ ಬಾಗಿತ್ಲೆ ಯಾರ ಎದುರಿಗೆಸ.

ಮೆದುಳು ಯಾಗೊಳುನಂಗೆ ಚುರುಕುಲಿ ಇತ್ತ್. ಈ ಸಲದ ಯುದ್ಧ ಮುಗ್ದ ಕೂಡ್ಲೆ ಯಾಗೊಳು ಒಟ್ಟಿಗೆನೆ ಇರೊಕುಂತ ಗಿರಿಜಾ ಹೇಳಿತ್ತ್. ಹುಚ್ಚು ಗೂಡೆ! ಇನ್ನ್ ಆ ಅಮ್ಮ...

ಆ ಯೋಚನೆನ ಬದಿಗಿಟ್ಟ್ ಒಮ್ಮೆಗೆ ಕಲ್ಯಾಣಸ್ವಾಮಿ ಚೆಟ್ಟಿ ಕರ್ತುನ ನೆನ್ಪಿಸಿಕಣ್ತ್.

ಗೆಲ್ಲುದು–ಸೋಲ್ದು–ವೀರರಾಜೇಂದ್ರನತ್ರ ಧೂತರ ಕಳ್ಸಿತ್ತ್ ಅವರ ಕರ್‍ಕಂಡ್ ಬಾಕೆ. ಈಗ ಈ ಗತಿ. ಸಧ್ಯ ಅವು ಹೊರಡದಿದ್ದರೆ ಸಾಕ್ ಅಪಾಯ ಆಗದಿದ್ದರೆ ಸಾಕ್...

ದೇಶದ ಸ್ವಾತಂತ್ರ್ಯ ತಕಣಕು ಎಂಬ ಆಸೆ ಆಸೆಯಾಗಿನೆ ಉಳ್ತ್ ಕೊನೆಗೆಸ...

ತಬ್ಬಿಕೆಸ ಆಗದ ಮರದ ಗೆಲ್ಲ್‌ಗೆ ಎರ್ಡ್ ಉರ್‍ಳ್‌ಗಳ ನೇತ್ ಹಾಕಿದ್ದೊ. ಕೆಳಗೊಂದು ಮಣೆ ಇತ್ತು ಸುತ್ತ ಸೈನಿಕರ್ ನಿಂತಿದ್ದೊ.

ಹರ್ಕು ಮುರ್ಕು ಹಿಂದೂಸ್ಥಾನಿಲಿ ಆ ಸೈನ್ಯಾಧಿಪತಿ ಕಿರ್‍ಚಿತ್

ಹತ್ತ್‌ಸಿ ಮೇಲೆ! ಸ್ವಾತಂತ್ರ್ಯದ ರುಚಿ ನೋಡಲಿ! ಸೈನಿಕರ್ ಒತ್ತಾಯ ಮಾಡ್ವ ಮುಂದೆನೆ ಕಲ್ಯಾಣಸ್ವಾಮಿನು ಬಂಗರಾಜನು ತಾವಾಗಿಯೇ ಅಟ್ಟಣಿಗೆ ಹತ್ತಿದೊ.

ಬಂಗರಾಜನ ಮೋರೆಲಿ ನೆಗೆ ಬಾದರ ನೋಡಿ ಸಮಧಾನಂದ ಕಲ್ಯಾಣಸ್ವಾಮಿ ಹೇಳ್ತ್: ಖುಷಿಲಿ ಒಳರಿ.

"ಹಿಂದೆ ಒಂದ್ ಮಾತ್ ಹೇಳಿದ್ದರಿ. ನಿಮ್ಮಂಥವರೊಟ್ಟಿಗೆ ಹೆಗ್‌ಲ್‌ಗೆ ಹೆಗ್‌ಲ್ ಕೊಟ್ಟು ಹೋರಾಡ್ದು ಭಾಗ್ಯಂತ ಹೇಳಿ ನೆಂಪುಟ್ಟಾ ಈಗ.."

"ಅಣ್ಣ"

ನಿಮ್ಮೊಟ್ಟಿಗೆ ಹಿಂಗೆ ಪ್ರಾಣ ಬುಡ್ದುಸ ನನ್ನ ಭಾಗ್ಯ ಅಂತ ತಿಳ್ಕಣಿ. ಉತ್ತರ ಕೊಡಿಕೆ ಆಗದೆ ಕಲ್ಯಾಣಸ್ವಾಮಿ ತುಟಿಗಳ ಗಟ್ಟಿಲಿ ಕಚ್ಚಿಕಣ್ತ್. ಅವನ ಕಣ್ಣ್‌ಲಿ

ನೀರ್ ತುಂಬಿತ್.

ಕುತ್ತಿಗೆನ ಸುತ್ತ್‌ಹಾಕಿತ್ ಉರ್ಳ್‌ಗ.

"ಅಟ್ಟಣಿಗೆ ತೆಗ್ಯ"

ಮುಷ್ಠಿ ಹಿಡ್ದ್, ಏನೋ ಹೇಳೊಕುಂತ ಕಲ್ಯಾಣಸ್ವಾಮಿ ಬಾಯಿ ತೆಗ್ತ್. ಆದರೆ ಒಮ್ಮೆಲೆ ಕಾಲಡಿನ ಆಧಾರ ತಪ್ಪಿತ್. ದೇಹ ತೂಗಾಡ್ತ್. ಉರುಲು ಗಟ್ಟಿಯಾಕಂಡ್ ಹೋದ ಹಂಗೆ ಉಸ್ರು ಕಟ್ಟಿತ್. ಸಂಕಟದ ಜೀವ ಪುಡೆರ್ತ್. ಕೆಳಗೆ ನಿತ್ತವರ ಕಾಲ್‌ಲಿ ಒದಿವಂಗೆ ಒದಿತ್ತಿತ್ತ್.

ಮೆದುಳು ಏನು ಮಾಡಿಕಾಗದ ಪರಿಸ್ಥಿತಿಲಿ ಇತ್ತ್. ಗುಂಡಿ ಎಷ್ಟುಟ್ಟು ಅಂತ ಗೊತ್ತಿಲ್ಲದ ಗುಹೆ ಒಳಗೆ ಒಂದೇ ಸಮ ಇಳ್ದಂಗೆ ಕಲ್ಯಾಣಸ್ವಾಮಿಗೆ ಕೇಳ್ತ್ ಅಮ್ಮನ ಸ್ವರ.

ಬಂದಿಯಾ ಪುಟ್ಟ ಬಸ್ಯಾ? ಬಂದಿಯಾ ಮಂಜ? ಉತ್ತರ ಹೇಳ್ದಂಗೆ ತುಟಿಗ ಓಟಾಡ್ದೊ. ಕೇಳದ ಶಬ್ದಗ ಗಾಳಿನೊಟ್ಟಿಗೆ ಲೀನ ಆತ್.

"ಸ್ವಾತಂತ್ರ್ಯ ಸೇನೆಗೆ ಜಯ ಆಗಲಿ ಅಮ್ಮ".

## ೨೭

ಕಾಡ್‌ನ ಶವಕ್ಕೆ ಕರ್ಕುಟ್ಟಿ ಕತ್ತಲೆ ಬಟ್ಟೆ ಹಾಕಿತ್ತ್. ಅಂದ್ ಅಮವಾಸ್ಯೆ. ದಪ್ಪಲಿ ಕಪ್ಪು ಮೋಡಗಳಂದ ತುಂಬಿ ಹೋಗಿತ್ತ್ ಆಕಾಶ. ಈಗಲೇ ಮತ್ತೆನೋ ಮಳೆ ಸುರ್ದದೆ ಅನ್ನುವ ಹಂಗೆ.

ಗಂಗವ್ವ ಅಜ್ಜಿ ಮಾಲಿಕಂಡ್ ಎಡ್ಗಿಕಂಡ್ ತಬ್ಬುರ್ಸಿಕಂಡ್ ಹೊರಬಾಗ್‌ಲಿಗೆ ಬಾತ್. ಚಿಂಟೆ ಮೇಲೆ ಕುದ್ದತ್. ಕುರುಡು ಕಣ್ಣ್‌ಗಳ್‌ಂದ ಏನೂಸ ಕಾಣದ ಕತ್ತಲೆನ ಕುತ್ತುವಂಗೆ ನೋಡ್ತಿತ್ತ್.

ಹಂಗೆ ನೋಡಿ ಬೊಚ್ಚಿಕಾನ ದೊಡ್ಡದಾಗಿ ಉಸಿರೆಳ್ದ್‌ಕಣ್ತ್. ಹೃದಯದ ಬೇನೆ ಯಾಗೊಳುನಂಗೆ ಬಾಯಿಲಿ ಬಾತ್.

"ಪುಟ್ಟಬಸ್ಯಾ ಬಾತ್ಲೆನಾ–ಬಾತ್ಲೆನಾ ಪುಟ್ಟ ಬಸ್ಯಾ.."

ಗಿರಿಜವ್ವ ಹತ್ರ ಬಾತ್.

"ಮಲ್ಕಣಿ ಅತ್ತೆಮ್ಮ, ರಾತ್ರಿ ಬಾಳ ಹೊತ್ತಾತ್"

"ಏನ್ ಕತ್ತಲೆನೋ, ಏನ್ ಹೊತ್ತಾರೆನೋ"

ಎಷ್ಟು ಹೊತ್ತುಂತ ಕುದ್ದುರ್ದು ಅತ್ತೆಮ್ಮ?

ಸಂಕಟ ಪಟ್ಕಂಡ್ ಹಂಞಾ ಹೊತ್ತು ಸುಮ್ಮನಿದ್ದ ಗಂಗವ್ವ ಹೇಳ್ತ್ : "ಇಂದ್ ಹುಣ್ಣಿಮೆ ಅಲ?

"ಅಲ್ಲ ಅತ್ತೆ"

"ಹಂಗೆನಾ? ಹುಣ್ಣಿಮೆಂತ ನೆನ್ಸಿದೆ. ಅಯ್ಯೋ...

"ಕಣ್ಣು ಮುಚ್ಚಿಕೆ ಆಗದಂಗೆ ಸಿಡ್ಲ್, ಚಟ ಪಟ ಸದ್ದ್.

"ಗಿರಿಜಾ ಅದೇನ್ ಸದ್ದ್? ಮಳೆ ಬರುವಂಗೆ ಉಟ್ಟಾ?

"ಹೂಂ ಅತ್ತೆ"

"ಮಳೆಲಿ ಬಾದು ಕಷ್ಟ"

"ಮೌನನ ಮತ್ತೆ ಅತ್ತೆನೆ ಮುರ್ತ್"

"ಅಲ್ಲಾ ಒಬ್ಬ ಆದ್ರ್ ಬಾದಲ ಈ ದಾರಿಲಿ? ಒಂದು ಸುದ್ದಿನಾದ್ರ್ ಕಳ್ಸಕಾಯ್ತುಲ? ಹಿಂಗೂ ಮಾಡ್ದೊ ಶಿವಾ?"

ಒಂದೇ ಹಾಡು ಯಾಗೊಳು. ಇದೊಂದೇ ಹಾಡ್.

ಗಿರಿಜಾ ಬಸ್‌ರ್‌ಲಿ ಪುಟ್ಟ ಬಸವನ ಕೂಸುನ ಹೊತ್ತಿತ್ತ್. ಹೃದಯಲಿ ಹೇಳಿಕಾಗದ ಬೇನೆನನು.

ಹಂಞಾ ಹೊತ್ತುನ ಹಿಂದೆ ಸುದ್ದಿ ಕೇಳ್ದ್ ಅವಳೊಬ್ಬಳೆ ಅತ್ತೆ ಅಲ್ಲ. ಆಗ ಸಾಯಕುಂತ ನೆನ್ಸಿಕಣ್ತ್ ಅವ್ಳು ನೇಣ್ ಹಾಕಿಕಂಡ್. ಆದರೆ ಅವ್ಳ ಹೊಟ್ಟೆಲ್ಲಿತ್ತ್ ವಂಶವೃಕ್ಷದ ಕೂಸು. ತನ್ನೊಟ್ಟಿಗೆ ಅದೆರಸ ಜಿಂಟಿ ಹಾಕುವ ಮನಸ್ಸಾತ್ಲೆ ಆ ಜೀವಕ್ಕೆ.

ಅವಳೇನ್ ಸಾಯದೆ ಉಳ್ತ್. ಆದರೆ ಅತ್ತೆ ನಿಜ ಸಂಗತಿ ಹೇಳಿಕಾನ ಎದೆ ಒಡ್ದ್ ಸಾಯಕಿಲ್ಲೆಂತ ಹೆಂಗೆ ಹೇಳ್ದು?

ಹಣೆಂದ ಕುಂಕುಮನ ಗಿರಿಜಾ ಉಜ್ಜಿ ತೆಗ್ತ್. ಆ ವಿಷಯ ಕಣ್ಣ್ ಕಾಣದ ಅಜ್ಜಿಗೆ ಗೊತ್ತಾಗುವಂಗಿಲ್ಲೆ.

ಎಷ್ಟ್ ಕೆಟ್ಟ ಸುದ್ದಿ! ಅವ್ಳು ಸುಮಾರ್ ದಿನ ನಂಬಿತ್ಲೆ. ಆದರೆ ಒಬ್ಬೊಬ್ಬನೇ ಆ ಹಳ್ಳಿಯವು, ಬದ್ಕಿ ಉಳ್ದವು ಊರಿಗೆ ಬಾಕನ ನಂಬಕಾಯ್ತ್. ಎಲ್ಲವು ಅದೇ ಸುದ್ದಿನ ಹೇಳ್ತಿದ್ದೊ.

ಸೋಮಯ್ಯನು ಬಾತ್ಲೆ. ಕರಿಯಪ್ಪನು ಬಾತ್ಲೆ. ಒಟ್ಟು ಹದಿನಾಲ್ಕ್ ಜನಕ್ಕೆ ಗಲ್ಲಾತ್‌ಗಡ.

ಚೆಟ್ಟಿನ ಕರ್ತುನ ದೋಣಿಲಿ ತುಂಬಿ, ದೂರಲಿರುವ ಸಿಂಗಾಪುರಂತೇಳುವ

ಊರಿಗೆ ಕರ್ಕಂಡ್ ಹೊಗ್ಯೊಳಗಡ.

ನಾ ನೋಡ್ದ ಚನ್ನಯ್ಯ, ರಾಮಗೌಡ ಎಲ್ಲರಸ ಕೊಂದೇ ಹಾಕ್ಯೊಳ.

ಇನ್ನೆಷ್ಟೋ ಜನಕ್ಕೆ ಎಷ್ಟೋ ವರ್ಷ ಕೂಡಿಹಾಕಂಡೆ ಇದ್ದವೆಗಡ.

ಅಯ್ಯೋ ಹಿಂಗು ಆಕಾಯ್ತು? ಇಂಥ ಶಿಕ್ಷೆನ ದೇವ್ರು ಕೊಡಕಾಯ್ತು? ಎಂತ ತಪ್ಪಿಗೆಂತ ಈ ದಂಡ? ಇಂಥ ಶಿಕ್ಷೆನ ದೇವ್ರು ಕೊಡಕಾಯ್ತು? ಎಂತ ತಪ್ಪಿಗೆಂತ ಈ ದಂಡ?

...ಬಸ್ರ್‌ಲಿದ್ದ ಕೂಸು ಗಂಡೇ. ಪುಟ್ಟಬಸವನಂತ ವೀರಂಗೆ ಗಂಡ್ ಕೂಸೆ ಆದೊರ್ಲ್ಲಿ ಸಂಶಯ ಇಲ್ಲೆ. ಈ ಜೀವಕ್ಕೆ ಬೇಕಾಗಿ ನಾನ್ ಬದ್ಕುದು.

ಪುಟ್ಟ ಬಸ್ಯ ಸತ್ತದರ ಅತ್ತೆಗೆ ಹೇಳ್ದೇ ಇಲ್ಲೆಂತ ನಿರ್ಧಾರ ಮಾಡಿಟು ಗಿರಿಜ. ಬೇರೆಯವರಂದ ಅಜ್ಜಿಗೆ ಏನುಸ ಗೊತ್ತಾಗದಂಗೆ ನೋಡಿಕಣ್ತ್.

ಗಂಗವ್ವಂಗೆ ಯೋಚನೆಗ ತುಂಡು ತುಂಡಾಗಿ ಬರ್ತಿತ್ತ್. ಒಂದಕ್ಕೊಂದು ಸಂಬಂಧ ಇತ್ಲೆ. ಮೂರು ತಿಂಗಳ ಮೇಲಾತ್ ಮಂಜ ಹೋಗಿ ಇನ್ನೂ ಬಾತ್ಲೆಂತ ಹೇಳ್ರೇ?

ಮನೆಲಿ ಹೆಣ್ಣ್ ಬಸ್‌ರಿಂತ ಗ್ಯಾನಸ ಇಲ್ಲೆನಾ? ಮಂಜನ ವಿಷಯಲಿ ನೋಡಿಕೆ ಅಂಬೆರ್ಪುಸ ಇತ್. ಎಲ್ಲಿಟ್ಟೋ? ಉಂಡದೆನಾ? ಇಲ್ಲೆನಾ?

ಬಸ್ರಿ ಸೊಸೆನ ನೆಂಪಾದಂಗೆ ಹೇಳ್ತಿತ್ತ್.

ಬೆಚ್ಚಂಗೆ ಕಂಬುಳಿ ಗುಡಿ ಹೊದ್ದ್ ಮಲ್ಗ್ ಗಿರಿಜಾ. ಮಳೆಲಿ ಹಂಗೆ ಕುದ್ರ್‌ಬೇಡ.

...ಇರ್ಲ್ ದಿನಾ ಬಾಗ್‌ಲ ಹತ್ರ ಕುದ್ದ್ ದಿನಾ ಇದೇ ಹಾಡ್ ಹೇಳ್ದ ಮೇಲೆ ನಿದ್ದೆಗೆ ಜಾರ್ದೆ.

ಅತ್ತೆನತ್ರ ಕುದ್ದ ಗಿರಿಜಾ ಮಡೆ ನುಂಗಿ ಮೆಲ್ಲ ಹೇಳ್ತ್.

"ಏಳಿ ಅತ್ತೆ, ಮಲ್ಕಣಿ, ಇರ್ಲ್ ಸುಮಾರ್ ಹೊತ್ತಾತ್".

ಗಂಗವ್ವ ಹೇಳ್ತ್ : ನಡಿ ಕೂಸು, ಒಳಗೆ ಪೋಯಿ. ಸೊಸೆ ಎದ್ದ್ ನಿಂತ್, ಅತ್ತೆನ ಕರ್ಕಂಡ್ ಒಳಗೆ ಹೋತ್. ನೆಲದ ಜವುಗು ತಾಗುದು ಬೇಡಾಂತ ಒಣ ಹುಲ್ಲುನ ಮೇಲೆ ಹಾಸಿದ ಚಾಪೆಗ ಅವರ್ನೆ ಕಾಯ್ತಿತ್ತ್. ಕೆಂಡ ಇಲ್ಲದೆ ಖಾಲಿ ಅಗ್ಗಿಷ್ಟಿಕೆ ನೊಡು ಕೋಂಬ್ರೆಲಿತ್ತ್.

ಮಲ್ಗಿಕಂಡ್ ಅತ್ತೆ ಹೇಳ್ತ್ : "ಇಂದ್ ಅಮವಾಸ್ಯೆ. ಇನ್ನ್ ಮೇಲೆ ಬರ್ವ ಹುಣ್ಣಿಮೆ ದಿನ ಪುಟ್ಟ ಬಸ್ಯಾ ಊರಿಗೆ ಬಾದು ಅಲಾ?"

ಹೂಂ ಅತ್ತೆ, ಗಿರಿಜಾ ಹೇಳ್ತ್.

ಆದರೆ ತನ್ನ ಸ್ವಾಮಿ ಇನ್ಮುಂದೆ ಬಾದೇ ಇಲ್ಲೇಂತ ಅವ್ವಿಗೆ ಗೊತ್ತಿತ್ತ್. ದೇಶದ ಸ್ವಾತಂತ್ರ್ಯಕ್ಕಾಗಿ, ಜನರ ಉದ್ಧಾರಕ್ಕೆ ದೇಹಕೊಟ್ಟು ಆ ಸ್ವಾಮಿ ಬಾರದ ಊರಿಗೆ ಹೋಗಿಟುಂತ ಗಿರಿಜೆಗೆ ಗೊತ್ತಿತ್ತ್.

* * * * *



# ಬೆನ್ನುಡಿ

ಶ್ರೀಮತಿ ಸಂಗೀತ ರವಿರಾಜ್‌ನವ್ ಎಂ.ಎ., ಬಿ.ಇಡಿ. ಪದವೀಧರೆ. ಚೆಂಬು ಗ್ರಾಮದ ಕೃಷಿಕ ಕುಟುಂಬಕ್ಕೆ ಸೇರ್ದ ಹೊಸೂರು ಶ್ರೀ ರವಿರಾಜ್‌ನವರ ಹೆಣ್ಣ್. ಸಂಗೀತನವು ಗೃಹಿಣಿಯಾಗಿದ್ದ್‌ಕಂಡ್ ಕೃಷಿ ಕೆಲ್ಸ ಮಾಡಿಕಂಡ್ ಬರವಣಿಗೆಗಾಗಿ ಸಮೆನ ಹೊಂದಿಸಿಕಂಡ್ ಕತೆ, ಕವನ, ಲೇಖನ, ವಿಮರ್ಶೆ ಬರೆವ ಹವ್ಯಾಸನ ಇಸಿಕಂಡವು. ಇವ್ ಕನ್ನಡಲಿ 'ಉಡುಗೊರೆ', 'ನನ್ನೊಡಲ ಮಿಹಿರ'ತ್ತೇಳುವ ಕವನ ಸಂಕಲನಗಳ ಲೋಕಾರ್ಪಣೆ ಮಾಡ್ಯೊಳೊ. ಇವರ 'ಕಪ್ಪು ಹುಡುಗಿ'ತ್ತೇಳುವ ಪ್ರಬಂಧ ಸಂಕಲನಕ್ಕೆ 'ಕೊಡಗ್‌ನ ಗೌರಮ್ಮ ದತ್ತಿ ನಿಧಿ' ಪ್ರಶಸ್ತಿ ಸಿಕ್ಕುಟು.

ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ಮೈಸೂರು ದಸರಾ ಕವಿಗೋಷ್ಠಿ ಸೇರ್ದಂಗೆ ರಾಜ್ಯ ಮಟ್ಟದ ಕವಿಗೋಷ್ಠಿಲಿ ಕವನ ಓದಿಯೊಳೊ. ಮಡಿಕೇರಿ ಆಕಾಶವಾಣಿಲಿ ಇವರ ಸಂದರ್ಶನ ಮತ್ತೆ ಬೇರೆ ಬೇರೆ ಕಾರ್ಯಕ್ರಮಗ ಪ್ರಸಾರ ಆಗೊಳೊ. ಇವರ ಕೆಲವು ಕವನಗ ಮಲಯಾಳಂ ಮತ್ತೆ ಇಂಗ್ಲೀಷ್ ಭಾಷೆಗೆ ಅನುವಾದ ಆಗುಟುತ್ತೇಳಿಕೆ ಕುಸಿ ಆದೆ.

ಮಡಿಕೇರಿ ತಾಲೂಕು ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿನ ಅಧ್ಯಕ್ಷತೆಯ ಗೌರವ ಇವುಕೆ ಸಿಕ್ಕುಟು. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಸದಸ್ಯರಾಗಿ ಸೇವೆ ಸಲ್ಲಿಸಿಯೊಳೊ. ಇಂತಹ ಪ್ರತಿಭಾವಂತೆ ಇದೀಗ ನಿರಂಜನನವ್ ಕನ್ನಡಲಿ ಬರ್ದ 'ಕಲ್ಯಾಣ ಸ್ವಾಮಿತ್ತೇಳುವ ಐತಿಹಾಸಿಕ ಕಾದಂಬರಿನ ತನ್ನದೇ ಕೃತಿತ್ತೇಳುವಂಗೆ ಆಸಕ್ತಿಂದ ಅರೆಭಾಷೆಗೆ ಅನುವಾದ ಮಾಡಿಯೊಳೊ.

ಉತ್ಸಾಹಿ ಸಂಗೀತ ಅವರ್‌ಂದ ಅರೆಭಾಷೆ ಸಾಹಿತ್ಯ ಲೋಕಕ್ಕೆ ಇನ್ನಷ್ಟ್ ಕೊಡುಗೆ ಸಿಕ್ಕಲಿತ ನಾವೆಲ್ಲ ಹಾರೈಸನೊ.

ಶ್ರೀಮತಿ ಸಂಗೀತ ರವಿರಾಜ್‌ನವ್ಕೆ ಶುಭಾಶಯಗ.

**–ಬಾರಿಯಂಡ ಜೋಯಪ್ಪ.**

